ರ್ಮೋದಕೈರ್ಘೃತಪಾಚಿತೈಃ ||೨೦|| ಏಕವಿಂಶತಿ ಸಂಖ್ಯಾನಿ ನಾರಿಕೇಳಫಲಾನ್ಯಪಿ । ರಂಭಾಜಂಭಕಪಿತ್ಥಾಢ್ಯ । ಇಕ್ಷು ಖಂಡಾಂಶ್ಚತಾವತಃ ||೨೧|| ಏವಮನ್ಯಫಲಾ ಪೂಪೈರ್ನೈರ್ವೇದ್ಯಂಕಾರಯೇತ್ಸುತ। ನೃತ್ಯಗೀತೈಶ್ಚವಾದ್ಯೈಶ್ಚ । ಪುರಾಣ ಪಠನಾದಿಭಿಃ ||೨೨|| ತರ್ಪಯೇದ್ಗಣನಾಥಂ ಚ । ವಿಪ್ರಾನ್‌ದಾನೇನ ಶ್ರೋತ್ರಿಯಾನ್। ಬಂಧುಭಿಃ ಸ್ವಜನೈಸಾರ್ಧಂ ಭುಂಜೀಯಾತ್ತೈಲವರ್ಜಿತಂ ಏವಂ ಯಃ ಕುರುತೇಮರ್ತ್ಯೋ ಗಣನಾಥಂ ಪ್ರಸಾದತಃ। ಸಿದ್ಧ್ಯಂತಿಸರ್ವಕಾರ್ಯಾಣಿ ನಾತ್ರಕಾರ್ಯಾ ವಿಚಾರಣಾ|| ತತಃ ಪ್ರಭಾತೇ ವಿಮಲೇ ಪುನಃ ಪೂಜಾಂ ಸಮಾಚರೇತ್ ಮೌಂಜೀಂ ಕೃಷ್ಣಾಜಿನಂ ದಂಡಮುಪವೀತಂ ಕಮಂಡಲುಂ ||೨೩|| ಪರಿದಾ–ನಂತಧಾದದ್ಯಧಾಭವ ಮುತ್ತಮಂ। ಉಪಾಯನಂತತೋದದ್ಯಾತ್ ಆಚಾರ್ಯಾಯ ಸ್ವಶಕ್ತಿತಃ ಅನ್ಯೇಭ್ಯೋದಕ್ಷಿಣಾಂದದ್ಯಾ। ಬ್ರಾಹ್ಮಣಾನ್ ಭೋಜಯೇತ್ತಥಾ ತ್ರೈಲೋಕ್ಯೇ ವಿಶ್ರುತಂಚೈತ|| ದ್ವ್ರತಾನಾಮುತ್ತಮೋತ್ತಮಂ ||೨೭|| ಅನ್ಯೈಶ್ಚ ದೇವಮುನಿಭಿಃ ಗಂಧರ್ವೈಃ ಕಿನ್ನರೈಸ್ತಥಾ। ಚೀರ್ಣಮೇತದ್ವ್ರತಂ ಸರ್ವೈ ಯೋದಿತಂ ಷಡಾನನ ||೨೮|| ಇತಿ ಪುತ್ರಾಯ ಶರ್ವೇಣ ಷಣ್ಮುಖಾ ಪುರಾಕಲ್ಪೇ ಪುರಾ|| ಏವಂ ಕುರುಷ್ವ ಧರ್ಮಜ್ಞ ಗಣನಾಥ ಪ್ರಪೂಜನಂ ||೨೯|| ವಿಜಯಸ್ತೇಭವೇನ್ನಿತ್ಯಂ ಸತ್ಯಂಸತ್ಯಂ ವದಾಮ್ಯಹಂ । ಏತದ್ವ್ರತಂ ಹರಿಶ್ಚಾಪಿ || ದಮಯಂತೀಪುರಾಕರೋತ್ ಕೃಷ್ಣೋಜಾಂಬವತೀವಂಶ ರತ್ನಂಚಾಪಿ ಸ್ಯಮಂತಕಂ || ದಮಯಂತೀನಲಶ್ಚೈವ ವ್ರತಸ್ಯಾಸ್ಯಪ್ರಭಾವತಃ ||೩೦|| ಶಕ್ರೇಣ ಪೂಜಿತಂ ಪೂರ್ವಂ ವೃತ್ರಾಸುರವಧೇ ತಥಾ। ರಾಮದೇವೇನತದ್ವಚ್ಚ ಸೀತಾಯಾಮಾರ್ಗಣೇತಥಾ ಭಗೀರಥೇನ ತದ್ವಚ್ಚಗಂಗಾಮಾನ ಯತಾಪುರಾ ಅಮೃತೋತ್ಪಾದನಾರ್ಥಾಯ ಯಥಾದೇವ ಸುರೈರಪಿ ||೩೩|| ಕುಷ್ಠವ್ಯಾಧಿಯುತೇನಪಿ । ಸಾಂಬೇನಾರಾಧಿತಂ ಪುರ। ಏವಮುಕ್ತಸ್ತು ಸೂತೇನುಸಾನುಜಃ ಪಾಂಡುನಂದನಃ ||೩೪|| ಪೂಜಯಾಮಾದೇವಸ್ಯ ಪುತ್ರಂ ತ್ರಿಪುರಘಾತಿನಃ ಶತ್ರುಸಂಘಂ ನಿಹತ್ಯಾಶು ಪ್ರಾಪ್ತವಾನ್ ರಾಜಮೋಜಸಾ || ಪೂಜಯಿತ್ವಾ ಮಹಾಭಾಗಂ । ಗಣೇಶಂ ಸಿದ್ಧಿದಾಯಕಂ ||೩೫|| ಸಿದ್ಧ್ಯಂತಿ ಸರ್ವಕಾರ್ಯಾಣಿ ಮನಸಾಚಿಂತಿತಾನ್ಯಪಿ । ತೇನಖ್ಯಾತಿಂಗತೋಲೋಕೇ ನಾಮ್ನಾಸಿದ್ಧಿ– ವಿನಾಯಕಃ। ವಿದ್ಯಾರಂಭೇ ಪೂಜಿತಶ್ಚೇತ್ ವಿದ್ಯಾಲಾಭೋ ಭವೇದ್ಧ್ರುವಂ ||೩೬|| ಜಯಂ ಚ ಜಯಕಾಮಶ್ಚ ಪುತ್ರಾರ್ಥೀ ಲಭತೇ ಸುತಾನ್ । ಪತಿಕಾಮಯಾ ಚ ಭರ್ತಾರಂ ಸೌಭಾಗ್ಯಂ ಸುವಾಸಿನೀ ||೩೭|| ವಿಧವಾ ಪೂಜಯಿತ್ವಾತು ವೈಧವ್ಯಂನಾಪ್ನುಯಾತ್ ಕ್ವಚಿತ್ । ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋವಾ ಪೃಥವಾಸ್ತ್ರೀಯಃ ||೩೮|| ಅರ್ಭಕಶ್ಚಾಪಿ ಭಕ್ತ್ಯಾಚ ವ್ರತಂ ಕುರ್ಯಾದ್ಯಥಾ ವಿಧಿಃ ಸಿದ್ಧ್ಯಂತಿ ಸರ್ವಕಾರ್ಯಾಣಿ ಗಣನಾಥ ಪ್ರಸಾದತಃ ||39|| ಪುತ್ರಪೌತ್ರಾಭಿವೃದ್ಧಿಂ ಚ ಗಜಾದ್ಯೈಶ್ವರ್ಯ ಮಾಪ್ನುಯಾತ್||

ಇತಿ ವರಸಿದ್ಧಿ ವಿನಾಯಕ ವ್ರತಕಥಾ ಸಂಪೂರ್ಣಂ

# ವರಸಿದ್ಧಿ ವಿನಾಯಕ ವ್ರತಕಥಾರ್ಥವು

ಪೂರ್ವಕಾಲದಲ್ಲಿ ಚಂದ್ರವಂಶದ ದೊರೆಗಳಲ್ಲಿ ಪ್ರಸಿದ್ಧನಾದ ಧರ್ಮರಾಯನು ರಾಜ್ಯಭಾರವನ್ನು ಮಾಡುತ್ತಿದ್ದನು. ಆತನಿಗೆ ಗ್ರಹಚಾರಕಾಲವು ಪ್ರಾಪ್ತವಾಗಿ ರಾಜ್ಯಾದಿ ಸಕಲೈಶ್ವರ್ಯಗಳನ್ನೂ ಜ್ಞಾತಿಯಾದ ದುರ್ಯೋಧನನು ಅಪಹರಿಸಲು ಧರ್ಮರಾಯನು ತಮ್ಮಂದಿರೊಡನೆಯೂ, ಪತ್ನಿಯೊಡನೆಯೂ ಅನೇಕ ವೃಕ್ಷಗಳಿಂದಲೂ, ವ್ಯಾಘ್ರ ಭಲ್ಲೂಕಾದಿ ದುಷ್ಟಮೃಗಗಳಿಂದಲೂ ತುಂಬಿದ ಮಹಾರಣ್ಯಕ್ಕೆ ಹೋದನು. ಅಲ್ಲಿ ಬ್ರಹ್ಮವೇತ್ತರಾದ ಮಹಾಋಷಿಗಳು ಅಲ್ಲಲ್ಲಿ ಕುಳಿತು ತಪಸ್ಸನ್ನು ಮಾಡುತ್ತಿದ್ದರು. ತಮ್ಮ ತಪಃಪ್ರಭಾವದಿಂದ ಅವರು ಸ್ವಯಂಪ್ರಕಾಶರಂತೆ ಹೊಳೆಯುತ್ತಿದ್ದರು. ಇವರಿಗೆ ಗಾಳಿ, ನೀರು, ತರಗೆಲೆಗಳೇ ಆಹಾರ. ಸದಾಕಾಲದಲ್ಲಿಯೂ ಅಗ್ನಿಹೋತ್ರಗಳನ್ನೇ ಆಚರಿಸತಕ್ಕವರು. ಅತಿಥಿಗಳನ್ನು ವಿಶೇಷವಾಗಿ ಸತ್ಕರಿಸುವ ಸ್ವಭಾವವುಳ್ಳವರು. ನಿರಾಧಾರದಿಂದ ಭೂಮಿಯಿಂದ ಮೇಲೆ ಕುಳಿತು ಕೈಗಳನ್ನು ಜೋಡಿಸಿಕೊಂಡು ತಪಸ್ಸನ್ನು ಮಾಡತಕ್ಕವರು.

ಇಂತಹ ಮಹಾಋಷಿಗಳನ್ನು ನೋಡಿದ ಕೂಡಲೇ ಆನಂದ ಪರವಶರಾದ ಧರ್ಮರಾಯನು ಅವರ ಬಳಿಗೈದು ತಮ್ಮಂದಿರೊಡನೆಯೂ, ಪತ್ನಿಯೊಡನೆಯೂ ಅವರಿಗೆ ಸಾಷ್ಟಾಂಗ ದಂಡ ಪ್ರಾಣಾಮವನ್ನು ಮಾಡಿ ಅಂಜಲೀಬದ್ಧನಾಗಿರಲು, ಋಷಿಗಳು ಈತನನ್ನು ನೋಡಿ ಆದರಿಸಿ ಕುಳಿತುಕೊಳ್ಳುವಂತೆ ಹೇಳಿದ ಆ ಮಾತನ್ನು ಕೇಳಿ ಧರ್ಮರಾಜನು ಕುಳಿತುಕೊಂಡನು. ಧರ್ಮರಾಜನು ಮುನಿವರ್ಯರಾದ ಸೂತರನ್ನು ಕುರಿತು ಹೀಗೆಂದು ಪ್ರಾರ್ಥಿಸಿದನು. ಸಕಲ ಶಾಸ್ತ್ರಗಳಲ್ಲಿಯೂ ಪರಿಶ್ರಮವನ್ನು ಪಡೆದಿರುವ ಓ ಸೂತ ಮಹಾಮುನಿಯೇ ! ನಮ್ಮ ಜ್ಞಾತಿಗಳಾದ ಕೌರವರು ನಮ್ಮೊಡನೆ ಮಾಯಾದ್ಯೂತವನ್ನು ಕಲ್ಪಿಸಿ,ನಮ್ಮ ರಾಜ್ಯಾದಿ ಸಕಲೈಶ್ವರ್ಯಗಳನ್ನು ಅಪಹರಿಸಿದರು. ಇಷ್ಟೇ ಅಲ್ಲದೆ ಅನುಜರೊಡನೆಯೂ, ಭಾರ್ಯೆಯೊಡನೆಯೂ ನನ್ನನ್ನು ಅನೇಕ ವಿಧಗಳಿಂದ ಅವಮಾನಗೊಳಿಸಿ, ಸಹಿಸಲಾರದ ತೊಂದರೆಗಳನ್ನೆಲ್ಲಾ ಉಂಟುಮಾಡಿ ಈ ಅರಣ್ಯಕ್ಕೆ ಕಳುಹಿಸಿದರು. ಈ ರೀತಿಯಾದ ಅವಸ್ಥೆಗಳನ್ನೆಲ್ಲಾ ಪಟ್ಟಿದ್ದರೂ ನನಗೆ ತಮ್ಮ ದರ್ಶನ ಮಾತ್ರದಿಂದಲೇ ದುಃಖಗಳೆಲ್ಲವೂ ನಾಶವಾದವು. ದಯಾನಿಧಿಯಾದ ಓ ಮಹಾತ್ಮನೇ ! ನಮ್ಮ ದುರಿತಗಳೆಲ್ಲವೂ ನಾಶವಾಗುವಂತೆಯೂ, ನಮ್ಮ ರಾಜ್ಯವು ಪುನಃ ನಮಗೆ ಲಭಿಸುವಂತೆಯೂ. ಒಂದು ವ್ರತವನ್ನು ಅನುಗ್ರಹಿಸಬೇಕೆಂದು ಧರ್ಮರಾಯನು ಸೂತ ಮಹಾಋಷಿಯನ್ನು ಕೇಳಿಕೊಳ್ಳಲಾಗಿ, ಸೂತರು ಈ ರೀತಿ ಹೇಳಲು ಆರಂಭಿಸಿದರು. ಎಲೈ ಪಾಂಡವರೇ ! ನೀವೆಲ್ಲರೂ ಕೇಳಿ; ವ್ರತಗಳಲ್ಲೆಲ್ಲಾ ಮಹಾಶ್ರೇಷ್ಠವಾದ ವ್ರತ ವೊಂದಿರುವುದು. ಆ ವ್ರತವು ಮನುಷ್ಯನಿಗೆ ಐಶ್ವರ್ಯವನ್ನೂ, ಸೌಖ್ಯವನ್ನೂ ವೃದ್ಧಿಪಡಿಸ ತಕ್ಕದ್ದು. ಸಕಲ ವಿಧವಾದ ಪಾಪಗಳನ್ನೂ ಪರಿಹಾರ ಮಾಡತಕ್ಕದ್ದು. ಪುತ್ರಪೌತ್ರಾದಿ ಅಭಿವೃದ್ಧಿ ಉಂಟುಮಾಡತಕ್ಕದ್ದು. ಓ ಪಾಂಡುನಂದನರೇ! ಆದಿಯಲ್ಲಿ ಈ ವ್ರತವನ್ನು

ಪರಮೇಶ್ವರನು ಕುಮಾರಸ್ವಾಮಿಗೆ ತಿಳಿಸಿದನು. ಆ ಕುಮಾರಸ್ವಾಮಿಗೆ ಪರಮೇಶ್ವರನು ವ್ರತವಿಧಾನವನ್ನು ಯಾವ ರೀತಿ ತಿಳಿಸಿದ ನೆಂಬುದನ್ನು ಈಗ ನಿಮಗೆ ತಿಳಿಸುತ್ತೇನೆ ಕೇಳಿ.

ಸಕಲ ಋಷಿಗಣಕ್ಕೂ ನೆಲೆಯಾದ ಅತ್ಯಂತ ರಮ್ಯವಾದ ಕೈಲಾಸಶಿಖರದಲ್ಲಿ ನವರತ್ನಗಳಿಂದ ಕೆತ್ತಲ್ಪಟ್ಟ ಕಲ್ಪವೃಕ್ಷದ ಕೆಳಗೆ ಬಂಗಾರದ ಸಿಂಹಾಸನದ ಮೇಲೆ ಪ್ರಪಂಚವನ್ನೆಲ್ಲಾ ಪರಿಪಾಲಿಸತಕ್ಕ ಈಶ್ವರನು ಕುಳಿತಿರಲಾಗಿ ಕುಮಾರಸ್ವಾಮಿಯು ಪ್ರಪಂಚಕ್ಕೆ ಉಪಕಾರವನ್ನು ಮಾಡಬೇಕೆಂಬ ಸಂಕಲ್ಪಯುತನಾಗಿ ತಂದೆಯನ್ನು ಕುರಿತು, ಓ ಮಹಾನುಭಾವ ! ಪ್ರಪಂಚಕ್ಕೆಲ್ಲಾ ಅತ್ಯಂತ ಉಪಯುಕ್ತವಾದ ಮತ್ತು ಧನಧಾನ್ಯ ಐಶ್ವರ್ಯಗಳನ್ನೂ, ಪುತ್ರಪೌತ್ರಸಂಪದವನ್ನೂ ಕೊಡತಕ್ಕ ಒಂದು ವ್ರತವನ್ನು ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥಿಸಿಕೊಳ್ಳಲು, ಈಶ್ವರನು ಸಂತುಷ್ಟನಾಗಿ ಇಂತೆಂದನು :–

ಎಲೈ ಮಗನೇ ! ಸಕಲ ಸಂಪತ್ತುಗಳನ್ನೂ, ದೀರ್ಘಾಯುಷ್ಯವನ್ನೂ, ಇಷ್ಟಾರ್ಥ ಗಳನ್ನೂ ಕೊಡತಕ್ಕ ವಿನಾಯಕಪೂಜೆಯೆಂಬ ಒಂದು ವ್ರತವುಂಟು, ಆ ವ್ರತವನ್ನು ಭಾದ್ರಪದ ಶುಕ್ಲ ಚತುರ್ಥಿಯ ದಿನ ಆಚರಿಸಬೇಕು.

ವ್ರತಾಚರಣೆಯ ದಿನ ಅರುಣೋದಯಕ್ಕೆದ್ದು ತನ್ನ ನೈಮಿತ್ತಿಕ ಕರ್ಮಗಳಾದ ಸ್ನಾನ, ಜಪ, ತಪಾನುಷ್ಠಾನಗಳನ್ನು ನಿರ್ವರ್ತಿಸಿ ದ್ರವ್ಯಲೋಭವಿಲ್ಲದೆ ಬೆಳ್ಳಿಯಿಂದಾಗಲೀ, ಬಂಗಾರದಿಂದಾಗಲೀ ಅಥವಾ ಮಣ್ಣಿನಿಂದಾಗಲೀ ವಿನಾಯಕನ ಪ್ರತಿಮೆಯನ್ನು ಮಾಡಿ ತನ್ನ ಮನೆಯ ಉತ್ತರಭಾಗದಲ್ಲಿ ಒಂದು ಮಂಟಪವನ್ನು ನಿರ್ಮಿಸಿ ಅದರ ಮಧ್ಯಪ್ರದೇಶದಲ್ಲಿ ಎಂಟು ದಳಗಳಿಂದ ಕೂಡಿದ ಪದ್ಮವನ್ನು ಗೋಧುಮೆ ಕಾಳಿನಿಂದಾಗಲೀ, ಅಕ್ಕಿಯಿಂದಾಗಲೀ ಸೃಜಿಸಿ ಅಲ್ಲಿ ತಾನು ನಿರ್ಮಿಸಿರುವ ವಿನಾಯಕನ ಪ್ರತಿಮೆಯನ್ನು ಇಟ್ಟು ಭಕ್ತಿಪೂರ್ವಕವಾಗಿ ಬಿಳಿಯದಾದ ಗಂಧದಿಂದಲೂ, ಅಕ್ಷತೆಯಿಂದಲೂ ಪುಷ್ಪಗಳಿಂದಲೂ, ಗರಿಕೆಹುಲ್ಲಿನಿಂದಲೂ, ಇಪ್ಪತ್ತೊಂದು ವಿಧವಾದ ಪತ್ರೆಗಳಿಂದಲೂ ಪೂಜೆಯನ್ನು ಮಾಡಿ ಧೂಪ ದೀಪ ನೈವೇದ್ಯಗಳನ್ನು ಅರ್ಪಿಸಿ, ತುಪ್ಪದಿಂದ ಮಾಡಿದ ಇಪ್ಪತ್ತೊಂದು ಭಕ್ಷ್ಯಗಳನ್ನೂ, ತೆಂಗಿನಕಾಯಿ, ಬಾಳೆಹಣ್ಣು ನೇರಳೆ, ಬೇಲದ ಹಣ್ಣು ಕಬ್ಬು ಮತ್ತು ಅನೇಕ ವಿಧಗಳಾದ ಭಕ್ಷ್ಯಗಳು, ಫಲಗಳು ಮೊದಲಾದುವನ್ನೂ ನಿವೇದನೆ ಮಾಡಿ, ವಿನಾಯಕನಿಗೆದುರಾಗಿ ನಾಟ್ಯವನ್ನು ಸಲ್ಲಿಸಿ ಹಾಡುಗಳನ್ನು ಹಾಡಿ, ಪುರಾಣ ಪಠನೆ ಮೊದಲಾದವುಗಳಿಂದ ಆತನನ್ನು ಸಂತೃಪ್ತಿಗೊಳಿಸಿ. ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರಿಗೆ ಬಾಗಿನವನ್ನು ಕೊಟ್ಟು, ನಂತರ ತಾನು ಇಷ್ಟಬಂಧು ಮಿತ್ರರೊಡನೆ ಊಟವನ್ನು ಮಾಡಬೇಕು.

ಈ ಪ್ರಕಾರ ಭಕ್ತಿಪೂರ್ವಕವಾಗಿ ವಿನಾಯಕನ ವ್ರತವನ್ನು ಮಾಡತಕ್ಕವರಿಗೆ ಸಕಲ ಇಷ್ಟಾರ್ಥಗಳೂ ಸಿದ್ಧಿಸುವವು. ಮಾರನೆಯ ದಿನ ಸೂರ್ಯೋದಯಕ್ಕೆ ಎದ್ದು ಸ್ನಾನ ಸಂಧ್ಯಾದನುಷ್ಠಾನಗಳನ್ನು ಮಾಡಿ ವಿನಾಯಕನಿಗೆ ಪುನಃ ಪೂಜೆಯನ್ನು ಮಾಡಬೇಕು. ಅದೇ ದಿನವೇ ಒಬ್ಬ ಬ್ರಹ್ಮಚಾರಿಯನ್ನು ಕರೆದು ವಿನಾಯಕನ ಪ್ರೀತಿಗಾಗಿ ಮುಂಜಿದರ್ಭದ ಹುರಿಯನ್ನೂ, ಕೃಷ್ಣಾಜಿನವನ್ನೂ, ದಂಡವನ್ನೂ, ಯಜ್ಞೋಪವೀತವನ್ನೂ,

ಕಮಂಡಲವನ್ನೂ, ತನ್ನ ಶಕ್ತ್ಯಾನುಸಾರ ವಸ್ತ್ರವನ್ನೂ ಕೊಡಬೇಕು. ನಂತರ ತನ್ನ ಪುರೋಹಿತನಿಗೆ ಶಕ್ತಿಗೆ ಲೋಪವಿಲ್ಲದೆ ಉಪಾಯನವನ್ನೀಯಬೇಕು. ಅಲ್ಲದೆ ದಕ್ಷಿಣೆ ತಾಂಬೂಲವನ್ನು ಕೊಡಬೇಕು. ಈ ವ್ರತವು ಸಮಸ್ತ ವ್ರತಗಳಲ್ಲಿಯೂ ಮಹಾಶ್ರೇಷ್ಠಕರ ವಾದುದು. ಮೂರು ಲೋಕಗಳಲ್ಲಿ ಪ್ರಸಿದ್ಧಿಯಾದುದು. ಈ ವ್ರತವನ್ನು ದೇವತೆಗಳೂ, ಮುನಿಗಳೂ, ಗಂಧರ್ವರೂ, ಕಿನ್ನರರೂ ಮೊದಲು ಆಚರಿಸಿ ಸಕಲ ಸಾಮ್ಯಗಳನ್ನು ಪಡೆದರು ಎಂಬುದಾಗಿ ಸಾಂಬಮೂರ್ತಿಯು ಕುಮಾರಸ್ವಾಮಿಗೆ ಉಪದೇಶ ಮಾಡಿದನು.

ಎಲೈ ಧರ್ಮರಾಯನೇ ! ನೀನು ಈ ಪ್ರಕಾರವಾಗಿ ವಿನಾಯಕನ ಪೂಜೆಯನ್ನು ಮಾಡು. ನಿನಗೆ ತಪ್ಪದೆ ಜಯವುಂಟಾಗುವುದು. ಈ ಮಾತು ನಿಜವು. ಈ ವ್ರತವನ್ನು ಭೂಲೋಕದಲ್ಲಿ ಎಷ್ಟೋ ಮಂದಿ ಮಾಡಿದರು. ಈ ವ್ರತ ಪ್ರಭಾವದಿಂದ ದಮಯಂತಿಗೆ ನಳನು ದೊರೆತನು. ಕೃಷ್ಣನು ಈ ವ್ರತದ ಆಚರಣೆಯಿಂದಲೇ ಜಾಂಬವತಿಯನ್ನೂ, ಸ್ಯಮಂತಕಮಣಿಯನ್ನೂ ಹೊಂದಿದನು. ಇಂದ್ರನು ವಿನಾಯಕನ ಪೂಜೆಯಿಂದ ವೃತ್ರಾಸುರನನ್ನು ಸಂಹರಿಸಿದನು. ಶ್ರೀರಾಮನು ಈ ವ್ರತವನ್ನಾಚರಿಸಿ ರಾವಣನನ್ನು ಸಂಹರಿಸಿ ಸೀತೆಯನ್ನು ಪಡೆದನು. ಭಗೀರಥನು ಗಂಗೆಯನ್ನು ತರುವಾಗಲೂ, ದೇವಾಸುರರು ಅಮೃತವನ್ನು ಸೃಜಿಸುವಾಗಲೂ, ಸಾಂಬನು ತನ್ನ ಕುಷ್ಠರೋಗ ಪರಿಹಾರ ಕಾಲದಲ್ಲಿಯೂ ಈ ವ್ರತವನ್ನೇ ಆಚರಿಸಿದರು ಎಂಬುದಾಗಿ ಸೂತಮಹಾಮುನಿಯು ಧರ್ಮರಾಯನಿಗೆ ತಿಳಿಸಲು, ಧರ್ಮರಾಯನು ಕೇಳಿದವನಾಗಿ ಆನಂದದಿಂದ ಭಾದ್ರಪದ ಶುದ್ಧ ಚೌತಿಯನ್ನೇ ಎದುರು ನೋಡುತ್ತಿದ್ದು ಸಕಾಲವು ಪ್ರಾಪ್ತವಾದ ಕೂಡಲೇ ವ್ರತಾಚರಣೆಯಿಂದ ಸಕಲ ಇಷ್ಟಾರ್ಥ ಸಿದ್ಧಿಗಳನ್ನು ಪಡೆದನು.

ಪ್ರಪಂಚದಲ್ಲಿ ಅಮೋಘವಾದ ಈ ವ್ರತವನ್ನು ಬ್ರಹ್ಮ ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರೂ ಮಾಡಬಹುದು. ಕ್ರಮ ಪ್ರಕಾರ ಮಾಡಿದರೆ ವಿದ್ಯಾರಂಭದಲ್ಲಿ ಪೂಜೆಯನ್ನಾಚರಿಸಿದವನಿಗೆ ವಿದ್ಯಾಲಾಭವು, ಧನಾಕಾಂಕ್ಷಿಗೆ ದ್ರವ್ಯವೂ, ಯಾವ ಅಪೇಕ್ಷೆಯಿಂದ ಅರ್ಚಿಸಿದರೆ ಆ ಕಾರ್ಯಗಳೆಲ್ಲವೂ ನಿಸ್ಸಂಶಯವಾಗಿ ಸಿದ್ಧಿಸುವುದರಿಂದ ಆಬಾಲವೃದ್ಧರೂ ಕಲಿಯುಗದಲ್ಲಿ ಮುಖ್ಯವಾಗಿ ಮಾಡತಕ್ಕ ವ್ರತಗಳಲ್ಲಿ ಇದು ಪರಮಶ್ರೇಷ್ಠವಾದುದೆಂದೂ, ಸಕಲ ಇಷ್ಟಾರ್ಥಗಳನ್ನು ಸಿದ್ಧಿಸುವ ದೇವತೆಯಾದುದರಿಂದಲೇ ಈತನಿಗೆ ವರಸಿದ್ಧಿವಿನಾಯಕನೆಂಬ ಹೆಸರು ಬಂದಿತೆಂದೂ ಸೂತಪುರಾಣಿಕರು ಹೇಳಿದರು ಎಂಬಲ್ಲಿಗೆ, ಸ್ಕಾಂದಪುರಾಣದಲ್ಲಿ ಉಮಾಮಹೇಶ್ವರ ಸಂವಾದದ ವಿನಾಯಕ ವ್ರತಕಥೆಯು ಸಂಪೂರ್ಣವಾದುದು.

## ಸ್ಯಮಂತಕೋಪಾಖ್ಯಾನ

ಸೂತಪುರಾಣಿಕರು ಹೇಳುತ್ತಾರೆ : ಎಲೈ ಧರ್ಮರಾಯನೇ ! ಭಾದ್ರಪದ ಶುಕ್ಲ ಚತುರ್ಥೀದಿನವು ಶಿವಲೋಕದಲ್ಲಿ ಪೂಜಾ ದಿನವಾದ್ದರಿಂದ ಆ ದಿವಸವು ಮುಖ್ಯವೆಂದು ಪ್ರಸಿದ್ಧಿಗೆ ಬಂದಿತು. ಆ ದಿವಸ ಸ್ನಾನವನ್ನು ಮಾಡಿ ಉಪವಾಸದಿಂದ ವಿನಾಯಕನನ್ನು

ಪೂಜಿಸಿದ್ದೇ ಆದರೆ ಅಂತಹ ಮನುಷ್ಯನು ನೂರು ಭಾಗಕ್ಕಿಂತಲೂ ಅಧಿಕ ಫಲವನ್ನು ಪಡೆಯುತ್ತಾನೆ. ಆ ದಿನದಲ್ಲಿ ಚಂದ್ರದರ್ಶನ ಮಾಡಿದ್ದೇ ಆದರೆ ದೋಷವು, ಅಂದರೆ ಅಪನಿಂದೆಗೊಳಗಾಗುತ್ತಾನೆ. ಅದರ ಪರಿಹಾರಕ್ಕಾಗಿ ನಡೆದ ಮುಂದಿನ ಉಪಕಥೆಯನ್ನು ಲಾಲಿಸು; ಈ ಶುಕ್ಲಪಕ್ಷ ಚತುರ್ಥಿಯಲ್ಲಿ ಸೂರ್ಯನು ಕನ್ಯೆಯನ್ನು ಸೇರಿದ್ದಾಗ ಚಂದ್ರದರ್ಶನ ಮಾಡಿದ್ದಾದರೆ, ವ್ಯರ್ಥವಾಗಿ ಅಪನಿಂದೆಗೊಳಗಾಗುವನು.

ಅಂಥಾ ದೋಷ ಬಾರದಂತೆ ಈ ಮುಂದೆ ಹೇಳತಕ್ಕ ಧ್ಯಾನ ಶ್ಲೋಕವನ್ನು ಜಪಿಸಿಕೊಳ್ಳಬೇಕು. ಇದು ವಿಷ್ಣುದೇವರಿಂದಲೂ ಜಪಿಸಲ್ಪಟ್ಟಿತಂತೆ, "**ಸಿಂಹಃ ಪ್ರಸೇನಮವಧೀತ್ ಸಿಂಹೋ ಜಾಂಬವತಾಹತಃ ಸುಕುಮಾರಕ ಮಾರೋಧೀಃ ತವಹ್ಯೇಷ ಸ್ಯಮಂತಕಃ**" ಈ ಮಂತ್ರದ ಪುರಶ್ಚರಣೆಯನ್ನು ಮಾಡಬೇಕು ಎಂದು ಮುಂದೆ ನಂದಿಕೇಶ್ವರನು ಹೇಳುತ್ತಾನೆ.

ಸನತ್ಕುಮಾರನೇ ಕೇಳು : ಗಣಪತಿ ಸಂಬಂಧವಾಗಿರತಕ್ಕಂಥ ವ್ರತದ ಮಹತ್ವವನ್ನು ಹೇಳುವೆನು; ಭಾದ್ರಪದ ಶುಕ್ಲ ಚತುರ್ಥೀದಿನದಲ್ಲಿ ಪ್ರಯತ್ನ ಪುರಸ್ಸರವಾಗಿ ಗಣಪತಿಯನ್ನು ಪೂಜಿಸಬೇಕು. ಎಲೈ ಸನತ್ಕುಮಾರ ಋಷಿಯೇ, ಭೂಮಿಯ ಮೇಲೆ ಶುಭವನ್ನು ಇಚ್ಛಿಸುವಂಥ ಜನರು ಸ್ತ್ರೀಯರಾಗಲಿ, ಪುರುಷರಾಗಲೀ ಈ ವ್ರತವನ್ನು ವಿಧಿ ಪುರಸ್ಸರದಿಂದ ಮಾಡಿದರೆ ಸಂಕಟಗಳಿಂದ ಜಾಗ್ರತೆಯಾಗಿ ಬಿಡಲ್ಪಡುವರು. ಈ ವ್ರತವು ಅಪವಾದವನ್ನು ಪರಿಹರಿಸುವುದು ಮತ್ತು ಸಕಲ ವಿಘ್ನಗಳನ್ನು ಪರಿಹರಿಸುವುದು. ಅರಣ್ಯದಲ್ಲಾಗಲಿ, ಕಷ್ಟಬಂದ ವೇಳೆಯಲ್ಲಾಗಲೀ, ಯುದ್ಧದಲ್ಲಾಗಲೀ, ರಾಜಕುಲದಲ್ಲಾಗಲೀ, ಸಕಲ ಕಾರ್ಯಗಳನ್ನು ನೆರವೇರಿಸು ವುದರಲ್ಲಿ ಇದು ಉತ್ತಮವಾದ ವ್ರತವು; ಗಣಪತಿಗೆ ಇಷ್ಟವಾದಂಥಾದ್ದು; ಮೂರು ಲೋಕಗಳಲ್ಲಿಯೂ ಪ್ರಸಿದ್ಧಿಯಾದದ್ದು. ಎಲೈ ಬ್ರಹ್ಮಋಷಿಯೇ, ಸಂಕಟನಿವಾರಣೆಗೆ ಮಾಡತಕ್ಕ ವ್ರತವು ಇದಕ್ಕಿಂತ ಮತ್ತೊಂದಿಲ್ಲ ಎಂದನು.

ತರುವಾಯ ಸನತ್ಕುಮಾರನು ಕೇಳುತ್ತಾನೆ : ಈ ವ್ರತವು ಪೂರ್ವದಲ್ಲಿ ಯಾರಿಂದ ಆಚರಿಸಲ್ಪಟ್ಟಿತು ? ಈ ಮನುಷ್ಯಲೋಕಕ್ಕೆ ಹೇಗೆ ಬಂದಿತು ? ಈ ಸರ್ವ ವರ್ತಮಾನವನ್ನು ವಿಸ್ತಾರವಾಗಿ ಹೇಳು ಎನ್ನಲು, ನಂದಿಕೇಶ್ವರನು ಹೇಳುತ್ತಾನೆ : ಓ ಬ್ರಹ್ಮಋಷಿಯೇ, ಪ್ರತಾಪವಂತನಾದ ವಸುದೇವಪುತ್ರನು ತ್ರಿಲೋಕ ಸಂಚಾರಿಯಾದ ನಾರದಮಹರ್ಷಿಗಳಿಂದ ಆಜ್ಞಾಪಿಸಲ್ಪಟ್ಟು ತನಗೆ ವ್ಯರ್ಥವಾಗಿ ಬಂದ ಅಪವಾದ ನಿವೃತ್ತಿಗಾಗಿ ಈ ಗಣಪತಿ ವ್ರತವನ್ನು ಮಾಡಿದನು. ಸನತ್ಕುಮಾರನು ಕೇಳುತ್ತಾನೆ : ಷಡ್ಗುಣೈಶ್ವರ್ಯ ಸಂಪನ್ನನಾದ, ಸೃಷ್ಟಿ ಸಂಹಾರಕನಾದ, ಜಗದ್ವ್ಯಾಪಕನಾದ ಸ್ವಾಮಿಯು ಇಂಥಾ ಅಪನಿಂದೆಗೆ ಏಕೆ ಒಳಗಾದನು ? ಈ ಆಶ್ಚರ್ಯಕರವಾದ ಉಪಖ್ಯಾನವನ್ನು ಹೇಳಬೇಕೆಂದು ಕೇಳಿಕೊಳ್ಳಲು, ಸನತ್ಕುಮಾರನೇ ಕೇಳು : ಭೂಭಾರ ನಿವೃತ್ತಿ ಮಾಡುವುದಕ್ಕೋಸ್ಕರ ಬಲರಾಮನೂ ಶ್ರೀಕೃಷ್ಣನೂ ಜರಾಸಂಧನೆಂಬ ಅರಸನ

ಭಯಕ್ಕಾಗಿ ಮಧುರಾಪಟ್ಟಣ ತ್ಯಜಿಸಿ ಸಮುದ್ರ ಮಧ್ಯದಲ್ಲಿ ದ್ವಾರಕಾನಗರವನ್ನು ವಾಸಸ್ಥಾನವಾಗಿಸಬೇಕೆಂದು ಅಲ್ಲಿಗೆ ವಿಶ್ವಕರ್ಮನನ್ನು ಕರೆಸಿ ಕನಕಮಯವಾದ ಕವಾಟಗಳಿಂದ ಶೋಭಿಸುವ ಹದಿನಾರು ಸಾವಿರ ಸುಂದರಿಯರಿಂದೊಡಗೂಡುವಂತೆ ಮನೋಹರವಾದ ಪ್ರತ್ಯೇಕ ಪ್ರತ್ಯೇಕವಾದ ಅರಮನೆಗಳನ್ನು ಕಲ್ಪಿಸಿ ಅದರ ಮಧ್ಯದಲ್ಲಿ ತನಗಾಗಿ ಭವನವನ್ನು ಕಟ್ಟಿಸಿದನು.

ಆ ಸ್ತ್ರೀಯರ ಕ್ರೀಡೆಗಾಗಿ ಪಾರಿಜಾತ ಕಲ್ಪವೃಕ್ಷಾದಿಗಳನ್ನು ಸಹ ವಿರಚಿಸಿದನು. ಯಾದವರ ಗೃಹಗಳಾದರೋ ಹನ್ನೊಂದುಸಾವಿರ ಕೋಟಿ ಇದ್ದವು. ಪಟ್ಟಣವೆಲ್ಲವು ಅನೇಕ ಇತರ ಪ್ರಜೆಗಳಿಂದ ಭರಿತವಾಗಿತ್ತು. ಯಾರನ್ನು ನೋಡಿದರೂ ಯಾವುದೇ ವ್ಯಸನಕ್ಕೂ ಒಳಗಾಗದೆ ಸುಖಜೀವಿಗಳಾಗಿದ್ದರು. ಹೀಗಿರತಕ್ಕಂಥಾ ಪಟ್ಟಣದಲ್ಲಿ ಮೂರು ಲೋಕದಲ್ಲಿಯೂ ಪ್ರಸಿದ್ಧನಾದಂಥಾ ಉಗ್ರಸೇನ ರಾಜನಿಗೆ ಪುತ್ರರಾಗಿ ಸತ್ರಾಜಿತು, ಪ್ರಸೇನರು ಜನಿಸಿದರು. ಸತ್ರಾಜಿತನು ಸಮುದ್ರತೀರವನ್ನು ಸೇರಿ ಸೂರ್ಯನನ್ನು ಕುರಿತು ನಿರಶನವ್ರತವುಳ್ಳವನಾಗಿ ರೆಪ್ಪೆ ಹಾಕದೆ ಕಣ್ಣಿನಿಂದ ಸೂರ್ಯನನ್ನೇ ನೋಡುತ್ತ ತಪಸ್ಸನ್ನು ಮಾಡಲು, ಸೂರ್ಯನು ಮೆಚ್ಚಿ ಈತನಿಗೆ ಪ್ರಸನ್ನನಾಗಲು, ಸತ್ರಾಜಿತನು ಇಂತೆಂದು ಸ್ತುತಿಸುತ್ತಿದ್ದನು.

ತೇಜೋರಾಶಿರೂಪನಾದವನೇ ! ಸರ್ವತೋಮುಖನಾಗಿರುವವನೇ ! ವಿಶ್ವವ್ಯಾಪಕನೆ ನಿನಗೆ ನಮಸ್ಕಾರವು. ಹಸುರಾದ ಕುದುರೆಯುಳ್ಳವನೇ ! ನವಗ್ರಹಗಳಿಗೆ ರಾಜನಾದವನೇ ! ಚಂದ್ರಪ್ರಕಾಶವುಳ್ಳವನೇ ! ಗಾಯತ್ರಿ ಸ್ವರೂಪದವನೇ ! ಸರ್ವಕ್ಕೂ ದೇವನಾದವನೇ ! ನಿನಗೆ ನಮಸ್ಕಾರವು. ಎಲೈ ದಿವಾಕರನೇ ! ನನ್ನನ್ನು ಶುಭದೃಷ್ಟಿಯಿಂದ ಚೆನ್ನಾಗಿ ನೋಡು.

ಈ ಮೇರೆಗೆ ಸ್ತುತಿಸಲ್ಪಟ್ಟ ಸತ್ರಾಜಿತನನ್ನು ಕುರಿತು ಸೂರ್ಯನು ಎಲೈ ಸತ್ರಾಜಿತನೇ; ನಿನ್ನ ನಿಶ್ಚಲವಾದ ತಪಸ್ಸಿಗೆ ಮೆಚ್ಚಿದೆನು. ವರವನ್ನು ಬೇಡೆನ್ನಲು, ಸತ್ರಾಜಿತನು, ಸೂರ್ಯನೇ ! ನೀನು ಸಂತುಷ್ಟನಾದರೆ ನಿನ್ನಲ್ಲಿರುವ ಸ್ಯಮಂತಕ ಮಣಿಯನ್ನು ಕೊಡು ಎನ್ನಲು, ಸುಪ್ರೀತನಾದ ಸೂರ್ಯನು ಆ ರತ್ನವನ್ನು ತನ್ನ ಕಂಠದಿಂದ ತೆಗೆದು ಸತ್ರಾಜಿತನಿಗೆ ಕೊಟ್ಟು ಅದರ ಪ್ರಭಾವ ಹೇಳುತ್ತಾನೆ : ಇದು ದಿನ ಒಂದಕ್ಕೆ ಎಂಟು ಭಾರ ಚಿನ್ನವನ್ನು ಕೊಡುತ್ತದೆ. ಉತ್ತಮವಾದಂಥ ಈ ರತ್ನವನ್ನು ಆಚಾರವಂತನಾಗಿ ನೀನು ಯಾವಾಗಲೂ ಧರಿಸತಕ್ಕದ್ದು. ಈ ರತ್ನವು ಅಶುಚಿವಂತನನ್ನು ಕೂಡಲೇ ನಾಶಮಾಡುತ್ತದೆ ಎಂದು ಹೇಳಿ ತೇಜೋರಾಶಿಯಾದ ಸೂರ್ಯನು ಅಂತರ್ಧಾನನಾದನು. ಸತ್ರಾಜಿತನು ಸೂರ್ಯನಿಂದ ಕೊಡಲ್ಪಟ್ಟ ಕಂಠಮಾಲೆಯಿಂದ ಪ್ರಕಾಶಿತನಾಗಿ ಶ್ರೀಕೃಷ್ಣನು ವಾಸಿಸುತ್ತಿದ್ದಂಥ ದ್ವಾರಕಾಪುರವನ್ನು ಉತ್ಸಾಹದಿಂದ ಪ್ರವೇಶಿಸಿದನು. ಆತನಿಂದ ಬರತಕ್ಕ ಆ ಮಹಾಪ್ರಭೆಯನ್ನು ನೋಡು ಜನರು ಈತನೇ ಸೂರ್ಯನು, ನೋಡತಕ್ಕವರ ನೇತ್ರಗಳನ್ನು ತನ್ನ ಬೆಳಕಿನಿಂದ ಮುಚ್ಚುತ್ತ ಶ್ರೀಕೃಷ್ಣನನ್ನು

ನೋಡುವುದಕ್ಕೋಸ್ಕರ ಬಂದಂತೆ ಇದೆ. ಏನೇನೂ ಸಂಶಯವಿಲ್ಲ ಎಂದೆನ್ನುತ್ತಿರುವಷ್ಟ ರೊಳಗೆ ಸತ್ರಾಜಿತನು ಸಮೀಪಕ್ಕೆ ಬರುತ್ತಲೇ, ಈತನು ಸೂರ್ಯನಲ್ಲ; ಸೂರ್ಯನಿಂದ ಅನುಗ್ರಹಿತವಾದ ಪದಕವನ್ನು ಧರಿಸಿರುವ ಸತ್ರಾಜಿತನು ಎಂದರು. ಎಲ್ಲರೂ ಆ ರತ್ನದ ಮೇಲೆ ಆಸೆ ಪಟ್ಟರು. ಶ್ರೇಷ್ಠವಾದ ಸ್ಯಮಂತಕವು ಎಲ್ಲರಿಗೂ ಲಭ್ಯವೇ ? ಎಂದಿಗೂ ಇಲ್ಲ. ಸತ್ರಾಜಿತನು ಈ ಪದಕವು ನನ್ನ ಕಂಠದಲ್ಲಿದ್ದರೆ ಕೃಷ್ಣನು ಕೇಳುವನು ಎಂಬ ಭಯದಿಂದ ತನ್ನ ತಮ್ಮನಾದ ಪ್ರಸೇನನಿಗೆ ಆಚಾರವಂತನಾಗಿ ನೀನು ಇದನ್ನು ಧರಿಸಿಕೊಂಡಿರೆಂದು ಹೇಳಿ ಸ್ಯಮಂತಕ ಮಣಿಯನ್ನು ಕೊಟ್ಟನು.

ಒಂದು ದಿನ ಪ್ರಸೇನನು ಈ ಮಣಿಯನ್ನು ಧರಿಸಿಕೊಂಡು ಮೃಗವಿಹಾರಕ್ಕಾಗಿ ಶ್ರೀಕೃಷ್ಣನೊಡನೆ ಸೇರಿ ಹೊರಟನು. ಅಶ್ವವನ್ನೇರಿದ ಕಾರಣದಿಂದ ಪ್ರಸೇನನು ಅಶುಚಿಯಾದನು. ಶ್ರೀಕೃಷ್ಣನ ಪರಿವಾರದಿಂದ ಬೇರೆಯಾದ ಪ್ರಸೇನನು ಒಬ್ಬನೇ ಅಶ್ವಾರೂಢನಾಗಿ ಹೋಗುತ್ತಿರಲು ಒಂದು ಸಿಂಹವು ಪ್ರಸೇನನನ್ನು ಸಂಹಾರ ಮಾಡಿ ಆತನ ಕಂಠಪ್ರದೇಶದಲ್ಲಿ ಶೋಭಿಸುತ್ತಿದ್ದ ಸ್ಯಮಂತಕಮಣಿಯನ್ನು ತೆಗೆದುಕೊಂಡಿತು. ನಂತರ ಜಾಂಬವಂತನೆಂಬ ಕರಡಿಯು ಆ ಸಿಂಹವನ್ನು ಕೊಂದು ಆ ಮಣಿಯನ್ನು ತೆಗೆದುಕೊಂಡು ತನ್ನ ಗುಹೆಗೆ ಹೋಗಿ ತನ್ನ ಮಗಳಾದ ಜಾಂಬವತಿಯ ಕೈಗೆ ಕೊಡಲು, ಆಕೆಯು ಅದನ್ನು ಮಗುವಿನ ತೊಟ್ಟಿಲಿನ ಮೇಲೆ ಅಲಂಕಾರಾರ್ಥವಾಗಿ ಕಟ್ಟಿದಳು. ಇತ್ತ ಅರಣ್ಯದಲ್ಲಿ ಪ್ರಸೇನನು ಹಿಂದಿರುಗಿ ಬಾರದಿದ್ದರಿಂದ ಶ್ರೀಕೃಷ್ಣನು ವ್ಯಾಕುಲನಾಗಿ ತನ್ನ ಸೈನ ಸಹಿತ ನಗರವನ್ನು ಸೇರಿದನು. ಒಂದೆರಡು ದಿನಗಳ ತರುವಾಯ ಪ್ರಸೇನನು ಬಾರದೇ ಇದ್ದುದರಿಂದ ಶ್ರೀಕೃಷ್ಣನೇ ಆ ಸ್ಯಮಂತಕರತ್ನದ ಆಸೆಯಿಂದ ಪ್ರಸೇನನನ್ನು ಕೊಂದಿರಬೇಕು. ಮಣಿಯ ಆಸೆಯಿಂದ ಈ ಪಾಪಿಯು ಬಂಧುವನ್ನು ಸಹ ಕೊಂದನಲ್ಲ! ಎಂದು ದ್ವಾರಕಾನಗರದಲ್ಲಿರುವ ಸರ್ವರೂ ಈ ಮಾತನ್ನು ಆಡುತ್ತಾ ಬರಲು, ಅದನ್ನು ಸಹಿಸಲಾರದೆ ವ್ಯರ್ಥವಾಗಿ ತನ್ನ ಮೇಲೆ ಹೊರಿಸಿದ ಅಪವಾದಕ್ಕಾಗಿ ನೊಂದುಕೊಂಡು ಶ್ರೀಕೃಷ್ಣನು ಸತ್ರಾಜಿತನನ್ನು ಮತ್ತು ಕೆಲವು ಆಪ್ತರನ್ನು ಕರೆದುಕೊಂಡು ಪ್ರಸೇನನನ್ನು ಹುಡುಕುವುದಕ್ಕೆ ದ್ವಾರಕೆಯನ್ನು ಬಿಟ್ಟು ಅರಣ್ಯಕ್ಕೆ ಹೊರಟನು.

ಅರಣ್ಯದಲ್ಲಿ ಸಿಂಹದಿಂದ ಹತನಾಗಿ ಬಿದ್ದಿದ್ದ ಪ್ರಸೇನನನ್ನು ಆತನ ಅಶ್ವವನ್ನು ನೋಡಿದನು. ಆಮೇಲೆ ಮುಂದೆ ಹೋಗಲು ಸಿಂಹದ ಹೆಜ್ಜೆಗಳು ಕಾಣಿಸಿದವು. ಆ ಸಿಂಹದ ಹೆಜ್ಜೆಯ ಗುರುತನ್ನೇ ಹಿಡಿದು ಮುಂದೆ ಹೋಗಿ ಸಿಂಹವನ್ನು ಕೊಂದ ಒಂದು ಕರಡಿಯ ಹೆಜ್ಜೆ ಕಾಣಿಸಲು, ಆ ಗುರ್ತಿನಿಂದ ಅರಣ್ಯದಲ್ಲಿ ಒಂದು ಗುಹೆಯನ್ನು ಕಂಡನು.

ಆ ಗುಹೆಯು ಅಂಧಕಾರಮಯವಾದ್ದರಿಂದ ಎಲ್ಲರನ್ನೂ ಹೊರಗೆ ನಿಲ್ಲಿಸಿ, ಶ್ರೀ ಕೃಷ್ಣದೇವನು ತನ್ನ ತೇಜಸ್ಸಿನಿಂದ ಒಳಹೊಕ್ಕು ನೂರುಗಾವುದ ದೂರ ಹೋಗಿ ಮುಂದುಗಡೆ ರತ್ನಖಚಿತವಾದ ಅರಮನೆಯೊಂದನ್ನು ಕಂಡನು. ಅದರಲ್ಲಿ

ತೊಟ್ಟಿಲೊಳಗೆ ಮಲಗಿದ್ದ ಅಪರಿಮಿತ ಕಾಂತಿಯುಳ್ಳ ಜಾಂಬವಂತನ ಮಗುವನ್ನು ಕಂಡನು. ಆ ತೊಟ್ಟಿಲಿಗೆ ಕಟ್ಟಿದ್ದ ಸ್ಯಮಂತಕ ರತ್ನವನ್ನು ನೋಡಿದನು. ಪುಂಡರೀಕಾಕ್ಷನಾದ ಶ್ರೀಕೃಷ್ಣನು ರೂಪಯೌವನಗಳಿಂದ ಕಂಗೊಳಿಸುವ ಕನ್ನಿಕೆಯಾದ ಜಾಂಬವಂತನ ಮಗಳನ್ನೂ ಕಂಡನು. ಕಮಲದಂತೆ ವಿಶಾಲವಾದ ಕಣ್ಣುಗಳುಳ್ಳ ತೊಟ್ಟಿಲನ್ನು ತೂಗುವ ನಗು ಮುಖದ ಸುಂದರಿಯನ್ನು ಶ್ರೀಹರಿಯು ನೋಡಿ ಆಶ್ಚರ್ಯಚಕಿತನಾದನು.

ಆಗ ತೊಟ್ಟಿಲನ್ನು ತೂಗುತ್ತಾ ಆ ಬಾಲೆಯು ಸಿಂಹವು ಪ್ರಸೇನನ್ನು ಕೊಂದು ಮಣಿಯನ್ನು ತೆಗೆದುಕೊಂಡು ಹೋಗುವುದನ್ನು ಜಾಂಬವಂತನು ನೋಡಿ, ಈ ಸಿಂಹವನ್ನು ಕೊಂದು ಮಣಿಯನ್ನು ತಂದಿದ್ದಾನೆ, ಎಲೈ ಮಗುವೇ ! ಅಳಬೇಡ ಈ ಮಣಿಯು ನಿನ್ನದು. ಇದನ್ನು ನೋಡಿಕೊಂಡಿರು. ರೋಧನ ಮಾಡಬೇಡ ಎಂದು ಹೇಳುತ್ತ ತೊಟ್ಟಿಲನ್ನು ತೂಗುತ್ತಿದ್ದಳು.

ಶ್ರೀಕೃಷ್ಣನ ದರ್ಶನದಿಂದಲೇ ಮನ್ಮಥಬಾಧೆಗೊಳಗಾಗಿ ತಪಿಸುತ್ತಲಿರುವ ಜಾಂಬವತಿಯು ಪುಂಡರೀಕಾಕ್ಷನಾದ ಕೃಷ್ಣನನ್ನು ಕುರಿತು, ಹೊರಟುಹೋಗು ಇಲ್ಲಿ ನಿಲ್ಲಲಾಗದು, ಈ ರತ್ನವು ನಿನಗೆ ಬೇಕಾಗಿದ್ದರೆ ಜಾಂಬವಂತನು ನಿದ್ರೆಯಿಂದ ಏಳುವಷ್ಟರೊಳಗಾಗಿ ತೆಗೆದುಕೊಂಡು ಬೇಗನೆ ಹೋಗು ಎಂದು ಮೆಲ್ಲಗೆ ಹೇಳಲು, ಆ ಬಾಲೆಯ ಮಾತನ್ನು ಕೇಳಿ ಸ್ವಾಮಿಯು ಮುಗುಳ್ನಗೆಯಿಂದ ಗಟ್ಟಿಯಾಗಿ ಧ್ವನಿಯಾಗುವಂತೆ ತನ್ನ ಪಾಂಚಜನ್ಯವನ್ನು ಊದಿದನು. ಆ ಮಹಾಧ್ವನಿಯಿಂದ ಎಚ್ಚೆತ್ತ ಜಾಂಬವಂತನಿಗೂ ಶ್ರೀಕೃಷ್ಣನಿಗೂ ಯುದ್ಧವು ಪ್ರಾರಂಭವಾಯಿತು.

ಬಿಲದ್ವಾರದಲ್ಲಿರತಕ್ಕ ಜನರು ಏಳು ದಿನ ಪರ್ಯಂತರ ಶ್ರೀಕೃಷ್ಣನು ಬಿಲದಿಂದ ಹೊರಗೆ ಬಾರದಿರುವುದನ್ನು ಕಂಡು ಶೋಕಾರ್ತರಾಗಿ ದ್ವಾರಕೆಗೆ ಹಿಂತಿರುಗಿ ಬಂದು ಶ್ರೀಕೃಷ್ಣನು ಮೃತನಾದನೆಂದು ಹೇಳಲು, ಅದನ್ನು ಕೇಳಿ ಯಾದವರು ಮಾಡಬೇಕಾದ ಔರ್ಧ್ವದೈಹಿಕ ಕ್ರಿಯೆಗಳನ್ನು ಮಾಡಿದರು. ಇತ್ತ ಗುಹೆಯಲ್ಲಿ ಶ್ರೀಕೃಷ್ಣ–ಜಾಂಬವಂತ ಇಬ್ಬರಿಗೂ ಇಪ್ಪತ್ತೊಂದು ದಿನ ಪರ್ಯಂತ ಯುದ್ಧವು ಜರುಗಿತು. ಅಮಿತ ಪರಾಕ್ರಮಿ ಭಲ್ಲೂಕವೀರನಾದ ಜಾಂಬವಂತನು ಯುದ್ಧದಲ್ಲಿ ಬಳಲಿದನು. ಶ್ರೀಕೃಷ್ಣನ ಪರಾಕ್ರಮವು ಹೆಚ್ಚಾಗಲು ಜಾಂಬವಂತನು ತ್ರೇತಾಯುಗದಲ್ಲಿ ಶ್ರೀರಾಮನ ಪರಾಕ್ರಮವನ್ನು ಸ್ಮರಿಸಿ, ಈ ರೀತಿ ಸ್ತುತಿಸಿದನು; ಯಕ್ಷ ರಾಕ್ಷಸರಿಂದಲೂ, ದೇವತೆಗಳಿಂದಲೂ ಅಜೇಯನಾಗಿರತಕ್ಕ ನಾನು ನಿನ್ನಿಂದ ಪರಾಜಿತನಾದೆ, ನೀನು ನಿಶ್ಚಯವಾಗಿ ದೇವಶ್ರೇಷ್ಠನು. ನೀನು ವಿಷ್ಣುವಲ್ಲದಿದ್ದರೆ ಇಂಥಾ ಶೌರ್ಯವು ಇರಲಾರದು. ಎಂದು ಜಾಂಬವಂತನು ಸ್ತುತಿಸಲು, ಸುಪ್ರೀತನಾದ ಶ್ರೀಕೃಷ್ಣನು ತನ್ನ ರಾಮಾವತಾರವನ್ನು ಆತನಿಗೆ ದರ್ಶನ ಮಾಡಿಸಿದನು. ಶ್ರೀರಾಮದರ್ಶನದಿಂದ ಪುಳಕಿತನಾದ ಜಾಂಬವಂತನು ಗೋವಿಂದನಿಗೆ ತಾನು ತಂದಿದ್ದ ಆ ಮಣಿಯನ್ನು ಸಮರ್ಪಿಸಿದನು.

## ಜಾಂಬವತೀ ವಿವಾಹವು

ಅದೇ ಶುಭಮುಹೂರ್ತದಲ್ಲಿ ತನ್ನ ಪುತ್ರಿ ಜಾಂಬವಂತಿಯನ್ನು ಪತ್ನಿಯನ್ನಾಗಿ ಸ್ವೀಕರಿಸಬೇಕೆಂದು ಒಪ್ಪಿಸಿ, ವಿವಾಹ ಮಹೋತ್ಸವವನ್ನು ನೆರವೇರಿಸಿದನು. ಶ್ರೀಕೃಷ್ಣನು ಆ ಕಾಂತಾಮಣಿಗೆ ಕಾಂತನಾಗಿ, ಮಣಿ ಸಹಿತನಾಗಿ ರಥವನ್ನೇರಿ ದ್ವಾರಕಾನಗರವನ್ನು ಪ್ರವೇಶಿಸಿ ಸಮಸ್ತ ಯಾದವರಿಗೆ ಈ ವೃತ್ತಾಂತವೆಲ್ಲವನ್ನು ಹೇಳಿ ಸತ್ರಾಜಿತನನ್ನು ಕರೆಯಿಸಿ ಆ ರತ್ನವನ್ನಿತ್ತನು. ಈ ರೀತಿಯಲ್ಲಿ ಶ್ರೀಕೃಷ್ಣನು ತನಗೆ ಬಂದಿದ್ದ ಅಪನಿಂದೆಯನ್ನು ನಿವಾರಿಸಿಕೊಂಡನು.

## ಸತ್ಯಭಾಮಾ ವಿವಾಹ

ಸತ್ರಾಜಿತನು ಆ ಮಣಿಯನ್ನು ತೆಗೆದುಕೊಂಡು ಸ್ವಲ್ಪ ಹೊತ್ತು ಯೋಚಿಸಿ, ಶ್ರೀಕೃಷ್ಣನು ಅಜೇಯನೆಂದು ನಿಶ್ಚಯಿಸಿ ವೃಥಾ ಅಪವಾದ ಹೊರಿಸಿದ್ದಕ್ಕೆ ಲಜ್ಜಿತನಾಗಿ ಆ ರತ್ನವನ್ನೂ ಮತ್ತು ತನ್ನ ಪುತ್ರಿಯಾದ ಸತ್ಯಭಾಮಾ ದೇವಿಯನ್ನೂ ಶ್ರೀಕೃಷ್ಣನಿಗೆ ಮಂತ್ರೋಕ್ತಧಾರಾ ಪುರಸ್ಸರದಿಂದ ಕೊಟ್ಟು ಎಲ್ಲರೂ ಒಪ್ಪುವಂತೆ ವೈಭವದಿಂದ ವಿವಾಹಮಾಡಿದನು. ಕೆಲವು ದಿನದ ಮೇಲೆ ಶತಧನ್ವಾ, ಅಕ್ರೂರ ಸತ್ರಾಜಿತನಲ್ಲಿದ್ದ ಮಾಣಿಕ್ಯದ ಮಹತ್ವವನ್ನು ತಿಳಿದು ಅವನೊಡನೆ ವೈರವನ್ನು ಬೆಳೆಸಿದರು. ಪಾಂಡವರನ್ನು ನೋಡಲಿಕ್ಕೆ ಶ್ರೀಕೃಷ್ಣನು ಹೋಗಿದ್ದಾಗ ಅದೇ ಸಮಯದಲ್ಲಿ ಸತ್ರಾಜಿತನನ್ನು ಶತಧನ್ವನು ಸಂಹಾರ ಮಾಡಿ ಸತ್ಯಭಾಮೆಯಲ್ಲಿದ್ದ ಆ ರತ್ನವನ್ನು ತೆಗೆದುಕೊಂಡು ಹೋದನು. ಸತ್ಯಭಾಮಾದೇವಿಯು ಶತಧನ್ವನ ಕಾರ್ಯವನ್ನು ಶ್ರೀಕೃಷ್ಣನಿಗೆ ತಿಳಿಸಿದಳು. ಶ್ರೀಕೃಷ್ಣನು ದುಷ್ಟನಿಗ್ರಹಕ್ಕಾಗಿ ಅಂತರಂಗದಲ್ಲಿ ಸಂತುಷ್ಟನಾಗಿ ಹೊರಗೆ ಕಪಟನಾಟಕನಾಗಿ ಅಣ್ಣನನ್ನು ಕುರಿತು ಓ ಬಲರಾಮನೇ! ಬಂಧುವಾದ ಶತಧನ್ವನು ಸತ್ಯಭಾಮೆಯಲ್ಲಿದ್ದ ಆ ಸ್ಯಮಂತಕಮಣಿಯನ್ನು ತೆಗೆದುಕೊಂಡು ಹೋದನಂತೆ. ದುರಾಚಾರಿಯಾದ ಅವನನ್ನು ಕೊಂದು ಮಣಿಯನ್ನು ತರೋಣ. ಸಹಾಯಕ್ಕೆ ಸಂಗಡವೇ ಬರಬೇಕೆಂದು ಬಲರಾಮನನ್ನು ಕರೆದುಕೊಂಡು ಯುದ್ಧಕ್ಕಾಗಿ ಹೊರಟನು. ಈ ವರ್ತಮಾನವನ್ನು ಕೇಳಿ ಶತಧನ್ವನು ಆ ಮಣಿಯನ್ನು ಅಕ್ರೂರನ ಹಸ್ತದಲ್ಲಿರಿಸಿ ಇದು ನಿನ್ನಲ್ಲೇ ಇರಲಿ ಎಂದು ಹೇಳಿ ಅಶ್ವವನ್ನೇರಿ ದಕ್ಷಿಣ ದಿಕ್ಕಿಗೆ ಹೊರಟನು.

ಆ ಸಮಯದಲ್ಲಿ ರಥದ ಮೇಲೆ ಬರುತ್ತಲಿರುವ ಬಲರಾಮಕೃಷ್ಣರೂ ಅವನನ್ನು ಹಿಂದಟ್ಟಿಹೋದರು. ಅಶ್ವವು ನೂರು ಗಾವುದ ಓಡಿ ಬಸವಳಿದು ಬಿದ್ದು ಮೃತವಾಯಿತು. ಶತಧನ್ವನು ಇವರ ಭೀತಿಯಿಂದ ಓಡುತ್ತಿರಲು ಶ್ರೀಕೃಷ್ಣನು ರಥದಿಂದಿಳಿದು ಅವನನ್ನು ಕೊಂದನು. ಅವನನ್ನು ಶೋಧಿಸಿದರೂ ಮಣಿಯು ಅವನಲ್ಲಿ ಇರಲಿಲ್ಲವೆಂದು ಶ್ರೀಕೃಷ್ಣನು ಬಂದು ಅಣ್ಣನಿಗೆ ಹೇಳಿದನು. ಆ ಮಾತು ಕೇಳಿ ಬಲರಾಮನು ಹೇಳುತ್ತಾನೆ : ಕೃಷ್ಣನೇ ನೀನು ಕಪಟಿಯು, ಲೋಭವಂತನು. ಆ ಮಣಿಗೋಸ್ಕರ ಯಾವ ಬಂಧುಗಳನ್ನಾಗಲೀ ನೀನು

ಕೊಲ್ಲುತ್ತೀ, ನಿನಗೆ ಇದು ಯುಕ್ತವಲ್ಲ, ನಿನನ್ನನ್ನು ಬಂಧುವೆಂದು ಯಾರು ತಾನೇ ಆಶ್ರಯಿಸುವರು ? ಎನ್ನಲು, ಶ್ರೀಕೃಷ್ಣನು ಬಲರಾಮನನ್ನು ಅನೇಕ ಪ್ರಮಾಣಗಳಿಂದ ಸಮಾಧಾನ ಗೊಳಿಸಿದನು. ಬಲರಾಮನು ಶ್ರೀಕೃಷ್ಣನ ವರ್ತನೆಯಿಂದ ಅಸಂತುಷ್ಟನಾಗಿ ವಿದರ್ಭದೇಶಕ್ಕೆ, ಹೋಗಲು, ಶ್ರೀಕೃಷ್ಣನು ರಥಾರೂಢನಾಗಿ ದ್ವಾರಕೆಗೆ ಬಂದನು. ನಗರಕ್ಕೆ ಬಂದನಂತರ ಜನಗಳು ಬಲರಾಮನನ್ನು ಕೃಷ್ಣನು ಮಣಿಗೋಸ್ಕರ ಎಲ್ಲಿಯೋ ಹೊರಡಿಸಿಬಿಟ್ಟನು. ಹೊನ್ನು ಹೆಣ್ಣುಗಳ ಮೇಲೆ ಆಸೆಯಿದ್ದರೆ ಬಂಧುವೇಕೆ ? ಬಳಗವೇಕೆ ? ಎಂದು ಶ್ರೀಕೃಷ್ಣನನ್ನು ದೂರುತ್ತಿದ್ದರು.

ಪುರಜನರ ಈ ಮಾತುಗಳನ್ನು ಜಗತ್ಪತಿಯಾದ ಶ್ರೀಕೃಷ್ಣನು ಕೇಳಿ ಅಪರಾಧಿಯಂತೆ ಬಾಡಿದ ಮುಖವುಳ್ಳವನಾಗಿ, ನಿಸ್ತೇಜನಾಗಿ, ವೃಥಾ ಅಪವಾದದ ಬಗ್ಗೆ ಯೋಚಿಸುತ್ತಿದ್ದನು; ಇತ್ತ ಅಕ್ರೂರನಾದರೋ ತೀರ್ಥಯಾತ್ರಾ ನೆಪದಿಂದ ದ್ವಾರಕೆಯನ್ನು ಬಿಟ್ಟು ಕಾಶಿಯನ್ನು ಸೇರಿ ಆ ಮಣಿಯಿಂದ ಲಭ್ಯವಾದ ಕನಕದಿಂದ ಅನೇಕ ಯಜ್ಞಗಳನ್ನು ಮಾಡುತ್ತಾ ಸುಖದಿಂದಿದ್ದನು. ಅಕ್ರೂರನು ಬುದ್ಧಿಶಾಲಿ ಯಾದ್ದರಿಂದ ಸಂತೋಷವನ್ನು ಪಡೆದು ಆ ದ್ರವ್ಯದಿಂದಲೇ ದೇವಸ್ಥಾನ ಪಟ್ಟಣವೇ ಮೊದಲಾದವುಗಳನ್ನು ಕಟ್ಟಿಸಿದನು.

ಮಣಿ ಪ್ರಭಾವದಿಂದ ದುರ್ಭಿಕ್ಷ, ಈತಿಬಾಧೆ ರೋಗಾದಿಗಳು ಅಲ್ಲಿ ಇರಲಿಲ್ಲ. ಆಚಾರದಿಂದ ಮಣಿಯನ್ನು ಇಟ್ಟುಕೊಂಡು ಅಕ್ರೂರನು ನಗರಕ್ಕೆ ಬಂದು ಸೇರಿದನು. ಮನುಷ್ಯಾವತಾರವನ್ನು ಹೊಂದಿದ್ದ ಕೃಷ್ಣನು ಎಲ್ಲವನ್ನು ತಿಳಿದಿದ್ದಾಗ್ಯೂ ಲೋಕದಲ್ಲಿ ಅಜ್ಞಾನವನ್ನು ಜ್ಞಾನವಂತನು ತಿಳಿಯದೆ ಮಾಯಾ ಬದ್ಧನಾಗಿ ಹೇಗಿರುವನೋ ಹಾಗೆಯೇ ಸ್ವಾಮಿಯು ಅಜ್ಞಾನವನ್ನು ಆಶ್ರಯಿಸಿದನು. ಇದರಿಂದ ಬಂಧುಗಳಲ್ಲಿ ವೈರವು ಹುಟ್ಟಿತು. ವ್ಯರ್ಥವಾಗಿ ಇದೊಂದು ಅಪವಾದವನ್ನು ಸಹಿಸಬೇಕಾಯಿತಲ್ಲಾ! ಏನು ಮಾಡಲಿ ? ಎಂದು ಚಿಂತಾಕ್ರಾಂತನಾಗಿ ಶ್ರೀಕೃಷ್ಣನು ಅರಮನೆಯಲ್ಲಿರುವಾಗ ತ್ರಿಲೋಕ ಸಂಚಾರಿಯಾದ ನಾರದರು ಬಂದರು.

ಶ್ರೀಕೃಷ್ಣನು ನಾರದರನ್ನು ಪೂಜಿಸಿ ಆಸನಾದಿಪಾದ್ಯಗಳನ್ನು ಕೊಡಲು, ಸುಖಾಸೀನರಾದ ನಾರದರು ಎಲೈ ಕೃಷ್ಣನೇ! ನಿನಗೆ ಬಂದಿರತಕ್ಕ ಅಪವಾದದ ಕಾರಣವನ್ನು ನಾನು ಬಲ್ಲೆನು. ಭಾದ್ರಪದ ಮಾಸದಲ್ಲಿ ನಿನ್ನಿಂದ ಶುಕ್ಲಪಕ್ಷ ಚತುರ್ಥೀದಿನ ಚಂದ್ರದರ್ಶನ ಮಾಡಲ್ಪಟ್ಟಿತು. ಆದ್ದರಿಂದಲೇ ನೀನು ಇಂಥಾ ಅಪವಾದಕ್ಕೆ ಒಳಗಾದೆ ಎನ್ನಲು, ಶ್ರೀಕೃಷ್ಣನು ನಾರದರೇ! ಚಂದ್ರದರ್ಶನದಿಂದ ಯಾವ ದೋಷವು ಉಂಟಾಗುವುದೋ ಅದನ್ನು ನನಗೆ ವಿಸ್ತಾರವಾಗಿ ಹೇಳಿ; ಯಾತಕ್ಕೋಸ್ಕರವಾಗಿ ಬಿದಿಗೆಯಲ್ಲಿ ಜನರು ಚಂದ್ರದರ್ಶನವನ್ನು ಮಾಡುತ್ತಾರೆ? ಅದನ್ನೂ ವಿಸ್ತಾರವಾಗಿ ತಿಳಿಸಬೇಕು ಎನ್ನಲು, ನಾರದಮಹರ್ಷಿಗಳು ಹೇಳುತ್ತಾರೆ : ಚಂದ್ರನು ತಾನು ರೂಪವಂತನೆಂಬ ಗರ್ವದಿಂದ ಮೆರೆಯುತ್ತಲಿದ್ದನು. ಅದನ್ನು ವಿನಾಯಕನು ನೋಡಿ ಚಂದ್ರನನ್ನು ಶಪಿಸಿದನು. ಆ ಶಾಪದ

ದೆಸೆಯಿಂದ ಭಾದ್ರಪದ ಮಾಸದ ಶುಕ್ಲಪಕ್ಷ ಚತುರ್ಥೀದಿನ ಯಾರು ಚಂದ್ರದರ್ಶನ ಮಾಡುವರೋ ಅವರು ವ್ಯರ್ಥವಾಗಿ ಅಪನಿಂದೆಗೊಳಗಾಗುವರು ಎಂದು ನಾರದರು ಹೇಳಿದರು. ಎಲೈ ನಾರದರೇ! ಯಾತಕ್ಕೋಸ್ಕರವಾಗಿ ಚಂದ್ರನಿಗೆ ವಿಘ್ನೇಶ್ವರನು ಶಾಪವನ್ನು ಕೊಟ್ಟನೋ ಆ ವಿವರವನ್ನು ನನಗೆ ದಯವಿಟ್ಟು ಹೇಳಬೇಕೆಂದು ಶ್ರೀಕೃಷ್ಣನು ಕೇಳಲು, ನಾರದರು ಹೇಳುತ್ತಾರೆ :

## ಗಣೇಶನ ವಿವಾಹವು

ಪೂರ್ವದಲ್ಲಿ ಜಗತ್ಪತಿಯಾದ ಸಾಂಬಸದಾಶಿವನು ವಿನಾಯಕನನ್ನು ಪ್ರಮಥಗಣಗಳಿಗೆ ಅಧಿಪತಿಯನ್ನಾಗಿ ಮಾಡಬೇಕೆಂದು ಪ್ರಯತ್ನಿಸಿದಾಗ ಬ್ರಹ್ಮ ಮೊದಲಾದ ದೇವರುಗಳು ಸೇರಿದ್ದರು. ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯಾ, ಈಶತ್ವ, ವಶಿತ್ವ, ಈ ಅಷ್ಟಸಿದ್ಧಿಗಳನ್ನು ಕೊಟ್ಟು ಗಣೇಶನಿಗೆ ವಿವಾಹ ಮಹೋತ್ಸವ ನಡೆಯಿತು. ಬ್ರಹ್ಮದೇವರು ಸ್ತುತಿಸುತ್ತಾರೆ: ಪ್ರಮಥಾದಿಪನೇ, ಲಂಬೋದರನೇ, ವಿಘ್ನರಾಜನೇ, ನಿನಗೆ ಮೋದಕಗಳಿಂದ ನಿವೇದನೆ ಮಾಡಿ ಯಾರ್‍ಯಾರು ಪೂಜಿಸುತ್ತಾರೋ ಅವರುಗಳಿಗೆ ನೀನು ಪ್ರಸನ್ನನಾಗಿ ಅವರ ಕಾರ್ಯಗಳನ್ನು ನಿರ್ವಿಘ್ನವಾಗಿ ನೆರವೇರಿಸುವುದರಲ್ಲಿ ಸಂದೇಹವಿಲ್ಲ. ಈ ಗಣಪತಿಯನ್ನು ಪೂಜಿಸದಿದ್ದರೆ ಸುರಾಸುರರಾಗಲಿ, ಕಾರ್ಯವನ್ನು ಇಚ್ಛಿಸಿದರೆ ಆಗಲಾರದು. ಕಲ್ಪಕೋಟಿ ಶತಗಳಾದಾಗ್ಯೂ ಕಾರ್ಯಗಳು ಆಗುವುದಿಲ್ಲ. ಎಲೈ ಗಣಪತಿಯೇ! ನಿನನ್ನನ್ನು ಭಕ್ತಿಯಿಂದ ಪೂಜಿಸಿ ವಿಷ್ಣುವು ಪಾಲನೆಯನ್ನು ಪಾಡುತ್ತಾನೆ. ನಿನ್ನನ್ನು ಪೂಜಿಸಿ ರುದ್ರನು ಸಂಹಾರ ಮಾಡುತ್ತಾನೆ. ನಿನ್ನನ್ನು ಆರಾಧಿಸಿ ನಾನು ಸೃಷ್ಟಿಸುತ್ತೇನೆ. ಹೀಗೆ ಸ್ತುತಿಸಲ್ಪಟ್ಟ, ಬ್ರಹ್ಮನನ್ನು ಕುರಿತು ವಿನಾಯಕನು ಕೇಳುತ್ತಾನೆ : ನಿನ್ನ ಮನಸ್ಸಿನಲ್ಲಿ ಏನು ಇದೆಯೇ ಆ ವರವನ್ನು ಬೇಡು, ನಾನು ಕೋಡುತ್ತೇನೆಂದು ಹೇಳಿದನು.

ಓ ಪ್ರಭುವೇ! ನಾನು ಮಾಡತಕ್ಕಂಥ ಸೃಷ್ಟಿಕರ್ಮವು ನಿರ್ವಿಘ್ನದಿಂದ ನಡೆದುಕೊಂಡು ಬರುವಂತೆ ಅನುಗ್ರಹಿಸಬೇಕು ಎಂದು ಬ್ರಹ್ಮನು ವರವನ್ನು ಬೇಡಲು ಹಾಗೆಯೇ ಆಗಲೆಂದು ವಿನಾಯಕನು ತನ್ನ ಸೊಂಡಿಲಿನಿಂದ ಕಡುಬನ್ನು ಸ್ವೀಕರಿಸಿದನು. ಅನಂತರ ಸಿದ್ಧಿ, ಬುದ್ಧಿಗಳೆಂಬ ಪತ್ನಿಯರಸಮೇತ ಗಣಪತಿಯು ಸಪ್ತಲೋಕಗಳನ್ನು ಸಂಚರಿಸಬೇಕೆಂದು ಸ್ವೇಚ್ಛಾವಿಹಾರವಾಗಿ ಮೆಲ್ಲಮೆಲ್ಲಗೆ ಗಗನದಲ್ಲಿ ಮೂಷಕವಾಹನ--ವನ್ನೇರಿ ಸಂಚರಿಸುತ್ತಿದ್ದನು. ಹಾಗೆಯೇ ಚಂದ್ರಲೋಕವನ್ನು ಸೇರಿ ಸಂಚಾರ ಮಾಡುತ್ತಿರುವ ಗಣನಾಯಕನನ್ನು ನೋಡಿ ಮದಾನ್ವಿತನಾದ ಚಂದ್ರನು ಅಪಹಾಸ್ಯ ಮಾಡಿದನು. ಕೋಪದಿಂದ ಕೆಂಪಾದಂಥ ಕಣ್ಣುಗಳುಳ್ಳ ಗಣಪತಿಯು ಚಂದ್ರನಿಗೆ ಶಾಪವನ್ನು ಕೊಟ್ಟನು. ನೋಡಲಿಕ್ಕೆ ಸೌಂದರ್ಯಶಾಲಿ ಎಂದು ಗರ್ವದಿಂದ ಮೆರೆಯುತ್ತಿರುವ ನೀನು ತಕ್ಕ ಫಲವನ್ನು ಬೇಗನೇ ಹೊಂದುವೆ. ಈ ದಿನದಿಂದ ಮೃಗಲಾಂಛನನಾದ

ನಿನ್ನನ್ನು ಯಾರು ಚತುರ್ಥೀ ದಿನ ನೋಡುತ್ತಾರೋ ಅವರು ಅಪವಾದಕ್ಕೆ ಒಳಗಾಗುವರು. ಇದು ನಿಶ್ಚಯವು ಎನ್ನಲು, ಚಂದ್ರನು ಇಂತಹ ಭಯಂಕರವಾದ ಮಾತನ್ನು ಕೇಳುತ್ತಲೇ ಬಾಡಿದ ಮುಖವುಳ್ಳವನಾಗಿ ಜಲವನ್ನು ಹೊಕ್ಕು ಬಿಳಿಯ ತಾವರೆಯಲ್ಲಿ ಅಡಗಿಕೊಂಡನು.

ತರುವಾಯ ದೇವತೆಗಳೂ, ಗಂಧರ್ವರೂ, ಋಷಿಗಳೂ ಚಂದ್ರನನ್ನು ಕಾಣದೆ ದುಃಖದಿಂದ ದೇವೇಂದ್ರನನ್ನು ಮುಂದಿಟ್ಟುಕೊಂಡು ಬ್ರಹ್ಮನ ಬಳಿಗೆ ಹೋಗಿ ಗಣಪತಿಯ ಮತ್ತು ಚಂದ್ರನ ಸಂಗತಿಯನ್ನು ಹೇಳಿದರು. ಆಗ ಬ್ರಹ್ಮನು ಎಲೈ ದೇವತೆಗಳಿರಾ! ಗಣಪತಿಯಿಂದ ಕೊಡಲ್ಪಟ್ಟ ಶಾಪವು ಹಿಂತಿರುಗಿಸಲಿಕ್ಕೆ ರುದ್ರನಿಂದಾಗಲೀ, ವಿಷ್ಣುವಿನಿಂದಾಗಲೀ, ನನ್ನಿಂದಾಗಲೀ ಆಗಲಾರದು. ಆ ಗಣಪತಿಯನ್ನೇ ಶರಣಾಗತರಾಗಿ ಬೇಡಿಕೊಂಡಲ್ಲಿ ಆತನೇ ಶಾಪವಿಮೋಚನೆ ಮಾಡುವುದರಲ್ಲಿ ಸಂಶಯವಿಲ್ಲ ಎನ್ನಲು, ದೇವತೆಗಳು ಯಾವ ಉಪಾಯದಿಂದ ಗಣಪತಿಯು ನಮಗೆ ಪ್ರಸನ್ನನಾಗುವನು ? ಸೃಷ್ಟಿಕರ್ತನಾದ ಬ್ರಹ್ಮನೇ! ನಮಗೆ ಅದರ ವಿವರವನ್ನು ತಿಳಿಸಬೇಕು ಎಂದು ಕೇಳಲು, ಬ್ರಹ್ಮನು ಹೇಳುತ್ತಾನೆ! ಎಲಾ ಸುರರೇ! ಕೇಳಿರಿ, ಚತುರ್ಥೀದಿನದಲ್ಲಿ ವಿನಾಯಕನನ್ನು ಭಕ್ತಿಯಿಂದ ಪೂಜಿಸಬೇಕು ಮತ್ತು ಕೃಷ್ಣಪಕ್ಷದಲ್ಲಿ (ನಕ್ತ) ಅಂದರೆ, ಪ್ರದೋಷಕಾಲಕ್ಕೆ ಪೂಜೆಗೆ ಆರಂಭಿಸಿ ಚಂದ್ರೋದಯಕ್ಕೆ ಚಂದ್ರನಿಗೆ ಅರ್ಘ್ಯ ಪ್ರಧಾನ ಮಾಡಬೇಕು.

ಅದನ್ನು ಸಂಕಷ್ಟಹರ ಗಣಪತಿ ವ್ರತ (ಸಂಕಷ್ಟಹರ ಚತುರ್ಥೀ ವ್ರತ) ಎಂದು ಪ್ರಾಜ್ಞರು ಹೇಳುವರು. ಶುಚಿರ್ಭೂತನಾಗಿ ಅತಿರಸಗಳಿಂದಲೂ, ತುಪ್ಪದಿಂದ ಮಾಡಿದ ಕಡುಬುಗಳನ್ನೂ, ಪಾಯಸ ಮೊದಲಾದವುಗಳನ್ನೂ ನೈವೇದ್ಯ ಮಾಡಿ, ಮೌನದಿಂದ ಭೋಜನ ಮಾಡಬೇಕು. ಸುವರ್ಣ ಗಣಪತಿಯನ್ನು ಮಾಡಿಸಿ, ಆ ಪ್ರತಿಮೆಯನ್ನು ಲೋಪವಿಲ್ಲದೆ ತನ್ನ ಶಕ್ತಿಗೆ ಅನುಸಾರ ದಕ್ಷಿಣೆಯೊಂದಿಗೆ ಬ್ರಾಹ್ಮಣನಿಗೆ ದಾನ ಕೊಡಬೇಕು ಎಂದು ಹೇಳಿದ ಬ್ರಹ್ಮನನ್ನು ಪುನಃ ಸ್ತುತಿಸಿ, ದೇವತೆಗಳು ಚಂದ್ರನ ಸಮೀಪಕ್ಕೆ ಬಂದು ಹೇಳಲ್ಪಟ್ಟ ಪೂಜಾವಿಧಿಗಳನ್ನು ತಿಳಿಸಿದರು. ಅವರು ಹೇಳಿದಂತೆ ಚಂದ್ರನು ಧ್ಯಾನಾವಾಹನಾದಿಗಳಿಂದ ಪೂಜಿಸಲು, ಸಿದ್ಧಿವಿನಾಯಕನು ಆವಿರ್ಭವಿಸಿದನು. ಸುಪ್ರೀತನಾದ ಗಣಪತಿಯನ್ನು ನೋಡಿ ಸಂತುಷ್ಟಚಿತ್ತನಾದ ಚಂದ್ರನು ನೀನೇ ಸರ್ವಕ್ಕೂ ಕಾರಣೀಭೂತನಾದ ದೇವರು; ನೀನು ಪ್ರಸನ್ನನಾಗಬೇಕು. ಹೇ! ಜಗನ್ನಿವಾಸನೇ! ಲಂಬೋದರನೇ! ದೇವೇಶನೇ! ವಕ್ರತುಂಡನೇ! ಬ್ರಹ್ಮನಾರಾಯಣ ರಿಂದ ಪೂಜಿಸಲ್ಪಟ್ಟ ಸ್ವಾಮಿಯೇ! ಗರ್ವದಿಂದ ನಾನು ತಿಳಿಯದೇ ಮಾಡಿದ ಅಪಹಾಸ್ಯವನ್ನು ಮನ್ನಿಸು. ನಿನ್ನನ್ನು ಪೂಜಿಸದೆ ಯಾವ ಕಾರ್ಯಕ್ಕೂ ಯಾರು ಪ್ರಯತ್ನಪಟ್ಟರೂ ನಿರ್ವಿಘ್ನದಿಂದ ಅದನ್ನು ಸಾಧಿಸಲಾಗದು. ಈ ನಿನ್ನ ಪ್ರಭಾವವನ್ನು ನಿನ್ನಿಂದೀಗ ತಿಳಿದೆನು. ನಿನ್ನನ್ನು ಯಾರು ಉದಾಸೀನ ಮಾಡುವರೋ ಅವರಿಗೆ ನರಕವಾಸ ಪ್ರಾಪ್ತಿಯಾಗುವುದು.

ದೆಸೆಯಿಂದ ಭಾದ್ರಪದ ಮಾಸದ ಶುಕ್ಲಪಕ್ಷ ಚತುರ್ಥೀದಿನ ಯಾರು ಚಂದ್ರದರ್ಶನ ಮಾಡುವರೋ ಅವರು ವ್ಯರ್ಥವಾಗಿ ಅಪನಿಂದೆಗೊಳಗಾಗುವರು ಎಂದು ನಾರದರು ಹೇಳಿದರು. ಎಲೈ ನಾರದರೇ! ಯಾತಕ್ಕೋಸ್ಕರವಾಗಿ ಚಂದ್ರನಿಗೆ ವಿಘ್ನೇಶ್ವರನು ಶಾಪವನ್ನು ಕೊಟ್ಟನೋ ಆ ವಿವರವನ್ನು ನನಗೆ ದಯವಿಟ್ಟು ಹೇಳಬೇಕೆಂದು ಶ್ರೀಕೃಷ್ಣನು ಕೇಳಲು, ನಾರದರು ಹೇಳುತ್ತಾರೆ :

## ಗಣೇಶನ ವಿವಾಹವು

ಪೂರ್ವದಲ್ಲಿ ಜಗತ್ಪತಿಯಾದ ಸಾಂಬಸದಾಶಿವನು ವಿನಾಯಕನನ್ನು ಪ್ರಮಥಗಣಗಳಿಗೆ ಅಧಿಪತಿಯನ್ನಾಗಿ ಮಾಡಬೇಕೆಂದು ಪ್ರಯತ್ನಿಸಿದಾಗ ಬ್ರಹ್ಮ ಮೊದಲಾದ ದೇವರುಗಳು ಸೇರಿದ್ದರು. ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯಾ, ಈಶತ್ವ, ವಶಿತ್ವ, ಈ ಅಷ್ಟಸಿದ್ಧಿಗಳನ್ನು ಕೊಟ್ಟು ಗಣೇಶನಿಗೆ ವಿವಾಹ ಮಹೋತ್ಸವ ನಡೆಯಿತು. ಬ್ರಹ್ಮದೇವರು ಸ್ತುತಿಸುತ್ತಾರೆ: ಪ್ರಮಥಾದಿಪನೇ, ಲಂಬೋದರನೇ, ವಿಘ್ನರಾಜನೇ, ನಿನಗೆ ಮೋದಕಗಳಿಂದ ನಿವೇದನೆ ಮಾಡಿ ಯಾರ್‍ಯಾರು ಪೂಜಿಸುತ್ತಾರೋ ಅವರುಗಳಿಗೆ ನೀನು ಪ್ರಸನ್ನನಾಗಿ ಅವರ ಕಾರ್ಯಗಳನ್ನು ನಿರ್ವಿಘ್ನವಾಗಿ ನೆರವೇರಿಸುವುದರಲ್ಲಿ ಸಂದೇಹವಿಲ್ಲ. ಈ ಗಣಪತಿಯನ್ನು ಪೂಜಿಸದಿದ್ದರೆ ಸುರಾಸುರರಾಗಲಿ, ಕಾರ್ಯವನ್ನು ಇಚ್ಛಿಸಿದರೆ ಆಗಲಾರದು. ಕಲ್ಪಕೋಟಿ ಶತಗಳಾದಾಗ್ಯೂ ಕಾರ್ಯಗಳು ಆಗುವುದಿಲ್ಲ. ಎಲೈ ಗಣಪತಿಯೇ! ನಿನನ್ನನ್ನು ಭಕ್ತಿಯಿಂದ ಪೂಜಿಸಿ ವಿಷ್ಣುವು ಪಾಲನೆಯನ್ನು ಪಾಡುತ್ತಾನೆ. ನಿನ್ನನ್ನು ಪೂಜಿಸಿ ರುದ್ರನು ಸಂಹಾರ ಮಾಡುತ್ತಾನೆ. ನಿನ್ನನ್ನು ಆರಾಧಿಸಿ ನಾನು ಸೃಷ್ಟಿಸುತ್ತೇನೆ. ಹೀಗೆ ಸ್ತುತಿಸಲ್ಪಟ್ಟ, ಬ್ರಹ್ಮನನ್ನು ಕುರಿತು ವಿನಾಯಕನು ಕೇಳುತ್ತಾನೆ : ನಿನ್ನ ಮನಸ್ಸಿನಲ್ಲಿ ಏನು ಇದೆಯೇ ಆ ವರವನ್ನು ಬೇಡು, ನಾನು ಕೋಡುತ್ತೇನೆಂದು ಹೇಳಿದನು.

ಓ ಪ್ರಭುವೇ! ನಾನು ಮಾಡತಕ್ಕಂಥ ಸೃಷ್ಟಿಕರ್ಮವು ನಿರ್ವಿಘ್ನದಿಂದ ನಡೆದುಕೊಂಡು ಬರುವಂತೆ ಅನುಗ್ರಹಿಸಬೇಕು ಎಂದು ಬ್ರಹ್ಮನು ವರವನ್ನು ಬೇಡಲು ಹಾಗೆಯೇ ಆಗಲೆಂದು ವಿನಾಯಕನು ತನ್ನ ಸೊಂಡಿಲಿನಿಂದ ಕಡುಬನ್ನು ಸ್ವೀಕರಿಸಿದನು. ಅನಂತರ ಸಿದ್ಧಿ, ಬುದ್ಧಿಗಳೆಂಬ ಪತ್ನಿಯರಸಮೇತ ಗಣಪತಿಯು ಸಪ್ತಲೋಕಗಳನ್ನು ಸಂಚರಿಸಬೇಕೆಂದು ಸ್ವೇಚ್ಛಾವಿಹಾರವಾಗಿ ಮೆಲ್ಲಮೆಲ್ಲಗೆ ಗಗನದಲ್ಲಿ ಮೂಷಕವಾಹನ--ವನ್ನೇರಿ ಸಂಚರಿಸುತ್ತಿದ್ದನು. ಹಾಗೆಯೇ ಚಂದ್ರಲೋಕವನ್ನು ಸೇರಿ ಸಂಚಾರ ಮಾಡುತ್ತಿರುವ ಗಣನಾಯಕನನ್ನು ನೋಡಿ ಮದಾನ್ವಿತನಾದ ಚಂದ್ರನು ಅಪಹಾಸ್ಯ ಮಾಡಿದನು. ಕೋಪದಿಂದ ಕೆಂಪಾದಂಥ ಕಣ್ಣುಗಳುಳ್ಳ ಗಣಪತಿಯು ಚಂದ್ರನಿಗೆ ಶಾಪವನ್ನು ಕೊಟ್ಟನು. ನೋಡಲಿಕ್ಕೆ ಸೌಂದರ್ಯಶಾಲಿ ಎಂದು ಗರ್ವದಿಂದ ಮೆರೆಯುತ್ತಿರುವ ನೀನು ತಕ್ಕ ಫಲವನ್ನು ಬೇಗನೇ ಹೊಂದುವೆ. ಈ ದಿನದಿಂದ ಮೃಗಲಾಂಛನನಾದ

ನಿನ್ನನ್ನು ಯಾರು ಚತುರ್ಥೀ ದಿನ ನೋಡುತ್ತಾರೋ ಅವರು ಅಪವಾದಕ್ಕೆ ಒಳಗಾಗುವರು. ಇದು ನಿಶ್ಚಯವು ಎನ್ನಲು, ಚಂದ್ರನು ಇಂತಹ ಭಯಂಕರವಾದ ಮಾತನ್ನು ಕೇಳುತ್ತಲೇ ಬಾಡಿದ ಮುಖವುಳ್ಳವನಾಗಿ ಜಲವನ್ನು ಹೊಕ್ಕು ಬಿಳಿಯ ತಾವರೆಯಲ್ಲಿ ಅಡಗಿಕೊಂಡನು.

ತರುವಾಯ ದೇವತೆಗಳೂ, ಗಂಧರ್ವರೂ, ಋಷಿಗಳೂ ಚಂದ್ರನನ್ನು ಕಾಣದೆ ದುಃಖದಿಂದ ದೇವೇಂದ್ರನನ್ನು ಮುಂದಿಟ್ಟುಕೊಂಡು ಬ್ರಹ್ಮನ ಬಳಿಗೆ ಹೋಗಿ ಗಣಪತಿಯ ಮತ್ತು ಚಂದ್ರನ ಸಂಗತಿಯನ್ನು ಹೇಳಿದರು. ಆಗ ಬ್ರಹ್ಮನು ಎಲೈ ದೇವತೆಗಳಿರಾ! ಗಣಪತಿಯಿಂದ ಕೊಡಲ್ಪಟ್ಟ ಶಾಪವು ಹಿಂತಿರುಗಿಸಲಿಕ್ಕೆ ರುದ್ರನಿಂದಾಗಲೀ, ವಿಷ್ಣುವಿನಿಂದಾಗಲೀ, ನನ್ನಿಂದಾಗಲೀ ಆಗಲಾರದು. ಆ ಗಣಪತಿಯನ್ನೇ ಶರಣಾಗತರಾಗಿ ಬೇಡಿಕೊಂಡಲ್ಲಿ ಆತನೇ ಶಾಪವಿಮೋಚನೆ ಮಾಡುವುದರಲ್ಲಿ ಸಂಶಯವಿಲ್ಲ ಎನ್ನಲು, ದೇವತೆಗಳು ಯಾವ ಉಪಾಯದಿಂದ ಗಣಪತಿಯು ನಮಗೆ ಪ್ರಸನ್ನನಾಗುವನು ? ಸೃಷ್ಟಿಕರ್ತನಾದ ಬ್ರಹ್ಮನೇ! ನಮಗೆ ಅದರ ವಿವರವನ್ನು ತಿಳಿಸಬೇಕು ಎಂದು ಕೇಳಲು, ಬ್ರಹ್ಮನು ಹೇಳುತ್ತಾನೆ! ಎಲಾ ಸುರರೇ! ಕೇಳಿರಿ, ಚತುರ್ಥೀದಿನದಲ್ಲಿ ವಿನಾಯಕನನ್ನು ಭಕ್ತಿಯಿಂದ ಪೂಜಿಸಬೇಕು ಮತ್ತು ಕೃಷ್ಣಪಕ್ಷದಲ್ಲಿ (ನಕ್ತ) ಅಂದರೆ, ಪ್ರದೋಷಕಾಲಕ್ಕೆ ಪೂಜೆಗೆ ಆರಂಭಿಸಿ ಚಂದ್ರೋದಯಕ್ಕೆ ಚಂದ್ರನಿಗೆ ಅರ್ಘ್ಯ ಪ್ರಧಾನ ಮಾಡಬೇಕು.

ಅದನ್ನು ಸಂಕಷ್ಟಹರ ಗಣಪತಿ ವ್ರತ (ಸಂಕಷ್ಟಹರ ಚತುರ್ಥೀ ವ್ರತ) ಎಂದು ಪ್ರಾಜ್ಞರು ಹೇಳುವರು. ಶುಚಿರ್ಭೂತನಾಗಿ ಅತಿರಸಗಳಿಂದಲೂ, ತುಪ್ಪದಿಂದ ಮಾಡಿದ ಕಡುಬುಗಳನ್ನೂ, ಪಾಯಸ ಮೊದಲಾದವುಗಳನ್ನೂ ನೈವೇದ್ಯ ಮಾಡಿ, ಮೌನದಿಂದ ಭೋಜನ ಮಾಡಬೇಕು. ಸುವರ್ಣ ಗಣಪತಿಯನ್ನು ಮಾಡಿಸಿ, ಆ ಪ್ರತಿಮೆಯನ್ನು ಲೋಪವಿಲ್ಲದೆ ತನ್ನ ಶಕ್ತಿಗೆ ಅನುಸಾರ ದಕ್ಷಿಣೆಯೊಂದಿಗೆ ಬ್ರಾಹ್ಮಣನಿಗೆ ದಾನ ಕೊಡಬೇಕು ಎಂದು ಹೇಳಿದ ಬ್ರಹ್ಮನನ್ನು ಪುನಃ ಸ್ತುತಿಸಿ, ದೇವತೆಗಳು ಚಂದ್ರನ ಸಮೀಪಕ್ಕೆ ಬಂದು ಹೇಳಲ್ಪಟ್ಟ ಪೂಜಾವಿಧಿಗಳನ್ನು ತಿಳಿಸಿದರು. ಅವರು ಹೇಳಿದಂತೆ ಚಂದ್ರನು ಧ್ಯಾನಾವಾಹನಾದಿಗಳಿಂದ ಪೂಜಿಸಲು, ಸಿದ್ಧಿವಿನಾಯಕನು ಆವಿರ್ಭವಿಸಿದನು. ಸುಪ್ರೀತನಾದ ಗಣಪತಿಯನ್ನು ನೋಡಿ ಸಂತುಷ್ಟಚಿತ್ತನಾದ ಚಂದ್ರನು ನೀನೇ ಸರ್ವಕ್ಕೂ ಕಾರಣೀಭೂತನಾದ ದೇವರು; ನೀನು ಪ್ರಸನ್ನನಾಗಬೇಕು. ಹೇ! ಜಗನ್ನಿವಾಸನೇ! ಲಂಬೋದರನೇ! ದೇವೇಶನೇ! ವಕ್ರತುಂಡನೇ! ಬ್ರಹ್ಮನಾರಾಯಣ ರಿಂದ ಪೂಜಿಸಲ್ಪಟ್ಟ ಸ್ವಾಮಿಯೇ! ಗರ್ವದಿಂದ ನಾನು ತಿಳಿಯದೇ ಮಾಡಿದ ಅಪಹಾಸ್ಯವನ್ನು ಮನ್ನಿಸು. ನಿನ್ನನ್ನು ಪೂಜಿಸದೆ ಯಾವ ಕಾರ್ಯಕ್ಕೂ ಯಾರು ಪ್ರಯತ್ನಪಟ್ಟರೂ ನಿರ್ವಿಘ್ನದಿಂದ ಅದನ್ನು ಸಾಧಿಸಲಾಗದು. ಈ ನಿನ್ನ ಪ್ರಭಾವವನ್ನು ನಿನ್ನಿಂದೀಗ ತಿಳಿದೆನು. ನಿನ್ನನ್ನು ಯಾರು ಉದಾಸೀನ ಮಾಡುವರೋ ಅವರಿಗೆ ನರಕವಾಸ ಪ್ರಾಪ್ತಿಯಾಗುವುದು.

ಕರುಣಾ ಸಮುದ್ರನೇ ! ಲಂಬೋದರನೇ! ಮದದಿಂದಾಡಿದ ನನ್ನ ಹಾಸ್ಯವನ್ನು ಕ್ಷಮಿಸು ಎಂದು ಬೇಡಿಕೊಳ್ಳಲು, ಗಣಾಧಿಪತಿಯು ಸಂತೋಷಪಟ್ಟು ನೀನು ಬೇಡಿದ ವರವನ್ನು ಕೊಡುತ್ತೇನೆಂದು ಹೇಳಲು, ಬ್ರಹ್ಮ ಮೊದಲಾದವರು ಬಂದು ಸ್ತುತಿಸಿ, ಚಂದ್ರನನ್ನು ಶಾಪದಿಂದ ವಿಮುಕ್ತನನ್ನಾಗಿ ಮಾಡಬೇಕೆಂದು ಕೇಳಿಕೊಳ್ಳಲು, ಬ್ರಹ್ಮನ ಮಾತಿನಂತೆ ಗಣೇಶಸ್ವಾಮಿಯು ಚಂದ್ರನಿಗೆ ವಿಶಾಪವನ್ನು ಮಾಡಿದನು. ಶುಕ್ಲಪಕ್ಷ ಚತುರ್ಥೀ ದಿನದಲ್ಲಿ ಯಾರು ಚಂದ್ರದರ್ಶನ ಮಾಡುತ್ತಾರೋ ಅವರು ಸಂವತ್ಸರಾಂತ್ಯದವರೆವಿಗೂ ನಿರರ್ಥಕವಾದ ಅಪವಾದವನ್ನು ಹೊಂದುತ್ತಾರೆಂಬುದರಲ್ಲಿ ಸಂಶಯವಿಲ್ಲ.

ಭಾದ್ರಪದ ಶುಕ್ಲಪಕ್ಷ, ಬಿದಿಗೆಯಲ್ಲಿ ನಿನ್ನನ್ನು ಯಾರು ನೋಡುತ್ತಾರೋ ಅವರನ್ನು ಚತುರ್ಥೀ ಚಂದ್ರದರ್ಶನದಿಂದ ಪ್ರಾಪ್ತವಾದ ದೋಷವು ಬಾಧಿಸಲಾರದು. ಅದಕ್ಕೋಸ್ಕರ ಅಂದು ಮೊದಲ್ಗೊಂಡು ಜನರು ಬಿದಿಗೆಯಲ್ಲಿಯೂ ಚಂದ್ರದರ್ಶನವನ್ನು ಶ್ರದ್ಧೆಯಿಂದ ಮಾಡುತ್ತಾರೆ ಎನ್ನಲು, ಚಂದ್ರನು ಗಣಪತಿಯನ್ನು ಕುರಿತು, ನಿನಗೆ ಮುಖ್ಯವಾದ ಪೂಜೆ ಮಾಡಬೇಕಾದರೆ ಯಾವ ದಿನ ಶ್ರೇಷ್ಠ ಎಂದು ಕೇಳಲು, ವಿನಾಯಕನು ಕೃಷ್ಣಪಕ್ಷ ಚತುರ್ಥಿಯಲ್ಲಿ ಗಣಪತಿಯನ್ನು ಪೂಜಿಸಿ ಕಡುಬುಗಳನ್ನು ಮಾಡಿ ನಿವೇದನೆಯನ್ನು ಮಾಡಬೇಕು.

ಶಕ್ತ್ಯಾನುಸಾರ ಗಣಪತಿ ವಿಗ್ರಹವನ್ನು ಚಿನ್ನದಲ್ಲಿಯಾಗಲೀ, ಚಿನ್ನವಿಲ್ಲದಿದ್ದರೆ ಬೆಳ್ಳಿಯಲ್ಲಾಗಲೀ, ಅದು ಇಲ್ಲದಿದ್ದರೆ ಮಣ್ಣಿನಿಂದಲಾದರೂ ಮಾಡಿಸಿ ಬ್ರಾಹ್ಮಣನಿಗೆ ಅದನ್ನು ಕೊಟ್ಟು ಈ ಕಥೆಯನ್ನು ಕೇಳಬೇಕು. ಈ ರೀತಿ ಮಾಡಿದರೆ ಜನರಿಗುಂಟಾದ ಕಷ್ಟಗಳನ್ನು ನಿವಾರಿಸುತ್ತೇನೆ; ಮತ್ತು ಕಲಶವನ್ನು ಧಾನ್ಯದ ಮೇಲಿಟ್ಟು, ಶಕ್ತ್ಯಾನುಸಾರ ಮಾಡಿಸಿದ ಪ್ರತಿಮೆಯನ್ನಿಟ್ಟು, ಎರಡು ವಸ್ತ್ರಗಳನ್ನು ಅದಕ್ಕೆ ಹೊದ್ದಿಸಿ, ರಾತ್ರಿ ಕಡುಬುಗಳನ್ನು ಮಾಡಿಸಿ, ನಿವೇದನೆಯನ್ನು ಮಾಡುತ್ತಾ ನಾಲ್ಕು ಜಾಮದಲ್ಲಿ ಪೂಜೆಯನ್ನೂ ಜಾಗರಣೆಯನ್ನು ಮಾಡಬೇಕು. ಶುಚಿರ್ಭೂತನಾಗಿ ಕೆಂಪು ಬಟ್ಟೆಗಳನ್ನುಟ್ಟುಕೊಂಡು ತನ್ನ ಪತ್ನಿಯೊಡಗೂಡಿ ಬ್ರಹ್ಮಚರ್ಯದಿಂದ ಶಕ್ತ್ಯಾನುಸಾರ ಪ್ರತಿಮೆಯನ್ನು ರಚಿಸಿ ಶಿವಪ್ರಿಯಾಯ ಎಂದು ವಸ್ತ್ರವನ್ನೂ, ವಿನಾಯಕಾಯ ಎಂದು ಅಂಗವಸ್ತ್ರವನ್ನೂ, ಲಂಬೋದರಾಯ ಎಂದು ಗಂಧವನ್ನೂ, ಸಿದ್ಧಿಪ್ರದಾಯಕನೇ ಎಂದು ಹೂವನ್ನೂ, ಗಜಮುಖಾಯ ಎಂದು ಧೂಪವನ್ನೂ, ಮೂಷಕವಾಹನನೇ ಎಂದುದೀಪವನ್ನೂ, ವಿಘ್ನೇಶ್ವರಾಯ ಎಂದು ನೈವೇದ್ಯವನ್ನೂ, ಸರ್ವಪ್ರಸಾಯಕನೇ ಎಂದು ಫಲವನ್ನೂ, ಕಾಮರೂಪಾಯ ಎಂದು ತಾಂಬೂಲವನ್ನೂ, ಧನದಾಯ ಎಂದು ದಕ್ಷಿಣಾದಿಗಳನ್ನೂ ಕೊಟ್ಟು ಪೂಜಿಸಬೇಕು. ಕಬ್ಬುಗಳಿಂದಲೂ ಕಡುಬುಗಳಿಂದಲೂ ಹೋಮವನ್ನು ಮಾಡಬೇಕು.

ನಂತರ ಸರ್ವಸಿದ್ಧಿ ವಿನಾಯಕನ ಪ್ರತಿಮೆಯನ್ನು ದಾನಕೊಡಬೇಕು. ಈ ವಿಧವಾಗಿ ಗಣಪತಿಯನ್ನು ಪೂಜೆ ಮಾಡಬೇಕು. ಕಥೆ ಪಠಣಾನಂತರ ಬ್ರಾಹ್ಮಣ ಪೂಜೆಯನ್ನು ಮಾಡಿ ಈ ವಿಧಾನೋಪಚಾರಗಳಿಂದ ನೀನು ಸಂತುಷ್ಟಿ ಪಡೆದು ನನ್ನ ಕಾರ್ಯಗಳಿಗೆ ವಿಘ್ನ ಬರದ ಹಾಗೆ ಮಾಡಬೇಕೆಂದು ಕೇಳಿಕೊಳ್ಳಬೇಕು. ತನಗೆ ಬೇಕಾದ ಪುತ್ರಪೌತ್ರ ಮಹದೈಶ್ವರ್ಯ ಮೊದಲಾದವುಗಳನ್ನು ದಯಪಾಲಿಸಬೇಕೆಂದು ಕೇಳಿಕೊಳ್ಳಬೇಕು ಮತ್ತು ಗೋದಾನ, ಧಾನ್ಯದಾನ, ವಸ್ತ್ರದಾನ ಇತ್ಯಾದಿ ದಾನಗಳನ್ನು ಕೊಟ್ಟು ತಾನು ಮೌನದಿಂದ ಭೋಜನ ಮಾಡುವಾಗ ಅತಿರಸ, ಕಡುಬು ಮುಂತಾದ ಮಧುರ ಪದಾರ್ಥಗಳನ್ನು ಭುಂಜಿಸಿ ಖಾರದ, ಉಪ್ಪಿನ ಪದಾರ್ಥಗಳನ್ನು ಬಿಡಬೇಕು, ಸಿಹಿಯಾದ ಅನೇಕ ಪದಾರ್ಥಗಳನ್ನು ನಿಷೇಧಿಸಬೇಕು.

ಈ ರೀತಿಯಾಗಿ ಮಾಡುವವರಿಗೆ ಯಾವಾಗ್ಯೂ ಜಯವನ್ನು ಉಂಟು ಮಾಡುತ್ತೇನೆ. ಪುತ್ರಹೀನರಿಗೆ ಸಂತಾನವನ್ನೂ, ನಿರ್ಗತಿಕರಿಗೆ ಧನಧಾನ್ಯ ಸಂಪತ್ತನ್ನೂ ಅನುಗ್ರಹಿಸುತ್ತೇನೆ ಎಂದು ವಿನಾಯಕನು ಚಂದ್ರನಿಗೆ ಹೇಳಿ ಅಂತರ್ಧಾನನಾದನು. ಎಲೈ ಕೃಷ್ಣನೇ, ನೀನು ಈ ವ್ರತವನ್ನು ಮಾಡು, ಸಿದ್ಧಿಯನ್ನು ಹೊಂದುತ್ತೀಯೇ! ಎಂದು ನಾರದರಿಂದ ಹೇಳಲ್ಪಟ್ಟ ಈ ವ್ರತವನ್ನು ಶ್ರೀಕೃಷ್ಣನು ಆಚರಿಸಿದನು : ಇದನ್ನು ಮಾಡಿದ ಕ್ಷಣವೇ ಅಕ್ರೂರನು ತನ್ನಲ್ಲಿದ್ದ ಸ್ಯಮಂತಕರತ್ನವನ್ನು ತಂದು ಸ್ವಾಮಿಗೆ ಅರ್ಪಿಸಿದನು. ಅಪವಾದ ನಿವೃತ್ತಿಯೂ ಆಯಿತು. ಬಲದೇವರು ಬಂದು ಸೇರಿದರು. ಶ್ರೀ ಕೃಷ್ಣನು ಸಂತೋಷಭರಿತನಾದನು. ಈ ಪ್ರಕಾರ ಸ್ಯಮಂತಕಮಣಿಯ ಉಪಾಖ್ಯಾನವನ್ನು ಯಾರು ಹೇಳುತ್ತಾರೋ ಅವರಿಗೆ ಚಂದ್ರದರ್ಶನದಿಂದುಂಟಾದ ದೋಷವು ನಿವೃತ್ತಿಯಾಗುವುದು.

ಭಾದ್ರಪದ ಶುಕ್ಲ ಚತುರ್ಥೀ ದಿನದಲ್ಲಿ ಚಂದ್ರದರ್ಶನವು ಶುಭವಲ್ಲ. ತತ್ಪರಿಹಾರಾರ್ಥವಾಗಿ ಈ ಸ್ಯಮಂತಕೋಪಾಖ್ಯಾನವನ್ನು ಕೇಳಬೇಕು. ಯಾವಾಗ ಯಾರಿಗೆ ಮನಸ್ಸಿಗೆ ಕಷ್ಟವೆಂದು ತಿಳಿಯುತ್ತದೋ ಆಗ ಆ ಕಥೆಯನ್ನು ಕೇಳಿದರೆ ಕಷ್ಟವೆಲ್ಲಾ ನಿವಾರಣೆಯಾಗುವುದು. ಈ ಪ್ರಕಾರ ಹೇಳಿ ಕೃಷ್ಣನಿಂದ ಪೂಜಿತನಾದ ವಿಘ್ನೇಶ್ವರನು ಅದೃಶ್ಯನಾದನು. ಭೂಲೋಕದಲ್ಲಿ ಸ್ತ್ರೀಯರಾಗಲೀ ಪುರುಷರಾಗಲೀ ಏನಾದರೊಂದು ಶುಭಕಾರ್ಯಗಳಾಗಬೇಕಾದ ಸಮಯದಲ್ಲಿ ವಿನಾಯಕನ ವ್ರತ ಮಾಡಿದರೆ ಅವರ ಕಾರ್ಯಗಳು ನಿರ್ವಿಘ್ನವಾಗಿ ನೆರವೇರುವುದಲ್ಲದೆ ಇಷ್ಟಾರ್ಥಗಳೂ ಸಿದ್ಧಿಸುವುವು. ಈ ರೀತಿ ಪ್ರಸಿದ್ಧಿಗೆ ಬಂದಿತೆಂದು ಶ್ರೀಕೃಷ್ಣನು ಧರ್ಮರಾಯನಿಗೆ ಹೇಳಲು, ಅದರಂತೆ ಧರ್ಮರಾಯನು ಆಚರಿಸಿ ಸಕಲ ಸುಖ ಸಂಪತ್ತುಗಳನ್ನು ಪಡೆದನು.

ಸ್ಯಮಂತಕೋಪಾಖ್ಯಾನ ಮುಗಿಮುದು

.................





## ಶಾಪ ವಿಮೋಚನಾ ಮಂತ್ರ ಜಪ ವಿಧಾನ

**ಸಿಂಹಃ ಪ್ರಸೇನಮವಧೀತ್ ಸಿಂಹೋಜಾಂಬವತಾಹತಃ।**
**ಸುಕುಮಾರಕಮಾರೋಧೀಃ ತವಹ್ಯೇಷಾ ಸ್ಯಮಂತಕಃ॥**

21 ಸಲ ಜಪ, 21 ಗರಿಕೆಯಿಂದ ಕ್ಷೀರತರ್ಪಣ ಮಾಡಿ, ಆ ಕ್ಷೀರವನ್ನು ತಾನು ಸೇವಿಸಿ, ನಿಷ್ಕಾಮವಾಗಿ ಮಲಗಬೇಕು. ಒಂದು ವೇಳೆ ದೋಷ ಉಳಿದಿದ್ದರೆ ಮುಂದಿನ ಮಾಸದ ಚೌತಿಯಲ್ಲಿ ಈ ವ್ರತ ಮಾಡಿ ಪೂರ್ತಿಗೊಳಿಸಬೇಕು. ಎರಡು ಸಲ ಮಾಡಿದರೂ ತಪ್ಪಾಗುವುದಿಲ್ಲ.

---- ಶಾಂತಿ ಶಾಂತಿ ----

## ಅಥ ಗಣಪತಿ ವಿಸರ್ಜನ ಪೂಜಾ

ವಿನಾಯಕ ವಿಗ್ರಹವನ್ನು ಶುಭದಿನದಲ್ಲಿ – ಶುಭವೇಳೆಯಲ್ಲಿ ಶಾಸ್ತ್ರೋಕ್ತ ರೀತಿಯಲ್ಲಿ ವಿಸರ್ಜಿಸಬೇಕು.

**ಆಚಮ್ಯ - ಪ್ರಾಣಾನಾಯಮ್ಯ - ದೇಶಕಾಲೌಸಂಕೀರ್ತ್ಯ ವಿನಾಯಕ ವಿಸರ್ಜನಪೂಜಾಂ ಕರಿಷ್ಯೇ, ಧ್ಯಾನವಾಹನಾದಿ ಷೋಡಶೋಪಚಾರ ಪೂಜಾಂ ಸಮರ್ಪ್ಯ, ಧೂಪ-ದೀಪ-ನೈವೇದ್ಯ-ನೀರಾಜನಂ ಚ ಕೃತ್ವಾ॥**

ವಿಸರ್ಜನೆಯ ದಿನ ಬೆಳಿಗ್ಗೆ ಸ್ನಾನ ಸಂಧ್ಯಾವಂದನಾದಿ ನಿತ್ಯವಿಧಿಗಳನ್ನು ಪೂರೈಸಿ, ವಿನಾಯಕನಿಗೆ ಷೋಡಶೋಪಚಾರ ಪೂಜೆಯನ್ನು ಸಲ್ಲಿಸಿ, ಧೂಪ ದೀಪಗಳಿಂದ ಪೂಜಿಸಿ, ನೈವೇದ್ಯ ಅರ್ಪಿಸಿ ನಂತರ ಆರತಿ ಮಾಡಿ ಈ ಮುಂದೆ ತಿಳಿಸುವ ಶ್ಲೋಕಗಳನ್ನು ಹೇಳಿ ಗಣಪತಿವಿಗ್ರಹವನ್ನು ವಿಸರ್ಜಿಸಬೇಕು.

**ಯಾಂತು ದೇವಗಣಾಃ ಸರ್ವೇ**
**ಪೂಜಾಮಾದಾಯ ಪಾರ್ಥಿವೀಂ।**
**ಇಷ್ಟಕಾಮ್ಯಾರ್ಥ ಸಿದ್ಧ್ಯರ್ಥಂ**
**ಪುನರಾಗಮನಾಯ ಚ॥**

(ವಿನಾಯಕ ವಿಗ್ರಹವನ್ನು ಕೆರೆ–ನದಿ–ಬಾವಿ ಮುಂತಾದ ಶುದ್ಧ ಜಲಾಶಯದಲ್ಲಿ ವಿಸರ್ಜಿಸಬೇಕು).

ವಿನಾಯಕ ವಿಗ್ರಹವನ್ನು ವಿಸರ್ಜನೆಗಾಗಿ ತೆಗೆದುಕೊಂಡು ಹೋಗುವಾಗ ಘಂಟಾನಾದ ಮಾಡುತ್ತಲೇ ಇರಬೇಕು. ವಿಗ್ರಹವನ್ನು ನೀರಿನಲ್ಲಿ ಎರಡುಸಾರಿ ಮುಳುಗಿಸಿ ಮೇಲಕ್ಕೆ ತೆಗೆದು, ಮೂರನೇ ಸಾರಿ ಮುಳುಗಿಸಿ ಹಾಗೆಯೇ ನೀರಿನಲ್ಲಿ ವಿಸರ್ಜಿಸಿ ನಂತರ ವೀಳ್ಯದೆಲೆಯ ಮೇಲೆ ಕರ್ಪೂರ ಹಚ್ಚಿ ನೀರಿನಲ್ಲಿ ತೇಲಿ ಬಿಡಬೇಕು. ನಂತರ ಆ ನೀರನ್ನು ತಲೆಯ ಮೇಲೆ ಪ್ರೋಕ್ಷಿಸಿಕೊಂಡು ತಂದಿರಬಹುದಾದ ಪ್ರಸಾದವನ್ನು ಎಲ್ಲರಿಗೂ ನೀಡಿ ತಾವು ಸೇವಿಸಿ ಹಿಂತಿರುಗಬೇಕು.



# ಶ್ರೀ ಸ್ವರ್ಣಗೌರೀ ವ್ರತ

## ಪೀಠಿಕೆ

ಈ ವ್ರತವನ್ನು ಭಾದ್ರಪದ ಶುದ್ಧ ತೃತೀಯಾ (ತದಿಗೆ) ದಿನ ಆಚರಿಸತಕ್ಕದ್ದು.ತದಿಗೆ ತಿಥಿ ಒಂದು ದಿನವೆಲ್ಲಾ ಪೂರ್ತಿಯಾಗಿದ್ದು ಮರುದಿನ ಸ್ವಲ್ಪ ಮಾತ್ರ ಇದ್ದರೂ ಈ ವ್ರತವನ್ನು ಎರಡನೆಯ ದಿನವೇ ಆಚರಿಸತಕ್ಕದ್ದು. ಸಾಮಾನ್ಯವಾಗಿ ಎಲ್ಲಾ ಶುಭಕಾರ್ಯಗಳಿಗೂ ಸೂರ್ಯೋದಯ ಕಾಲದಲ್ಲಿ ಯಾವ ತಿಥಿ ಇರುವುದೋ ಅದೇ ಪ್ರಾಧಾನ್ಯವೆಂದು ತಿಳಿಯಬೇಕು.

ಸುವರ್ಣ ಗೌರಿಯನ್ನಾಗಲಿ, ಮೃತ್ತಿಕಾಮೂರ್ತಿಯನ್ನಾಗಲಿ, ಯಥಾ ಶಕ್ತಿ ಅವರವರ ಸಂಪ್ರದಾಯದಂತೆ, ನದಿಯಲ್ಲಿ ಮುಳುಗಿ ತೆಗೆದ ಶುದ್ಧವಾದ ಮರಳಿನಿಂದಾಗಲಿ ಅಥವಾ ಹರಿದ್ರಾಗೌರಿಯನ್ನಾಗಲಿ ಸ್ವರ್ಣಮಯವಾದ ಕಲಶದಲ್ಲಿ ಆವಾಹಿಸಿ, ಕಲಶವನ್ನು ತೋರಣ, ರಂಗವಲ್ಲಿ, ಪುಷ್ಪ, ಫಲ ಮುಂತಾದ ಮಂಗಳದ್ರವ್ಯಗಳಿಂದ ಅಲಂಕರಿಸಿದ ಮಂಟಪದಲ್ಲಿ ಸ್ಥಾಪಿಸಿ ಪೂಜೆ ಆರಂಭಿಸಬೇಕು.

## -: ವ್ರತಕ್ಕೆ ಸಿದ್ಧತೆಗಳು :-

1. ಸ್ವರ್ಣಗೌರೀ ಪ್ರತಿಮೆ – ಕಲಶ – ತೆಂಗಿನಕಾಯಿಗಳು
2. ಪದಿನಾರು ಎಳೆಯ ಪೊಸದಾರ.
3. ಐದಾರು ಬಗೆಯ ಪತ್ರಗಳು – ಬಿಡಿ ಹೂಗಳು.
4. ತಂಬಿಟ್ಟಿನ ಕದಲಾರತಿ.

## ಪೂಜಾ ವಿಧಾನ

### ಧ್ಯಾನ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ ॥

**ಘಂಟಾನಾದ**

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ। ಕುರ್ವೇ ಘಂಟಾರವಂ ತತ್ರ ದೇವತಾಹ್ವಾನ ಲಾಂಛನಮ್॥

**ಆಚಮನ**

ಕೇಶವಾಯ ಸ್ವಾಹಾ (ನಮಃ)। ನಾರಾಯಣಾಯ ಸ್ವಾಹಾ (ನಮಃ)। ಮಾಧವಾಯ ಸ್ವಾಹಾ (ನಮಃ) ಗೋವಿಂದಾಯ ನಮಃ। ವಿಷ್ಣವೇ ನಮಃ। ಮಧು– ಸೂದನಾಯ ನಮಃ। ತ್ರಿವಿಕ್ರಮಾಯ ನಮಃ। ವಾಮನಾಯ ನಮಃ। ಶ್ರೀಧರಾಯ ನಮಃ। ಹೃಷೀಕೇಶಾಯ ನಮಃ। ಪದ್ಮನಾಭಾಯ ನಮಃ। ದಾಮೋದರಾಯ ನಮಃ। ಸಂಕರ್ಷಣಾಯ ನಮಃ। ವಾಸುದೇವಾಯ ನಮಃ। ಪ್ರದ್ಯುಮ್ನಾಯ ನಮಃ। ಅನಿರುದ್ಧಾಯ ನಮಃ। ಪುರುಷೋತ್ತಮಾಯ ನಮಃ। ಅಧೋಕ್ಷಜಾಯ ನಮಃ। ನಾರಸಿಂಹಾಯ ನಮಃ। ಅಚ್ಯುತಾಯ ನಮಃ। ಜನಾರ್ದನಾಯ ನಮಃ। ಉಪೇಂದ್ರಾಯ ನಮಃ। ಹರಯೇ ನಮಃ। ಓಂ ಶ್ರೀಕೃಷ್ಣಾಯ ನಮಃ।

**ಪ್ರಾಣಾಯಾಮ**

ಪ್ರಣವಸ್ಯ ಪರಬ್ರಹ್ಮಾ ಋಷಿಃ। ಪರಮಾತ್ಮಾ ದೇವತಾ। ದೈವೀ ಗಾಯತ್ರೀಚ್ಛಂದಃ ಪ್ರಾಣಾಯಾಮೇ ವಿನಿಯೋಗಃ।

ಓಂ ಭೂಃ। ಓಂ ಭುವಃ। ಓಂ ಸುವಃ। ಓಂ ಮಹಃ। ಓಂ ಜನಃ। ಓಂ ತಪಃ। ಓಗ್ಂ ಸತ್ಯಂ। ಓಂ ತತ್ಸವಿತುರ್ವರೇಣ್ಯಂ। ಭರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್। ಓಮಾಪೋಜ್ಯೋತೀ ರಸೋಽಮೃತಂ ಬ್ರಹ್ಮ ಭೂರ್ಭುವಸ್ಸು– ವರೋಂ॥

**ಸಂಕಲ್ಪ**

ಶುಭೇ ಶೋಭನೇ ಮುಹೂರ್ತೇ ಆದ್ಯಬ್ರಹ್ಮಣಃ ದ್ವಿತೀಯ ಪ್ರಹರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಪ್ರಥಮ ಪಾದೇ ಜಂಬೂದ್ವೀಪೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇ ತೀರೇ ಶಾಲಿವಾಹನಶಕೇ ಅಸ್ಮಿನ್ ವರ್ತಮಾನೇ ವ್ಯಾವಹಾರಿಕೇ ಚಾಂದ್ರಮಾನೇನ ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ.... ಸಂವತ್ಸರೇ..... ಅಯನೇ..... ಋತೌ...... ಮಾಸೇ...... ಪಕ್ಷೇ..... ಶುಭತಿಥೌ ವಾಸರಯುಕ್ತಾಯಾಂ ಮಹಾನಕ್ಷತ್ರಯುಕ್ತಾಯಾಂ ಶುಭಯೋಗ ಶುಭಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಮಮ ಉಪಾತ್ತ ಸಮಸ್ತ ದುರಿತಕ್ಷಯ ದ್ವಾರಾ ಶ್ರೀ ಸ್ವರ್ಣಗೌರೀ ಪ್ರೀತ್ಯರ್ಥಂ.....

ಮಮ ಯಾವಜ್ಜೀವ ದೀರ್ಘ ಸೌಮಂಗಲ್ಯಾಭಿವೃದ್ಧ್ಯರ್ಥಂ। ಪುತ್ರ ಪೌತ್ರ ಸಂಪತ್ಸೌಭಾಗ್ಯ ಸಿದ್ಧ್ಯರ್ಥಂ । ಧನಕನಕ ವಸ್ತುವಾಹನಧಾನ್ಯ ಪಶುಸುತ ಕ್ಷೇತ್ರಾಯುರಾರೋಗ್ಯ ಐಶ್ವರ್ಯಾದಿ ಸಕಲ ಮನೋರಥಾವಾಪ್ತ್ಯರ್ಥಂ॥ ಸಮಸ್ತ ಮಂಗಳಾವಾಪ್ತ್ಯರ್ಥಂ। ಸಂಪೂರ್ಣ ಸಮಗ್ರ ಸಕಲ ಫಲಾವಾಪ್ತ್ಯರ್ಥಂ। ಧರ್ಮಾರ್ಥ ಕಾಮಮೋಕ್ಷ ಚತುರ್ವಿಧ ಫಲ ಪುರುಷಾರ್ಥ ಸಿದ್ಧ್ಯರ್ಥಂ। ಸತ್ಸಂತಾನ ಸೌಭಾಗ್ಯ ಶುಭಫಲಾವಾಪ್ತ್ಯರ್ಥಂ। ವರ್ಷೇ ವರ್ಷೇ ಕರ್ತವ್ಯಮೇತದ್ವರ್ಷ ಪ್ರಯುಕ್ತ....

ಶ್ರೀ ಸ್ವರ್ಣಗೌರೀ ದೇವತಾ ಉದ್ದಿಶ್ಯ ಶ್ರೀ ಸ್ವರ್ಣಗೌರೀ ದೇವತಾ ಪ್ರೀತ್ಯರ್ಥಂ ಭವಿಷ್ಯೋತ್ತರಪುರಾಣೋಕ್ತ ಪ್ರಕಾರೇಣ ಯಥಾಶಕ್ತಿ ಸಂಭವತಾ ನಿಯಮೇನ। ಸಂಭವತಾ ಪ್ರಕಾರೇಣ। ಸಂಭವದ್ಭಿರ್ದ್ರವ್ಯೈ ೈಃ.। ಸಂಭವದ್ಭಿರುಪಚಾರೈಶ್ಚ ಯಾವಚ್ಛಕ್ತಿ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾಂ ಕರಿಷ್ಯೇ॥

**ಕಲಶಪೂಜಾ**

ಕಲಶಂ ಗಂಧಾಕ್ಷತ ಪುಷ್ಪೈರಭ್ಯರ್ಚ (ಕಲಶಕ್ಕೆ ಮೂರು ಕಡೆಗಳಲ್ಲಿ ಗಂಧವನ್ನಿಟ್ಟು ಅಕ್ಷತೆಯನ್ನು ಗಂಧದ ಬೊಟ್ಟಿನ ಮೇಲೆ ಒತ್ತಿ ಕಲಶದಲ್ಲಿ ಪುಷ್ಪವನ್ನು ಹಾಕಿ ಕಲಶದ ಮೇಲೆ ಕೈಯನ್ನು ಹಿಡಿದುಕೊಳ್ಳುವುದು).

ಶ್ಲೋಕ॥ ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ॥ ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾ। ಕುಕ್ಷೌತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ । ಋಗ್ವೇದೋऽಥ ಯಜುರ್ವೇದಃ ಸಾಮವೇದ್ಯೋಹ್ಯಥರ್ವಣಃ॥ ಅಂಗೈಶ್ಚಸ್ಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾ–। ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕ। ಗಂಗೇ ಚ ಯಮುನೇ ಚೈವ ಗೋದಾವರೀ ಸರಸ್ವತೀ। ನರ್ಮದಾ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು॥

ಮಂತ್ರ : ಆಪೋವಾ ಇದಗ್ಂ ಸರ್ವಂ ವಿಶ್ವಾ ಭೂತಾನ್ಯಾಪಃ॥ ಪ್ರಣವ ಆಪಃ ಪಶವ ಅಪೋऽನ್ನಮಾಪೋऽಮೃತಮಾಪೋ ಸಾಮ್ರಾಡಾಪೋ ವಿರಾಡಾಪ ಸ್ಸ್ವರಾಡಾಪಶ್ಛಂದಾಗ್ಂಷ್ಯಾಪೋ ಜೋತೀಗ್ಂಷ್ಯಾಪೋ ಯಜೂಗ್ಂಷ್ಯಾಪೋ ಸತ್ಯಮಾಪಸ್ಸರ್ವಾ ದೇವತಾ ಆಪೋ ಭೂರ್ಭುವಸ್ಸುವರಾಪ ಓಂ॥

ಕಲಶೋದಕೇನ ಪೂಜಾದ್ರವ್ಯಾಣಿ ಸಂಪ್ರೋಕ್ಷ್ಯ ದೇವಮಾತ್ಮಾನಂ ಪ್ರೋಕ್ಷಯೇತ್ (ಕಲಶದಲ್ಲಿರುವ ನೀರನ್ನು ತೆಗೆದುಕೊಂಡು ದೇವರ ಮೇಲೆಯೂ ಪೂಜಾದ್ರವ್ಯಗಳ ಮೇಲೂ ಪೋಕ್ಷಣೆಯನ್ನು ಮಾಡಬೇಕು. ತನ್ನ ಶಿರಸ್ಸಿನಲ್ಲೂ ಪ್ರೋಕ್ಷಿಸಿಕೊಳ್ಳಬೇಕು).

(ಸೂಚನೆ : ಯಾವ ವ್ರತವನ್ನು ಮಾಡಬೇಕಾದರೂ ಘಂಟಾನಾದ, ಆಚಮನ, ಪ್ರಾಣಾಯಾಮ, ಸಂಕಲ್ಪ, ದೇವತಾ ಪ್ರತಿಷ್ಠಾಪನೆ, ಕಲಶಸ್ಥಾಪನೆ, ಕಲಶಪೂಜೆ–

ಕಲಶೋದಕದಿಂದ ಪೂಜೋಪಕರಣ ದ್ರವ್ಯ, ದೇವತಾ ಮತ್ತು ಸ್ವತಃ ಪ್ರೋಕ್ಷಣೆ ಆದನಂತರ ಮಹಾಗಣಪತಿಯನ್ನು ಪೂಜಿಸಿ, ಅನಂತರ ವ್ರತವನ್ನು ಆಚರಿಸಬೇಕು. ಆದ ಕಾರಣ ಅಂತಹ ಮಹಾಗಣಪತಿ ಪೂಜಾವಿಧಾನವನ್ನು ಇಲ್ಲಿ ಕೊಟ್ಟಿದೆ).

## ಮಹಾಗಣಪತಿ ಪೂಜಾ

*(ಮಹಾಗಣಪತಿ ಪ್ರತಿಮೆಯನ್ನಾಗಲೀ ಅಥವಾ ಮೂರ್ತಿಯನ್ನಾಗಲಿ ಇಲ್ಲವೆ : ಈ ಪ್ರಕಾರ ಮಂತ್ರಾಕ್ಷತೆಯಲ್ಲಾಗಲೀ ರಚಿಸಿ ಮಹಾ ಗಣಪತಿಯನ್ನು ಧ್ಯಾನಿಸತಕ್ಕದ್ದು. ಕೆಲವರು ಗೋಮಯದ ಉಂಡೆಯ ಮೇಲೆ ಗರಿಕೆಯನ್ನು ಸಿಕ್ಕಿಸಿ ಗಣಪತಿಯ ಆವಾಹನೆ ಮಾಡುತ್ತಾರೆ).

ತದಂಗತ್ವೇನ ಆರಬ್ಧವ್ರತಸ್ಯ ನಿರ್ವಿಘ್ನತಾ ಸಿದ್ಧ್ಯರ್ಥಂ ಆದೌ ಮಹಾಗಣಪತಿ ಪೂಜಾಂ ಕರಿಷ್ಯೇ।

ಓಂ ಗಣಾನಾಂ ತ್ವಾ ಗಣಪತಿಗ್ಂ ಹವಾಮಹೇ। ಕವಿಂ ಕವೀನಾ ಮುಪವಶ್ರವಸ್ತಮಂ। ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ। ಆ ನಃ ಶೃಣ್ವನ್ನೂತಿಭಿಸ್ಸೀದ ಸಾದನಂ॥

ಓಂ ಭೂಃ ಗಣಾಧಿಪತಿಮಾವಾಹಯಾಮಿ। ಓಂ ಭುವಃ ಗಣಾಧಿಪತಿ– ಮಾವಾಹಯಾಮಿ। ಓಗ್ಂ ಸುವಃ ಗಣಾಧಿಪತಿಮಾವಾಹಯಾಮಿ॥ ಓಂ ಭೂರ್ಭುವಸ್ಸುವಃ ಗಣಾಧಿಪತಿಮಾವಾಹಯಾಮಿ॥

ಶ್ರೀ ಮಹಾಗಣಾಧಿಪತಯೇ ನಮಃ ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ। ಆವಾಹಯಾಮಿ ಆಸನಂ ಸಮರ್ಪಯಾಮಿ। ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ। ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ। ಮುಖೇ ಆಚಮನೀಯಮಾಚಮನೀಯಂ ಸಮರ್ಪಯಾಮಿ।

## ಸ್ನಾನಂ

ಓಂ ಆಪೋ ಹಿಷ್ಠಾ ಮಯೋ ಭುವಃ। ಸ್ಥಾನ ಊರ್ಜೇ ದದಾತನು ಮಹೇರಣಾಯ ಚಕ್ಷಸೇ ಯೋವಶ್ಶಿವತಮೋರಸಃ। ತಸ್ಯಭಾಜಯತೇ ಹ ನಃ। ಉಶತೀರಿವ ಮಾತರಃ ತಸ್ಮಾ ಅರಂಗಮಾಮವೋ ಯಸ್ಯಕ್ಷಯಾಯ ಜಿನ್ವಥ ಆಪೋಜನ ಯಥಾ ಚ ನಃ।

ಶ್ರೀ ಮಹಾಗಣಪತಯೇ ನಮಃ ಔಪಚಾರಿಕಸ್ನಾನಂ ಸಮರ್ಪಯಾಮಿ।

## ವಸ್ತ್ರ

ಯುವಂ ವಸ್ತ್ರಾಣಿ ಪೀವಸಾ ವಸಾಥೇ ಯುವೋರಚ್ಛಿದ್ರಾಮಂ ತವೋಹ ಸರ್ಗಾಃ। ಅವಾತಿರತಮನೃತಾನಿ ವಿಶ್ವಾ। ಋತೇನ ಮಿತ್ರಾವರುಣ ಸಚೇಥೇ ಶ್ರೀ ಮಹಾಗಣಾಧಿ ಪತಯೇ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ।

**ಉಪವೀತ**

ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹಜಂ ಪುರಸ್ತಾತ್।
ಆಯುಷ್ಯಮಗ್ರಿಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ॥
ಶ್ರೀ ಮಹಾಗಣಪತಯೇ ನಮಃ ಯಜ್ಞೋಪವೀತಂ ಸಮರ್ಪಯಾಮಿ। ಶ್ರೀ ಮಹಾ ಗಣಪತಯೇ ನಮಃ ಆಭರಣಾನಿ ಸಮರ್ಪಯಾಮಿ।

**ಗಂಧ**

ಗಂಧದ್ವಾರಾಂ ಧುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣಿಂ ಈಶ್ವರೀಗ್ಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ। ಶ್ರೀಮಹಾಗಣಪತಯೇ ನಮಃ ದಿವ್ಯ ಪರಿಮಳ ಗಂಧಾನ್ ಸಮರ್ಪಯಾಮಿ।

**ಅಕ್ಷತೆ**

ಅಯನೇ ತೇ ಪರಾಯಣೇ ದೂರ್ವಾ ರೋಹಂತು ಪುಷ್ಪಿಣೀಃ ಹ್ರದಾಶ್ಚ
ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ॥
ಶ್ರೀ ಮಹಾಗಣಪತಯೇ ನಮಃ ಅಕ್ಷತಾನ್ ಸಮರ್ಪಯಾಮಿ।

**ಪುಷ್ಪ**

**ಅಥ ಪುಷ್ಪೈಃ ಪೂಜಯಾಮಿ**

| | |
|---|---|
| ಓಂ ಸುಮುಖಾಯ ನಮಃ | ಓಂ ಏಕದಂತಾಯ ನಮಃ |
| ಓಂ ಕಪಿಲಾಯ ನಮಃ | ಓಂ ಗಜಕರ್ಣಕಾಯ ನಮಃ |
| ಓಂ ಲಂಬೋದರಾಯ ನಮಃ | ಓಂ ವಿಕಟಾಯ ನಮಃ |
| ಓಂ ವಿಘ್ನರಾಜಾಯ ನಮಃ | ಓಂ ಗಣಾಧ್ಯಕ್ಷಾಯ ನಮಃ |
| ಓಂ ಫಾಲಚಂದ್ರಾಯ ನಮಃ | ಓಂ ಗಜಾನನಾಯ ನಮಃ |
| ಓಂ ಈಶಪುತ್ರಾಯ ನಮಃ | ಓಂ ಕುಮಾರಗುರವೇ ನಮಃ |
| ಓಂ ಮೂಷಕವಾಹನಾಯ ನಮಃ | ಓಂ ವಕ್ರತುಂಡಾಯ ನಮಃ |
| ಓಂ ಶೂರ್ಪಕರ್ಣಾಯ ನಮಃ | ಓಂ ಸ್ಕಂದಪೂರ್ವಜಾಯ ನಮಃ |

ಶ್ರೀ ಮಹಾಗಣಪತಯೇ ನಮಃ ನಾನಾವಿಧ ಪರಿಮಳ ಪತ್ರ ಪುಷ್ಪಾಣಿ ಸಮರ್ಪಯಾಮಿ।

**ಧೂಪ**

ವನಸ್ಪತಿರಸೋ ದಿವ್ಯೋ ನಾನಾಗಂಧೈಸ್ಸಂಯುತಃ। ಆಘ್ರೇಯಸ್ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ॥

ಶ್ರೀ ಮಹಾಗಣಪತಯೇ ನಮಃ ಧೂಪಮಾಘ್ರಾಪಯಾಮಿ।

## ದೀಪ

ಸಾಜ್ಯಂ ತ್ರಿವರ್ತಿ ಸಂಯುಕ್ತಂ ವಹ್ನಿನಾ ಯೋಜಿತಂ ಮಯಾ। ಗೃಹಾಣ ಮಂಗಳಂ ದೀಪಂ ತ್ರೈಲೋಕ್ಯತಿಮಿರಾಪಹ ॥ ಭಕ್ತ್ಯಾ ದೀಪಂ ಪ್ರಯಚ್ಛಾಮಿ ದೇವಾಯ ಪರಮಾತ್ಮನೇ । ತ್ರಾಹಿ ಮಾಂ ನರಕಾದ್ಘೋರಾತ್ ದಿವ್ಯ ಜ್ಯೋತಿರ್ನಮೋಸ್ತು ತೇ।

ಶ್ರೀ ಮಹಾಗಣಪತಯೇ ನಮಃ ದೀಪಂ ದರ್ಶಯಾಮಿ।

ಧೂಪದೀಪಾನಂತರಂ ಆಚಮನೀಯಂ ಸಮರ್ಪಯಾಮಿ। ಆಚಮನೀಯಾನಂತರಂ ಪುನಃ ಪರಿಮಳ ಪತ್ರ ಪುಷ್ಪಾಣಿ ಸಮರ್ಪಯಾಮಿ।

## ನೈವೇದ್ಯ

ವಿಶ್ವಾಮಿತ್ರ ಋಷಿಃ। ಸವಿತಾ ದೇವತಾ। ದೈವಿ ಗಾಯತ್ರೀ ಛಂದಃ। ಓಂ ಭೂರ್ಭುವಸ್ಸುವಃ । ಓಂ ತತ್ಸವಿತುರ್ವರೇಣ್ಯಂ । ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್॥ ಸತ್ಯಂ ತ್ವರ್ತೇನ ಪರಿಷಿಂಚಾಮಿ। ಕಾಮಧೇನುಂ ಸ್ಮರಾಮಿ। ಅಮೃತಮಸ್ತು। ಅಮೃತೋಪಸ್ತರಣಮಸಿ ಸ್ವಾಹಾ। ಓಂ ಪ್ರಾಣಾಯ ಸ್ವಾಹಾ। ಓಂ ಅಪಾನಾಯ ಸ್ವಾಹಾ। ಓಂ ವ್ಯಾನಾಯ ಸ್ವಾಹಾ। ಓಂ ಉದಾನಾಯ ಸ್ವಾಹಾ। ಓಂ ಸಮಾನಾಯ ಸ್ವಾಹಾ। ಓಂ ಬ್ರಹ್ಮಣೇ ಸ್ವಾಹಾ।

ಶ್ರೀ ಮಹಾಗಣಪತಯೇನಮಃ ಯಥಾಭಾಗಂ ಗುಡಂ ನಿವೇದಯಾಮಿ। ಸಮಸ್ತ ಭಕ್ಷ ಭೋಜ್ಯ ನೈವೇದ್ಯಂ ಸಮರ್ಪಯಾಮಿ । ಕದಲೀಫಲ ನಾರಿಕೇಲ ಫಲ ಖರ್ಜೂರ ದ್ರಾಕ್ಷಾದಿ ಫಲಾದಿ ಸಮರ್ಪಯಾಮಿ। ಮಧ್ಯೇ ಮಧ್ಯೇ ಸ್ವಾದೋದಕಂ ಸಮರ್ಪಯಾಮಿ। ಉತ್ತರಾಪೋಶನಂ ಸಮರ್ಪಯಾಮಿ। ಹಸ್ತಪ್ರಕ್ಷಾಳನಂ ಸಮರ್ಪಯಾಮಿ। ಪಾದ ಪ್ರಕ್ಷಾಳನಂ ಸಮರ್ಪಯಾಮಿ। ಕರೋದ್ವರ್ತನಂ ಸಮರ್ಪಯಾಮಿ। ಪುನರಾಚಮನೀಯಂ ಸಮರ್ಪಯಾಮಿ।

## ತಾಂಬೂಲಂ

ಪೂಗೀಫಲ ಸಮಾಯುಕ್ತಂ ನಾಗವಲ್ಲೀದಳೈರ್ಯುತಂ। ಕರ್ಪೂರ ಚೂರ್ಣ ಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ॥

ಶ್ರೀ ಮಹಾಗಣಪತಯೇ ನಮಃ ಪೂಗೀಫಲತಾಂಬೂಲಂ ಸಮರ್ಪಯಾಮಿ।

## ಸುವರ್ಣಪುಷ್ಪ

ಹಿರಣ್ಯಗರ್ಭ ಹೇಮಬೀಜಂ ವಿಭಾವಸೋಃ ಅನಂತಪುಣ್ಯ ಫಲದಂ ಅತಶ್ಶಾಂತಿಂ ಪ್ರಯಚ್ಛ ಮೇ॥

ಶ್ರೀ ಮಹಾಗಣಪತಯೇ ನಮಃ ಸುವರ್ಣಪುಷ್ಪಂ ಸಮರ್ಪಯಾಮಿ।

## ಉತ್ತರ ನೀರಾಜನ (ಕರ್ಪೂರಾರತಿ)

ಹಿರಣ್ಯಪಾತ್ರಂ ಮಧೋಃ ಪೂರ್ಣಂ ದಧಾತಿ। ಮಧುವ್ಯೋಸಾನೀತಿ। ಏಕಧಾ ಬ್ರಹ್ಮಣ ಉಪಹರತಿ। ಏಕಧ್ಯೈವ ಯಜಮಾನ ಆಯುಸ್ತೇಜೋ ದಧಾತಿ। ಶ್ರೀ ಮಹಾಗಣಪತಯೇ ನಮಃ ಕರ್ಪೂರಉತ್ತರನೀರಾಜನಂ ದರ್ಶಯಾಮಿ॥

ನೀರಾಜನಾನಂತರಂ ಆಚಮನೀಯಂ ಸಮರ್ಪಯಾಮಿ। ಆಚಮನೀಯಾ–ನಂತರಂ ಪರಿಮಳ ಪತ್ರ ಪುಷ್ಪಾಣಿ ಸಮರ್ಪಯಾಮಿ॥

## ಮಂತ್ರಪುಷ್ಪ

ಗಜಾನನಂ ಭೂತಗಣಾಧಿಸೇವಿತಂ ಕಪಿತ್ಥ ಜಂಭೂಫಲಸಾರಭಕ್ಷಿತಂ। ಉಮಾಸುತಂ ಶೋಕ ವಿನಾಶಕಾರಣಂ ನಮಾಮಿ ವಿಘ್ನೇಶ್ವರ ಪಾದ ಪಂಕಜಂ॥

ಶ್ರೀ ಮಹಾಗಣಪತಯೇ ನಮಃ ವೇದೋಕ್ತ ಮಂತ್ರಪುಷ್ಪಂ ಸಮರ್ಪಯಾಮಿ।

## ಪ್ರದಕ್ಷಿಣ ನಮಸ್ಕಾರ

ಪ್ರದಕ್ಷಿಣತ್ರಯಂ ದೇವ ಪ್ರಯತ್ನೇನ ಮಯಾ ಕೃತಂ। ಮಮ ಪಾಪಾನಿ ಸರ್ವಾಣಿ ವ್ಯಪೋಹತು ಗಣೇಶ್ವರ।

॥ಶ್ರೀ ಮಹಾಗಣಪತಯೇ ನಮಃ ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ॥

## ಪ್ರಾರ್ಥನಾ

ವಕ್ರತುಂಡ ಮಹಾಕಾಯ ಕೋಟಿಸೂರ್ಯ ಸಮಪ್ರಭ। ನಿರ್ವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ॥

ಶ್ರೀ ಮಹಾಗಣಪತಯೇ ನಮಃ ಮನಸಾಭೀಷ್ಟ ಪ್ರಾರ್ಥನಾಂ ಸಮರ್ಪಯಾಮಿ।

ಅನಯಾ ಮಯಾ ಕೃತ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಯಾ ಭಗವಾನ್ ಶ್ರೀ ಮಹಾಗಣಪತಿಃ ಸುಪ್ರೀತಸ್ಸುಪ್ರಸನ್ನೋ ವರದೋ ಭವತು। ಮಮ ಇಷ್ಟಾರ್ಥ ಸಿದ್ಧಿರಸ್ತು॥

ಯಾಃ ಫಲನೀರ್ಯಾ ಅಫಲಾ ಯಾ ಅಪುಷ್ಪಾಯಾಶ್ಚಪುಷ್ಪಿಣೀಃ।
ಬೃಹಸ್ಪತಿಪ್ರಸೂತಾಸ್ತಾನೋ ಮುಂಚ ತ್ವಗ್ಂ ಹಸಃ।

ಶ್ರೀ ಮಹಾಗಣಪತಿ ಪ್ರಸಾದಂ ಶಿರಸಾ ಗೃಹ್ಣಾಮಿ॥

(ಹೀಗೆ ಮಹಾಗಣಪತಿ ಪೂಜೆಯ ನಂತರ ಸ್ವರ್ಣಗೌರೀ ವ್ರತ ಆರಂಭಿಸಬೇಕು).

## ಪ್ರಾಣಪ್ರತಿಷ್ಠಾಪನಂ (ಶ್ರೀ ಸ್ವರ್ಣಗೌರೀ)

ಪೂಜಾಂಗತ್ವೇನ ಶ್ರೀ ಸ್ವರ್ಣಗೌರೀ ಪ್ರಾಣಪ್ರತಿಷ್ಠಾಪನಂ ಕರಿಷ್ಯೇ॥

ಗೌರೀಂ ಪುಷ್ಪಾಕ್ಷತೈಃ ಗೃಹೀತ್ವಾ ಧ್ಯಾಯೇತ್॥

(ಹೂವು ಮಂತ್ರಾಕ್ಷತೆಗಳನ್ನು ಬಲಗೈಯಲ್ಲಿ ಹಿಡಿದು ಪ್ರತಿಮೆಯನ್ನು ಸ್ಪರ್ಶಿಸುತ್ತಾ)

ಅಸುನೀತೆ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹ ನೋ ಧೇಹಿ ಭೋಗಂ। ಜ್ಯೋಕ್ಪಶ್ಯೇಮ ಸೂರ್ಯಮುಚ್ಚರಂತ ಮನುಮತೇ ಮೃಡಯಾನ ಸ್ವಸ್ತಿ॥ ಆವಾಹಿತಾ ಭವ ಸ್ಥಾಪಿತಾ ಭವ ಅವಕುಂಠಿತಾ ಭವ ಸನ್ನಿಹಿತಾ ಭವ ಸನ್ನಿರುದ್ಧಾ ಭವ ಸುಪ್ರಸನ್ನಾ ಭವ ವರದಾ ಭವ। ಶಾಂತಾ ಭವ। ಮಮ ಸರ್ವಾಭೀಷ್ಟ–ಫಲಪ್ರದಾ ಭವ। ಶ್ರೀ ಸ್ವರ್ಣಗೌರ್ಯೈ ನಮಃ ಪ್ರಾಣಪ್ರತಿಷ್ಠಾಪನ ಮುಹೂರ್ತೋಽಸ್ತು॥

## ಧ್ಯಾನಂ

ಹಾರಾನ್ವಿತಾಮಿಂದುಮುಖೀಂ ಸರ್ವಾಭರಣಭೂಷಿತಾಂ ವಿಮಲಾಂಗೀಂ ವಿಶಾಲಾಕ್ಷೀಂ ಚಿಂತಯಾಮಿ ಸದಾಶಿವಾಂ॥

॥ ಶ್ರೀ ಸ್ವರ್ಣಗೌರ್ಯೈ ನಮಃ ಧ್ಯಾನಂ ಸಮರ್ಪಯಾಮಿ॥

## ಆವಾಹನಂ

ಸುಮಧ್ಯಮಾಂ ಸವಸನಾಂ ಚಂದ್ರಬಿಂಬಾಧರಾನ್ವಿತಾಂ। ಆವಾಹಯಾಮಿ ದೇವಿ ತ್ವಾಂ ಸರ್ವದಾ ಶುಭಕಾರಿಣೀಂ।

॥ ಶ್ರೀ ಸ್ವರ್ಣಗೌರ್ಯೈ ನಮಃ ಆವಾಹಯಾಮಿ॥

## ಆಸನಂ

ಹಿರಣ್ಮಯಾಮಿಮಾಂ ದೇವೀಂ ನಗಾಧಿಪಾಸುತಾಂ ಶುಭಾಂ। ದಿವ್ಯ ಸಿಂಹಾಸನಂ ತುಭ್ಯಂ ದಾಸ್ಯಾಮಿ ಶಿವಶಕ್ತಯೇ॥

॥ ಶ್ರೀ ಸ್ವರ್ಣಗೌರ್ಯೈ ನಮಃ ಆಸನಂ ಸಮರ್ಪಯಾಮಿ॥

## ನೂತನ ದೋರಸ್ಥಾಪನಂ

ಕಾರ್ಪಾಸೇನಕೃತಂ ದೋರಂ ಸರ್ವಮಂಗಳಕಾರಕಂ। ಷೋಡಶೈರ್ತಂತು–ಭಿರ್ಯುಕ್ತಂ ಷೋಡಶಾಂಗುಲಂ ಸಂಮಿತಂ॥ ಷೋಡಶಗ್ರಂಥಿ ಸಂಯುಕ್ತಂ ಹರಿದ್ರಾಕ್ತಂ ಚ ಸೌಭಗಂ ಶ್ರೀ ಷೋಡಶಾಕ್ಷರೀ ವಿದ್ಯೇ ಸ್ಥಾಪಯೇ ಪುರತಸ್ತವ॥

ಇತಿ ದೋರಸ್ಥಾಪನಂ

## ಪಾದ್ಯಂ

ಮಹಾದೇವಿ ಜಗನ್ಮಾತೇ ಪೀತಾಂಬರ ವಿಭೂಷಿತೇ। ಪಾದ್ಯಂ ಗೃಹಾಣ ದೇವಿತ್ವಂ ಗಂಧ ಪುಷ್ಪಾಕ್ಷತೈರ್ಯುತಂ॥

॥ ಶ್ರೀ ಸ್ವರ್ಣಗೌರ್ಯೈ ನಮಃ ಪಾದ್ಯಂ ಸಮರ್ಪಯಾಮಿ॥

## ಅರ್ಘ್ಯಂ

ಶ್ರೀ ಪಾರ್ವತೀ ಮಹಾಭಾಗೇ ಶಂಕರಪ್ರಿಯಭಾಮಿನಿ। ಅರ್ಘ್ಯಂ ಗೃಹಾಣ ಕಲ್ಯಾಣಿ ಭರ್ತ್ರಾ ಸಹ ಪತಿವ್ರತೇ॥

॥ ಶ್ರೀ ಸ್ವರ್ಣಗೌರ್ಯೈ ನಮಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ॥

## ಆಚಮನೀಯಂ

ಆಚಮ್ಯತಾಂ ಜಲಂ ದಿವ್ಯಂ ಪುಣ್ಯತೀರ್ಥ ಸಮುದ್ಭವಂ। ರಮೇ ಸುಶೀಲೇ ಕಲ್ಯಾಣಿ ಪಾಹಿಮಾಂ ಶರಣಾಗತಂ॥

॥ ಶ್ರೀ ಸ್ವರ್ಣಗೌರ್ಯೈ ನಮಃ ಆಚಮನೀಯಂ ಸಮರ್ಪಯಾಮಿ॥

## ಮಧುಪರ್ಕಂ

ದಧಿ ಮಧ್ವಾಜ್ಯ ಸಂಯುಕ್ತಂ ಶರ್ಕರಾಕ್ಷೀರ ಸಂಯುತಂ। ಮಧುಪರ್ಕಂ ಗೃಹಾಣೇದಂ ಅರ್ಪಯಾಮಿ ಶಿವಪ್ರಿಯೇ।

॥ ಶ್ರೀ ಸ್ವರ್ಣಗೌರ್ಯೈ ನಮಃ ಮಧುಪರ್ಕಂ ಸಮರ್ಪಯಾಮಿ॥

## ಪಂಚಾಮೃತಸ್ನಾನಂ

ಕ್ಷೀರ : ಆಪ್ಯಾಯಸ್ವ ಸಮೇತು ತೇ। ವಿಶ್ವತಸ್ಸೋಮ ವೃಷ್ಣಿಯಂ ಭವಾವಾಜಸ್ಯ ಸಂಗಥೇ। ಕ್ಷೀರೇಣ ಸ್ನಪಯಾಮಿ।

ದಧಿ : ದಧಿ ಕ್ರಾವ್ ಣ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ। ಸುರಭಿನೋ ಮುಖಾಕರತ್ಪ್ರಣ ಆಯೂಗ್ಂಷಿತಾರಿಷಿತ್ ದಧ್ನಾ ಸ್ನಪಯಾಮಿ।

ಆಜ್ಯ : ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋವಸ್ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಸ್ಸೂರ್ಯಸ್ಯ ರಶ್ಮಿಭಿಃ। ಆಜ್ಯೇನ ಸ್ನಪಯಾಮಿ।

ಮಧು : ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ ಮಾಧ್ವೀರ್ನ-ಸ್ಸಂತ್ವೋಷಧೀಃ। ಮಧುನಕ್ತಮುತೋಷಸಿ। ಮಧು ಮತ್ಪಾರ್ಥಿವಗ್ಂ ರಜಃ। ಮಧು ದ್ಯೌ ರಸ್ತುನಃ ಪಿತಾ। ಮಧುಮಾನ್ನೋ ವನಸ್ಪತಿರ್ಮಧುಮಾಗ್ಂ ಅಸ್ತು ಸೂರ್ಯಃ। ಮಾಧ್ವೀರ್ಗಾವೋ ಭವಂತು ನಃ। ಮಧುನಾ ಸ್ನಪಯಾಮಿ।

ಶರ್ಕರಾ : ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸಹವೀತಾ ನಾಮ್ನೇ ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧು ಮಾಂ ಆದಾಭ್ಯಃ। ಶರ್ಕರಯಾ ಸ್ನಪಯಾಮಿ।

ಫಲೋದಕ : ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚಪುಷ್ಪಿಣೀಃ। ಬೃಹಸ್ಪತಿ ಪ್ರಸೂತಾಸ್ತಾನೋ ಮುಂಚತ್ವಗ್ಂ ಹಸಃ॥ ಫಲೋದಕೇನ ಸ್ನಪಯಾಮಿ।

ಸುವರ್ಣೋದಕ : ತತ್ಸುವರ್ಣಗ್‍ಂ ಹಿರಣ್ಯಮಭವತ್ ತತ್ಸುವರ್ಣಸ್ಯ ಹಿರಣ್ಯಸ್ಯ ಜನ್ಮ। ಯ ಏವಗ್‍ಂ ಸುವರ್ಣಸ್ಯ ಹಿರಣ್ಯಸ್ಯ । ಜನ್ಮವೇದ ॥ ಸುವರ್ಣ ಆತ್ಮನಾ ಭವತಿ। ಸ್ವರ್ಣೋದಕೇನ ಸ್ನಪಯಾಮಿ।

ಶುದ್ಧೋದಕ : ಶುದ್ಧೋದಕೈಃ ಕಾಂಚನಕುಂಭಸಂಸ್ಥೈಃ ಸುವಾಸಿತೈಶ್ಚೈವ ಸುಮಂತ್ರ ಪೂತೈಃ। ತೀರ್ಥಾಹೃತೈಸ್ಸಂ ಸ್ನಪಯಾಮಿ ದೇವ ಪಾದಾಬ್ಜ ಸಂಭೂತನದೀಪ್ರವಾಹೈಃ ॥ ಶುದ್ಧೋದಕೇನ ಸ್ನಪಯಾಮಿ॥ ಪಂಚಾಮೃತಸ್ನಾನಮಿದಂ ಶರ್ಕರಾ ಮಧುಸರ್ಪಿಭಿಃ। ದಧಿಕ್ಷೀರ ಸಮಾಯುಕ್ತಂ ಗೃಹಾಣ ಪರಮೇಶ್ವರಿ॥ ಶ್ರೀ ಸ್ವರ್ಣಗೌರ್ಯೈ ನಮಃ। ಪಂಚಾಮೃತ ಸ್ನಾನ ಸಮರ್ಪಯಾಮಿ॥ ಹರಿದ್ರೋದಕ–ಸುವರ್ಣೋದಕ–ಪುಷ್ಪೋದಕ–ರತ್ನೋದಕ–ಗಂಧೋದಕಸ್ನಾನಸಮರ್ಪಯಾಮಿ॥

(ನಂತರ ಶುದ್ಧೋದಕ ಸ್ನಾನ ಆಚರಿಸಬೇಕು)

## ಶುದ್ಧೋದಕ ಸ್ನಾನಂ

ಜಾಹ್ನವೀತೋಯಮನೀತಂ ಕರ್ಪೂರೈಲಾ ಸಮನ್ವಿತಂ। ಸ್ನಾಪಯಾಮಿ ಸುರಶ್ರೇಷ್ಠೇ ತ್ವಾಂ ಪುತ್ರಾದಿ ಫಲಪ್ರದಾಂ। ಗಂಗಾ ಸರಸ್ವತೀ ರೇವಾ ಕಾವೇರಿ ಯಮುನಾಜಲೈಃ। ಸ್ನಾಪಿತಾಸಿ ಮಯಾದೇವಿ ತಥಾ ಶಾಂತಿಂ ಕುರುಷ್ವಮೇ॥ ಆಪೋ ಹಿಷ್ಠಾ ಮಯೋ ಭುವಸ್ತಾನ ಊರ್ಜೇ ದಧಾತನ। ಮಹೇರಣಾಯ ಚಕ್ಷಸೇ॥ ಯೋವಶ್ಶಿವ ತಮೋರಸಃ ತಸ್ಯ ಭಾಜಯತೇಹ ನಃ। ಉಶತೀರಿವ ಮಾತರಃ॥ ತಸ್ಮಾ ಅರಂಗ ಮಾಮವೋ ಯಸ್ಯಕ್ಷಯಾಯ ಜಿನ್ವಥ। ಆಪೋ ಜನಯಥಾ ಚನಃ॥ ಶ್ರೀ ಸ್ವರ್ಣಗೌರ್ಯೈ ನಮಃ ಶುದ್ಧೋದಕ ಸ್ನಾನಂ ಸಮರ್ಪಯಾಮಿ॥

## ವಸ್ತ್ರಂ

ವಸ್ತ್ರಂ ಚ ಸೋಮದೈವತ್ಯಂ ಲಜ್ಜಾಯಾಸ್ತು ನಿವಾರಣಂ।
ಪ್ರಯಚ್ಛಾಮಿ ತವ ಪ್ರೀತ್ಯೈ ಮಮೇಷ್ಟಾರ್ಥಪ್ರದಾಭವ॥
ಪ್ರೀತವಸ್ತ್ರದ್ವಯಂ ದೇವಿ ತುಭ್ಯಂ ದಾಸ್ಯಾಮಿ ಪಾರ್ವತಿ।
ಚಂದ್ರಮೌಳಿಪ್ರಿಯೇ ದೇವಿ ಸದಾ ಮೇ ವರದಾ ಭವ॥
॥ಶ್ರೀ ಸ್ವರ್ಣಗೌರ್ಯೈ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ॥

## ಉಪವೀತಂ

ಯಜ್ಞೋಪವೀತಂ ವಿಮಲಂ ಸರ್ವದಾ ಶುಭಕಾರಿಣಿ।
ಜಗನ್ಮಾತರ್ನಮಸ್ತೇಸ್ತು ತ್ರಾಹಿ ಮಾಂ ಪರಮೇಶ್ವರಿ॥

ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹಜಂಪುರಸ್ತಾತ್।
ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ॥
ಶ್ರೀ ಸ್ವರ್ಣಗೌರ್ಯೈ ನಮಃ ಯಜ್ಞೋಪವೀತಂ ಸಮರ್ಪಯಾಮಿ॥




**ಕಂಚುಕಂ**

ಕಂಚುಕೀಮುಪವಸ್ತ್ರಂ ಚ ನಾನಾ ರತ್ನೈರ್ವಿರಾಜಿತಂ।
ಗೃಹಾಣತ್ವಂ ದಯಾಸಿಂಧೋ ಜಗದೀಶ್ವರಿ ಪಾರ್ವತಿ॥
॥ಶ್ರೀ ಸ್ವರ್ಣಗೌರ್ಯೈ ನಮಃ ಕಂಚುಕೀವಸ್ತ್ರಂ ಸಮರ್ಪಯಾಮಿ॥

**ಸ್ವರ್ಣೋತ್ತರೀಯಂ**

ಅರ್ಧಾಂಗವಲ್ಲಭೇ ದೇವಿ ಶಾಂಭವೀ ತ್ರಿಪುರಾಂಬಿಕೇ।
ಸ್ವರ್ಣೋತ್ತರೀಯಂ ದಾಸ್ಯಾಮಿ ಗೃಹ್ಯತಾಂ ಸರ್ವಮಂಗಳೇ॥
॥ಶ್ರೀ ಸ್ವರ್ಣಗೌರ್ಯೈ ನಮಃ ಸ್ವರ್ಣೋತ್ತರೀಯಂ ಸಮರ್ಪಯಾಮಿ॥

**ಹರಿದ್ರಾಚೂರ್ಣಂ**

ಸೌಭಾಗ್ಯ-ಶುಭದೇ ದೇವಿ ಸರ್ವಮಂಗಳದಾಯಿನಿ।
ಹರಿದ್ರಾಂ ತೇ ಪ್ರದಾಸ್ಯಾಮಿ ಗೃಹಾಣ ಪರಮೇಶ್ವರಿ॥
॥ಶ್ರೀ ಸ್ವರ್ಣಗೌರ್ಯೈ ನಮಃ ಹರಿದ್ರಾಚೂರ್ಣಂ ಸಮರ್ಪಯಾಮಿ॥

**ಕುಂಕುಮಚೂರ್ಣಂ**

ಕುಂಕುಮಂ ಕಾಂತಿದಂ ದಿವ್ಯಂ ಸರ್ವಕಾರ್ಯ ಫಲಪ್ರದಂ।
ಕುಂಕುಮೇನಾರ್ಚಿತೇ ದೇವಿ ಗೃಹಾಣ ವರದಾ ಭವ॥
॥ಶ್ರೀ ಸ್ವರ್ಣಗೌರ್ಯೈ ನಮಃ ಕುಂಕುಮಚೂರ್ಣಂ ಸಮರ್ಪಯಾಮಿ॥

**ಸಿಂಧೂರಚೂರ್ಣಂ**

ಸಚಿತ್ರಂ ಚಿತ್ರಂ ಚಿತಯಂತಮಸ್ಮೈ।
ಚಿತ್ರಕ್ಷತ್ರ ಚಿತ್ರತಮಂ ವಯೋಧಾಂ॥
ಚಂದ್ರಂರಯಿಂ ಪುರುವೀರಂ ಬೃಹಂತಂ।
ಚಂದ್ರ ಚಂದ್ರಾಭಿರ್ಗೃಣುತೇ ಯವಸ್ವ॥
॥ಶ್ರೀ ಸ್ವರ್ಣಗೌರ್ಯೈ ನಮಃ ಸಿಂಧೂರಚೂರ್ಣಂ ಸಮರ್ಪಯಾಮಿ॥

**ಕಜ್ಜಲಂ**

ಚಾರುರೂಪೇ ಚಾರುನೇತ್ರೇ ಲೋಲಾಕ್ಷೀ ಚಾರುರೂಪಿಣೀ।
ನೇತ್ರಾಲಂಕರಣಾರ್ಥಾಯ ಕಜ್ಜಲಂ ತೇ ದದಾಮ್ಯಹಂ।
॥ಶ್ರೀ ಸ್ವರ್ಣಗೌರ್ಯೈ ನಮಃ ಕಜ್ಜಲಂ ಸಮರ್ಪಯಾಮಿ॥

**ಮಂಗಳದ್ರವ್ಯಂ**

ಹರಿದ್ರಾ ಕುಂಕುಮಂ ಚೈವ ಸಿಂಧೂರಂ ಕಜ್ಜಲಾದಿಕಂ।
ನಿಲಲೋಹಿತ ತಾಟಂಕೇ ಮಂಗಳದ್ರವ್ಯಮೀಶ್ವರಿ॥
॥ಶ್ರೀ ಸ್ವರ್ಣಗೌರ್ಯೈ ನಮಃ ಮಂಗಳದ್ರವ್ಯಾಣಿ ಸಮರ್ಪಯಾಮಿ॥

**ಮಾಂಗಲ್ಯಸೂತ್ರಂ**

ಮಾಂಗಲ್ಯಂ ಮಣಿಸಂಯುಕ್ತಂ ಮುಕ್ತಾಫಲಸಮನ್ವಿತಂ।
ಉತ್ತಮಂ ಗುಣಸೂತ್ರಂ ತು ಗೃಹಾಣ ಶುಭಲಕ್ಷಣೇ॥
॥ಶ್ರೀ ಸ್ವರ್ಣಗೌರ್ಯೈ ನಮಃ ಮಾಂಗಲ್ಯಸೂತ್ರಂ ಸಮರ್ಪಯಾಮಿ॥

**ತಾಟಂಕ ಸಮರ್ಪಣಂ**

ತಾಟಂಕಯುಗಲಂ ಶ್ರೇಷ್ಠಂ ತಪನೋಪಮ ಮಂಗಲಂ।
ಅರ್ಪಯಾಮಿ ತವ ಪ್ರೀತ್ಯೈ ಸರ್ವಸೌಭಾಗ್ಯದಾಯಕಂ॥
॥ಶ್ರೀ ಸ್ವರ್ಣಗೌರ್ಯೈ ನಮಃ ತಾಟಂಕಯುಗಲಂ ಸಮರ್ಪಯಾಮಿ॥

**ಆಭರಣ**

ನೀಲೋತ್ಪಲದಳಶ್ಯಾಮೇ ಪೂರ್ಣೇಂದುಸದೃಶಾನನೇ।
ಭವಾನಿ ಪಾರ್ವತಿ ದೇವಿ ತ್ರಾಹಿಮಾಂ ಪರಮೇಶ್ವರಿ॥
ಕಿರೀಟಹಾರಕೇಯೂರ ಕಂಕಣಾದಿ ವಿಭೂಷಣೈಃ।
ಅಲಂಕರೋಮಿ ತ್ವಾಂ ಭಕ್ತ್ಯಾ ಸರ್ವಾಲಂಕಾರಕಾರಿಣೇ॥
॥ಶ್ರೀ ಸ್ವರ್ಣಗೌರ್ಯೈ ನಮಃ ಆಭರಣಾನಿ ಸಮರ್ಪಯಾಮಿ॥

**ಗಂಧ**

ಕುಂಕುಮಾಗರು ಕರ್ಪೂರ ಕಸ್ತೂರೀ ಚಂದನಾದಿಕಂ। ವಿಲೇಪನಂ ಮಹಾದೇವಿ ಗಂಧಂ ಸ್ವೀಕುರು ಶಾಂಕರಿ॥ ಗಂಧಂ ಗೃಹಾಣ ದೇವೇಶಿ ಉತ್ತಮಂ ದಿವ್ಯಚಂದನಂ। ವಿಲೇಪನಂ ಸುರಾಧೀಶೇ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ॥ ಗಂಧದ್ವಾರಾಂ ಧುರದರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ। ಈಶ್ವರೀಗ್ಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ॥ ॥ಶ್ರೀ ಸ್ವರ್ಣಗೌರ್ಯೈ ನಮಃ ದಿವ್ಯ ಪರಿಮಳ ಗಂಧಾನ್ ಸಮರ್ಪಯಾಮಿ॥

**ಅಕ್ಷತೆ**

ರಂಜಿತಾ ಕುಂಕುಮೌಘೇನ ಹರಿದ್ರಾಕ್ತಾಸ್ತಥಾಕ್ಷತಾಃ। ತವಾಲಂಕರಣಾರ್ಥಾಯ ಪ್ರದತ್ತಾಃ ಸರ್ವಮಂಗಳೇ॥ ಶಾಲೀಯಾನ್ ಚಂದ್ರ ಸಂಕಾಶಾನ್ ಹರಿದ್ರಾಮಿಶ್ರಿತಾನ್ ಶುಭಾನ್। ಅಕ್ಷತಾಂಸ್ತ್ವರ್ಪಯೇ ತುಭ್ಯಂ ಗೃಹಾಣಪರಮೇಶ್ವರಿ॥ ಆಯನೇ ತೇ ಪರಾಯಣೇ ದೂರ್ವಾ ರೋಹಂತು ಪುಷ್ಪಿಣೀಃ। ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ॥

॥ ಶ್ರೀ ಸ್ವರ್ಣಗೌರ್ಯೈ ನಮಃ ಅಕ್ಷತಾನ್ ಸಮರ್ಪಯಾಮಿ॥

**ಪುಷ್ಪಾಣಿ**

ಚಂಪಕಂ ಕುಂದ ಮಂದಾರ ಮಾಲತೀ ಬೃಹತೀ ತಥಾ ಪುಷ್ಪೈರ್ಬಿಲ್ವದಳೋಪೇತೈಃ ಪೂಜಯಾಮಿ ಶಿವಪ್ರಿಯಾಂ॥ ಜಾಜೀ ಪುನ್ನಾಗ ಮಂದಾರ ಕೇತಕೀ ಚಂಪಕಾನಿ ಚ। ಪುಷ್ಪಾಣಿ ತವ ಪೂಜಾರ್ಥಮರ್ಪಯಾಮಿ ಸದಾಶಿವೇ॥

॥ ಶ್ರೀ ಸ್ವರ್ಣಗೌರ್ಯೈ ನಮಃ ಪುಷ್ಪಾಣಿ ಸಮರ್ಪಯಾಮಿ॥

**ಅಥ ಅಂಗಪೂಜಾ**

| | |
|---|---|
| ಓಂ ಸ್ವರ್ಣಗೌರ್ಯೈ ನಮಃ | ಪಾದೌ ಪೂಜಯಾಮಿ |
| ಓಂ ಕಾತ್ಯಾಯಿನ್ಯೈ ನಮಃ | ಜಂಘೇ '' |
| ಓಂ ಭದ್ರಾಯೈ ನಮಃ | ಊರುನ್ '' |
| ಓಂ ಈಶ್ವರ್ಯೈ ನಮಃ | ಕಟಿಂ '' |
| ಓಂ ಶಿವಪ್ರಿಯಾಯೈ ನಮಃ | ನಾಭಿಂ '' |
| ಓಂ ಭವದಾಯೈ ನಮಃ | ಗುಹ್ಯಂ '' |
| ಓಂ ಅಪರ್ಣಾಯೈ ನಮಃ | ಉದರಂ '' |
| ಓಂ ಪಾರ್ವತ್ಯೈ ನಮಃ | ಸ್ತನೌ '' |
| ಓಂ ದುರ್ಗಾಯೈ ನಮಃ | ಹೃದಯಂ '' |
| ಓಂ ಗೌರ್ಯೈ ನಮಃ | ಸ್ಕಂಧೌ '' |
| ಓಂ ಅಂಬಿಕಾಯೈ ನಮಃ | ಹಸ್ತಾನ್ '' |
| ಓಂ ಕಂಬುಕಂಠ್ಯೈ ನಮಃ | ಕಂಠಂ '' |
| ಓಂ ಅನ್ನಪೂರ್ಣಾಯೈ ನಮಃ | ಜಿಹ್ವಾಂ '' |
| ಓಂ ಶಾಂಕರ್ಯೈ ನಮಃ | ಮುಖಂ '' |
| ಓಂ ಮೃಡಾಣ್ಯೈ ನಮಃ | ನಾಸಿಕಾಂ '' |
| ಓಂ ಚಂಡಿಕಾಯೈ ನಮಃ | ನೇತ್ರೇ '' |
| ಓಂ ರುದ್ರಾಣ್ಯೈ ನಮಃ | ಕರ್ಣೌ '' |
| ಓಂ ಗಿರಿಜಾಯೈ ನಮಃ | ಲಲಾಟಂ '' |
| ಓಂ ಮೇನಕಾತ್ಮಜಾಯೈ ನಮಃ | ಶಿರಃ '' |

॥ಶ್ರೀ ಸ್ವರ್ಣಗೌರ್ಯೈ ನಮಃ ಸರ್ವಾಣ್ಯಂಗಾನಿ ಪೂಜಯಾಮಿ॥

**ಅಥ ಪುಷ್ಪಪೂಜಾ**

| | |
|---|---|
| ಜಗನ್ಮಾತ್ರೇ ನಮಃ | ಜಾಜೀಪುಷ್ಪಂ ಸಮರ್ಪಯಾಮಿ |
| ಮಾನ್ಯಾಯೈ ನಮಃ | ಮಲ್ಲಿಕಾಪುಷ್ಪಂ '' |
| ಗಿರಿಸುತಾಯೈ ನಮಃ | ಗಿರಿಕರ್ಣಿಕಾಪುಷ್ಪಂ '' |
| ಕಾತ್ಯಾಯಿನ್ಯೈ ನಮಃ | ಕೇತಕೀಪುಷ್ಪಂ '' |
| ಕಮಲಾಕ್ಷ್ಯೈ ನಮಃ | ಕಮಲಪುಷ್ಪಂ '' |
| ಚಾಮುಂಡಾಯೈ ನಮಃ | ಚಂಪಕಪುಷ್ಪಂ '' |
| ಗಂಧರ್ವಸೇವಿತಾಯೈ ನಮಃ | ಸೇವಂತಿಕಾಪುಷ್ಪಂ '' |
| ಪಾರ್ವತ್ಯೈ ನಮಃ | ಪಾರಿಜಾತಪುಷ್ಪಂ '' |

॥ ಶ್ರೀ ಸ್ವರ್ಣಗೌರ್ಯೈ ನಮಃ ಪುಷ್ಪಾಣಿ ಸಮರ್ಪಯಾಮಿ॥

### ಅಥ ಪತ್ರಪೂಜಾ

| | |
|---|---|
| ಮಾಯಾಯೈ ನಮಃ | ಮಾಚೀಪತ್ರಂ ಸಮರ್ಪಯಾಮಿ |
| ಸರ್ವಜನರಕ್ಷಿಣ್ಯೈ ನಮಃ | ಸೇವಂತಿಕಾಪತ್ರಂ '' |
| ಶಿವಪ್ರಿಯಾಯೈ ನಮಃ | ಬಿಲ್ವ ಪತ್ರಂ '' |
| ಹೈಮವತ್ಯೈ ನಮಃ | ತುಳಸೀಪತ್ರಂ '' |
| ಕಾತ್ಯಾಯಿನ್ಯೈ ನಮಃ | ಕಸ್ತೂರಿಕಾಪತ್ರಂ '' |
| ಮಂಗಳಪ್ರದಾಯಕಾಯೈ ನಮಃ | ಮರುವಕ ಪತ್ರಂ '' |

॥ಶ್ರೀ ಸ್ವರ್ಣಗೌರ್ಯೈ ನಮಃ ಪತ್ರಪೂಜಾಂ ಸಮರ್ಪಯಾಮಿ॥

### ಅಥ ನಾಮಪೂಜಾ

| | |
|---|---|
| ಓಂ ಸ್ವರ್ಣಗೌರ್ಯೈ ನಮಃ | ಓಂ ಬ್ರಾಹ್ಮ್ಯೈ ನಮಃ |
| ಕಾತ್ಯಾಯಿನ್ಯೈ ನಮಃ | ಮಾಹೇಶ್ವರ್ಯೈ ನಮಃ |
| ಉಮಾಯೈ ನಮಃ | ಕೌಮಾರ್ಯೈ ನಮಃ |
| ಭದ್ರಾಯೈ ನಮಃ | ವೈಷ್ಣವ್ಯೈ ನಮಃ |
| ಹೈಮವತ್ಯೈ ನಮಃ | ವಾರಾಹ್ಯೈ ನಮಃ |
| ಈಶ್ವರ್ಯೈ ನಮಃ | ಇಂದ್ರಾಣ್ಯೈ ನಮಃ |
| ಭವಾನ್ಯೈ ನಮಃ | ಚಾಮುಂಡಾಯೈ ನಮಃ |
| ಸರ್ವಪಾಪಹರಾಯೈ ನಮಃ | ಚಂಡಿಕಾಯೈ ನಮಃ |
| ಮಡಾಣ್ಯೈ ನಮಃ | ದಾಕ್ಷಾಯಿಣ್ಯೈ ನಮಃ |
| ಚಂಡಿಕಾಯೈ ನಮಃ | ಪರ್ವತರಾಜಪುತ್ರ್ಯೈ ನಮಃ |
| ಗಿರಿಜಾಯೈ ನಮಃ | ಚಂದ್ರಶೇಖರಪತ್ನ್ಯೈ ನಮಃ |
| ಮೇನಕಾತ್ಮಜಾಯೈ ನಮಃ | ಸರ್ವೋಪದ್ರವನಾಶಿನ್ಯೈ ನಮಃ |

॥ಶ್ರೀ ಸ್ವರ್ಣಗೌರ್ಯೈ ನಮಃ ನಾಮಪೂಜಾಂ ಪೂಜಯಾಮಿ॥

### ನೂತನ ದೋರಗ್ರಂಥಿ ಪೂಜಾ

| | |
|---|---|
| ಶ್ರೀ ಸ್ವರ್ಣಗೌರ್ಯೈ ನಮಃ | ಪ್ರಥಮಗ್ರಂಥಿಂ ಪೂಜಯಾಮಿ |
| ಶ್ರೀ ಮಹಾಗೌರ್ಯೈ ನಮಃ | ದ್ವಿತೀಯಗ್ರಂಥಿಂ ಪೂಜಯಾಮಿ |
| ಶ್ರೀ ಕಾತ್ಯಾಯಿನ್ಯೈ ನಮಃ | ತೃತೀಯಗ್ರಂಥಿಂ ಪೂಜಯಾಮಿ |
| ಶ್ರೀ ಕೌಮಾರ್ಯೈ ನಮಃ | ಚತುರ್ಥಗ್ರಂಥಿಂ ಪೂಜಯಾಮಿ |
| ಶ್ರೀ ಭದ್ರಾಯೈ ನಮಃ | ಪಂಚಮಗ್ರಂಥಿಂ ಪೂಜಯಾಮಿ |

| | |
|---|---|
| ಶ್ರೀ ವಿಷ್ಣುಸ್ಸೋದರ್ಯೈ ನಮಃ | ಷಷ್ಠಗ್ರಂಥಿಂ ಪೂಜಯಾಮಿ |
| ಶ್ರೀ ಮಂಗಳದೇವತಾಯೈ ನಮಃ | ಸಪ್ತಮಗ್ರಂಥಿಂ ಪೂಜಯಾಮಿ |
| ಶ್ರೀ ರಾಕೇಂದುವದನಾಯೈ ನಮಃ | ಅಷ್ಟಮಗ್ರಂಥಿಂ ಪೂಜಯಾಮಿ |
| ಶ್ರೀ ಚಂದ್ರಶೇಖರಪತ್ನ್ಯೈ ನಮಃ | ನವಮಗ್ರಂಥಿಂ ಪೂಜಯಾಮಿ |
| ಶ್ರೀ ವಿಶ್ವೇಶ್ವರ ಪ್ರಿಯಾಯೈ ನಮಃ | ದಶಮಗ್ರಂಥಿಂ ಪೂಜಯಾಮಿ |
| ಶ್ರೀ ದಾಕ್ಷಾಯಿಣ್ಯೈ ನಮಃ | ಏಕಾದಶಗ್ರಂಥಿಂ ಪೂಜಯಾಮಿ |
| ಶ್ರೀ ಕೃಷ್ಣವೇಣ್ಯೈ ನಮಃ | ದ್ವಾದಶಗ್ರಂಥಿಂ ಪೂಜಯಾಮಿ |
| ಶ್ರೀ ಭವಾನ್ಯೈ ನಮಃ | ತ್ರಯೋದಶಗ್ರಂಥಿಂ ಪೂಜಯಾಮಿ |
| ಶ್ರೀ ಲೋಲಲೋಚನಾಯೈ ನಮಃ | ಚತುರ್ದಶಗ್ರಂಥಿಂ ಪೂಜಯಾಮಿ |
| ಶ್ರೀ ಮೇನಕಾತ್ಮಜಾಯೈ ನಮಃ | ಪಂಚದಶಗ್ರಂಥಿಂ ಪೂಜಯಾಮಿ |
| ಶ್ರೀ ಸ್ವರ್ಣಗೌರ್ಯೈ ನಮಃ | ಷೋಡಶಗ್ರಂಥಿಂ ಪೂಜಯಾಮಿ |

**ಶ್ರೀ ಸ್ವರ್ಣಗೌರ್ಯೈನಮಃ ನೂತನ ದೋರಗ್ರಂಥಿ ಪೂಜಾಂ ಸಮರ್ಪಯಾಮಿ॥**

## ಅಥ ಅಷ್ಟೋತ್ತರ ಪೂಜಾ

ಓಂ ಶಿವಾಯೈ ನಮಃ, ಶ್ರೀ ಮಹಾವಿದ್ಯಾಯೈ ನಮಃ, ಶ್ರಿಮನ್ಮಕುಟಮಂಡಿತಾಯೈ ನಮಃ, ಕಲ್ಯಾಣ್ಯೈ ನಮಃ, ಕಮಲಾರಾಧ್ಯಾಯೈ ನಮಃ, ಕರುಣಾರಸಸಾಗರಾಯೈ ನಮಃ, ಕಲಿಪ್ರಭೃತಿಸಂಸೇವ್ಯಾಯೈ ನಮಃ, ಕಮಲಾಸನಸಂಸ್ತುತಾಯೈ ನಮಃ, ಅಂಬಿಕಾಯೈ ನಮಃ, ಅನೇಕಸೌಭಾಗ್ಯದಾತ್ರ್ಯೈ ನಮಃ, ಆನಂದವಿಗ್ರಹಾಯೈ ನಮಃ, ಈಷಣತ್ರಯ ನಿರ್ಮುಕ್ತಾಯೈ ನಮಃ, ಹೃತ್ಸರೋರುವಾಸಿನ್ಯೈ ನಮಃ, ಆದ್ಯಂತರಹಿತಾಯೈ ನಮಃ, ಅನೇಕಕೋಟಿಭಾಸ್ಕರವಲ್ಲಭಾಯೈ ನಮಃ, ಈಶ್ವರೋತ್ಸಂಗನಿಲಯಾಯೈ ನಮಃ, ಈತಿಬಾಧಾವಿನಾಶಿನ್ಯೈ ನಮಃ, ಇಂದಿರಾಪತಿಸಂಸೇವಾಯೈ ನಮಃ, ಈಶ್ವರಾರ್ಧಶರೀರಿಣ್ಯೈ ನಮಃ, ಲಕ್ಷ್ಯಾರ್ಥರೂಪಾಯೈ ನಮಃ, ಲಕ್ಷ್ಮೀಶಬ್ರಹ್ಮೇಶಾಮರ ಪೂಜಿತಾಯೈ ನಮಃ, ಉತ್ಪತ್ಯಾದಿವಿನಿರ್ಮುಕ್ತಾಯೈ ನಮಃ, ವಿದ್ಯಾಪ್ರತಿಪಾದಿನ್ಯೈ ನಮಃ, ಊರ್ಧ್ವಲೋಕ– ಪ್ರದಾತ್ರ್ಯೈ ನಮಃ, ಹಾನಿವೃದ್ಧಿವಿವರ್ಜಿತಾಯೈ ನಮಃ, ಸರ್ವೇಶ್ವರ್ಯೈ ನಮಃ, ಸರ್ವಲಭ್ಯಾಯೈ ನಮಃ, ಗುರುಮೂರ್ತಿಸ್ವರೂಪಿಣ್ಯೈ ನಮಃ, ಸಮಸ್ತ–ಪ್ರಾಣಿನಿಲಯಾಯೈ ನಮಃ, ಸರ್ವಲೋಕಸುಂದರ್ಯೈ ನಮಃ, ಕಾಮಾಕ್ಷ್ಯೈ ನಮಃ, ಕಾಮದಾತ್ರ್ಯೈ ನಮಃ, ಕಾಮೇಶಾಂಕನಿವಾಸಿನ್ಯೈ ನಮಃ, ಹರಾರ್ಧದೇಹಾಯೈ ನಮಃ, ಕಲ್ಹಾರಭೂಷಿತಾಯೈ ನಮಃ, ಹರಿಲೋಚನಾಯೈ ನಮಃ, ಲಲಿತಾಯೈ ನಮಃ, ಲಾಕಿನೀಸೇವ್ಯಾಯೈ ನಮಃ, ಲಬ್ಧೈಶ್ವರ್ಯಪ್ರವರ್ತಿನ್ಯೈ ನಮಃ, ಹ್ರೀಂಕಾರ ಪದ್ಮನಿಲಯಾಯೈ ನಮಃ, ಹ್ರೀಂಕಾರಾರ್ಣವಕೌಸ್ತುಭಾಯೈ ನಮಃ, ಸಮಸ್ತ–

ಲೋಕಜನನ್ಯೈ ನಮಃ, ಸರ್ವಭೂತೇಶ್ವರ್ಯೈ ನಮಃ, ಕರೀಂದ್ರಾರೂಢ ಸಂಸೇವ್ಯಾಯೈ ನಮಃ, ಕಮಲೇಶಸಹೋದರ್ಯೈ ನಮಃ, ಲಕ್ಷ್ಯಗಾಘೋಷಾಂಬಾಯೈ ನಮಃ, ಹ್ರೀಂಕಾರಬಿಂದುಲಕ್ಷಿತಾಯೈ ನಮಃ, ಏಕಾಕ್ಷರ್ಯೈ ನಮಃ, ಏಕರೂಪಾಯೈ ನಮಃ, ಐಶ್ವರ್ಯಫಲದಾಯಿನ್ಯೈ ನಮಃ, ಓಂಕಾರವರ್ಣನಿಲಯಾಯೈ ನಮಃ, ಔದಾರ್ಯಾದಿಪ್ರದಾಯೈ ನಮಃ, ಗಾಯತ್ರ್ಯೈ ನಮಃ, ಗಿರಿಜಾಕನ್ಯಾಯೈ ನಮಃ, ಗೂಢಾರ್ಥಬೋಧಿನ್ಯೈ ನಮಃ, ಚಂದ್ರಶೇಖರ ಅರ್ಧಾಂಗ್ಯೈ ನಮಃ, ಚೂಡಾಮಣಿ ವಿಭೂಷಿತಾಯೈ ನಮಃ, ಜಾಜೀ ಚಂಪಕ ಪುನ್ನಾಗ ಕೇತಕೀ ಕುಸುಮಾರ್ಚಿತಾಯೈ ನಮಃ, ತನುಮಧ್ಯಾಯೈ ನಮಃ, ದಾನವೇಂದ್ರಸಂಹರ್ತ್ರ್ಯೈ ನಮಃ, ದೀನರಕ್ಷಿಣ್ಯೈ ನಮಃ, ಸ್ವಧರ್ಮಪರಸಂಸೇವ್ಯಾಯೈ ನಮಃ, ಧನಧಾನ್ಯಾಭಿವೃದ್ಧಿದಾಯೈ ನಮಃ, ನಾರಾಯಣ್ಯೈ ನಮಃ, ನಾಮರೂಪವರ್ಜಿತಾಯೈ ನಮಃ, ಅಪರಾಜಿತಾಯೈ ನಮಃ, ಪರಮಾನಂದ-ರೂಪಾಯೈ ನಮಃ, ಪರಮಾನಂದಾಯೈ ನಮಃ, ಪಾಶಾಂಕುಶಭಯಾವರ-ವಿಲಸತ್ಕರಪಲ್ಲವಾಯೈ ನಮಃ, ಪುರಾಣಪುರುಷಸೇವ್ಯಾಯೈ ನಮಃ, ಪುಷ್ಪಮಾಲಾವಿರಾಜಿತಾಯೈ ನಮಃ, ಫಣೀಂದ್ರರತ್ನ ಶೋಭಾಢ್ಯಾಯೈ ನಮಃ, ಬದರೀವನವಾಸಿನ್ಯೈ ನಮಃ, ಬಾಲಾಯೈ ನಮಃ, ವಿಕ್ರಮಸಂಹೃಷ್ಟಾಯೈ ನಮಃ, ಬಿಂಬೋಷ್ಠ್ಯೈ ನಮಃ, ಬಿಲ್ವಪೂಜಿತಾಯೈ ನಮಃ, ಬಿಂದುಚಕ್ರೈಕನಿಲಯಾಯೈ ನಮಃ, ಭವಾರಣ್ಯದಾವಾನಲಾಯೈ ನಮಃ, ಭವಾನ್ಯೈ ನಮಃ, ಭವಭೋಗ್ಯೈ ನಮಃ, ಭವದೇಹಾರ್ಧಧಾರಿಣ್ಯೈ ನಮಃ, ಭಕ್ತಸೇವ್ಯಾಯೈ ನಮಃ, ಭಕ್ತಗಣ್ಯಾಯೈ ನಮಃ, ಭಾಗ್ಯವೃದ್ಧಿಪ್ರದಾಯಿನ್ಯೈ ನಮಃ, ಭೂತಿದಾತ್ರ್ಯೈ ನಮಃ, ಭೈರವಾದಿಸಂವೃತಾಯೈ ನಮಃ, ಶ್ರೀ ಮಹೇಶ್ವರ್ಯೈ ನಮಃ, ಸರ್ವೇಷ್ಟಾಯೈ ನಮಃ, ಶ್ರೀ ಮಹಾದೇವ್ಯೈ ನಮಃ, ತ್ರಿಪುರಸೌಂದರ್ಯೈ ನಮಃ, ಮುಕ್ತಿದಾತ್ರ್ಯೈ ನಮಃ, ರಾಜರಾಜೇಶ್ವರ್ಯೈ ನಮಃ, ವಿದ್ಯಾಪ್ರದಾಯಿನ್ಯೈ ನಮಃ, ಭಾವರೂಪಾಯೈ ನಮಃ, ವಿಶ್ವಮೋಹಿನ್ಯೈ ನಮಃ, ಶಾಂಕರ್ಯೈ ನಮಃ, ಶತ್ರುಸಂಹರ್ತ್ರ್ಯೈ ನಮಃ, ತ್ರಿಪುರಾಯೈ ನಮಃ, ತ್ರಿಪುರೇಶ್ವರ್ಯೈ ನಮಃ, ಶ್ರೀ ಮನ್ಮುನೀಂದ್ರಸ್ಸಂಸೇವ್ಯಾಯೈ ನಮಃ, ಶ್ರೀಮನ್ನಮರನಾಯಿಕಾಯೈ ನಮಃ, ಶ್ರೀ ರಾಜರಾಜೇಶ್ವರ್ಯೈ ನಮಃ, ಶ್ರೀ ಸ್ವರ್ಣಗೌರ್ಯೈ ನಮಃ॥

॥ ಇತಿ ಅಷ್ಟೋತ್ತರ ಶತ ದಿವ್ಯನಾಮಪೂಜಾಂ ಸಮರ್ಪಯಾಮಿ॥

## ಧೂಪ

ಶ್ರೀ ಖಂಡಲಾಕ್ಷಾಗರುಗುಗ್ಗುಳಾದ್ಯೈಃ ಖಚೋರ ಶ್ರೀವಾಸಮಧೂಕಯುಕ್ತೈಃ। ಸುವಾಸಿತಂ ಧೂಪಮಿದಂಗೃಹಾಣಭಕ್ತೌಘಸಂಪೂಜಿತ ಪಾದಪದ್ಮೇ॥

ವನಸ್ಪತ್ಯುದ್ಭವೋ-ದಿವ್ಯೋನಾನಾಗಂಧೈಶ್ಚ ಸಂಯುತಃ। ಆಘ್ರೇಯಸ್ಸರ್ವ-ದೇವಾನಾಂ ಧೂಪೋಯಂ ಪ್ರತಿಗೃಹ್ಯತಾಂ॥

ಶ್ರೀ ಸ್ವರ್ಣಗೌರ್ಯ್ಯೆ ನಮಃ ಧೂಪಮಾಘ್ರಾಪಯಾಮಿ। ಧೂಪಾನಂತರಂ ಆಚಮನೀಯಂ ಸಮರ್ಪಯಾಮಿ॥

## ದೀಪ

ಸೂರ್ಯೇಂದುಕೋಟಿಪ್ರಭಮಗಳಾಂಗಿ ದೀಪಾವಳಿಂ ಗೋಘೃತವರ್ತಿಯುಕ್ತಾಂ। ಸ್ವಮಾಯಯಾಂಧೀಕೃತ ಸರ್ವಲೋಕ ಜ್ಞಾನಪ್ರದೀಪಂ ಕುರುತೇ ನಮೋಽಸ್ತು॥ ನಮಸ್ತೇಽಸ್ತು ಮಹಾದೇವಿ ನಮಸ್ತೇ ಜಗದೀಶ್ವರೀ। ದೀಪಂ ಗೃಹಾಣ ಸುಭಗೇ ಜಗದಾನಂದದಾಯಿನಿ ॥ ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾದ್ಯೋತಿತಂ ಮಯಾ। ಗೃಹಾಣ ಮಂಗಳಂ ದೀಪಂ ತ್ರೈಲೋಕ್ಯತಿಮಿರಾಪಹೇ ॥ ಭಕ್ತ್ಯಾದೀಪಂ ಪ್ರಯಚ್ಛಾಮಿ ದೇವಾಯ ಪರಮಾತ್ಮನೇ। ತ್ರಾಹಿಮಾಂನರಕಾದ್ಘೋರಾದ್ದಿವ್ಯಜ್ಯೋತಿರ್ನಮೋಽಸ್ತುತೇ। ಶ್ರೀ ಸ್ವರ್ಣಗೌರ್ಯ್ಯೆ ನಮಃ ಏಕಾರತಿದೀಪಂ ಸಮರ್ಪಯಾಮಿ॥

**ದೀಪಾನಂತರಂ ಆಚಮನೀಯಂ ಸಮರ್ಪಯಾಮಿ॥**

**ಆಚಮನೀಯಾನಂತರಂ ಪರಿಮಳ ಪತ್ರಪುಷ್ಪಾಣಿ ಸಮರ್ಪಯಾಮಿ॥**

## ನೈವೇದ್ಯಂ

ನೈವೇದ್ಯಂ ಷಡ್ರಸೋಪೇತಂ ವರದೇಭಕ್ತವತ್ಸಲೆ। ಮಯಾಸಮರ್ಪಿತಂ ದೇವಿ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ॥ ಶಷ್ಕುಲೀಸ್ತಲಮೋದಕಾ ಗುಡಯುತಾ ನಾನಾವಿಧಾ–ಮೋದಕಾಶ್ಚಾಪೂಷಾಃ ಪೃಥುಕಾಶ್ಚ ಶರ್ಕರಯುತಾ। ಖಂಡೇಕ್ಷು ಮುದ್ಗಾದಯಃ॥ ಅನ್ನಂ ಚತುರ್ವಿಧಂ ಸ್ವಾದು ರಸೈಃ ಷಡ್ಭಿಃ ಸಮನ್ವಿತಂ। ಭಕ್ಷ್ಯಭೋಜ್ಯ ಸಮಾಯುಕ್ತಂ ನೈವೇದ್ಯಂ ಪ್ರತಿಗೃಹ್ಯತಾಂ॥ ನೈವೇದ್ಯಂಸಫಲಂಚೈವ ಭಕ್ಷ್ಯಭೋಜ್ಯೈಶ್ಚ ಸಂಯುತಂ। ದಧ್ನಾಘೃತೇನ ಸಂಯುಕ್ತಂ ಗೃಹಾಣ ಪರಮೇಶ್ವರೀ॥ ಖರ್ಜೂರೀ ಕದಳೀ ರಸಾಲ ಪನಸದ್ರಾಕ್ಷಾ ಕಪಿತ್ಥಾದಿಕಂ। ರುಚ್ಯಂ ಸ್ವಾದುರಸಂ ಚ ಸತ್ಫಲಯುತಂ ಗೃಹ್ಯತಾಮುತ್ತಮಂ॥

ಅಸ್ಯಮಹಾಮಂತ್ರಸ್ಯ ವಿಶ್ವಾಮಿತ್ರಋಷಿಃ। ಸವಿತಾದೇವತಾ। ಗಾಯತ್ರೀ ಛಂದಃ। ಓಂ ಭೂರ್ಭುವಸ್ಸುವಃ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್। ಸತ್ಯಂತ್ವರ್ತೇನ ಪರಿಷಿಂಚಾಮಿ ಕಾಮಧೇನುಂ ಸ್ಮರಾಮಿ। ಅಮೃತಮಸ್ತು ಅಮೃತೋಪಸ್ತರಣಮಸಿ ಸ್ವಾಹಾ। ಓಂ ಪ್ರಾಣಾಯಸ್ವಾಹಾ। ಓಂ ಅಪಾನಾಯಸ್ವಾಹಾ। ಓಂ ವ್ಯಾನಾಯಸ್ವಾಹಾ। ಓಂ ಉದಾನಾಯಸ್ವಾಹಾ। ಓಂ ಸಮಾನಾಯ ಸ್ವಾಹಾ। ಓಂ ಬ್ರಹ್ಮಣೇಸ್ವಾಹಾ। ಶ್ರೀ ಸ್ವರ್ಣಗೌರ್ಯ್ಯೆ ನಮಃ। ಕದಳೀಫಲ ನೈವೇದ್ಯಂ ಸಮರ್ಪಯಾಮಿ। ನಾರಿಕೇಳಫಲ ನೈವೇದ್ಯಂ ಸಮರ್ಪಯಾಮಿ। ಸಮಸ್ತವಿಧ ಫಲಭಕ್ಷ್ಯ ಭೋಜ್ಯ ನೈವೇದ್ಯಂ ಸಮರ್ಪಯಾಮಿ। ಮಧ್ಯೇ ಮಧ್ಯೇ ಸ್ವಾದೂದಕಂ ಸಮರ್ಪಯಾಮಿ। ಉತ್ತರಾಪೋಶನಂ ಸಮರ್ಪಯಾಮಿ । ಹಸ್ತ– ಪ್ರಕ್ಷಾಳನಂ ಸಮರ್ಪಯಾಮಿ। ಪಾದಪ್ರಕ್ಷಾಳನಂ ಸಮರ್ಪಯಾಮಿ । ಕರೋದ್ವರ್ತನಂ ಸಮರ್ಪಯಾಮಿ। ಪುನರಾಚಮನೀಯಂ ಸಮರ್ಪಯಾಮಿ॥

**ತಾಂಬೂಲಂ**

ಕ್ರಮುಕೈರ್ನಾಗಪತ್ರೈಶ್ಚ ಕರ್ಪೂರೈಃಮಿಶ್ರಚೂರ್ಣಕೈಃ ಸಂಯುಕ್ತಂ ದೇವಿ ತಾಂಬೂಲಂ ಗೃಹಾಣ ಶಿವವಲ್ಲಭೇ ಪೂಗೀಫಲ ಸಮಾಯುಕ್ತಂ ನಾಗವಲ್ಲೀದಳೈರ್ಯುತಂ। ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ॥

॥ಶ್ರೀ ಸ್ವರ್ಣಗೌರ್ಯೈ ನಮಃ ತಾಂಬೂಲಂ ಸಮರ್ಪಯಾಮಿ॥

**ದಕ್ಷಿಣಾ**

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ। ಅನಂತಪುಣ್ಯ ಫಲದಂ ಅತಃ ಶಾಂತಿಂ ಪ್ರಯಚ್ಛಮೇ।

॥ಶ್ರೀ ಸ್ವರ್ಣಗೌರ್ಯೈ ನಮಃ ಸುವರ್ಣಪುಷ್ಪ ದಕ್ಷಿಣಾಂ ಸಮರ್ಪಯಾಮಿ॥

**ಉತ್ತರನೀರಾಜನಃ**

ವರ್ತಿತ್ರಯ ಸಮಾಯುಕ್ತಂ ಕರ್ಪೂರೇಣ ಸಮನ್ವಿತಂ। ನೀರಾಜನಂ ಗೃಹಾಣೇದಂ ಮಯಾದತ್ತಂ ಮಹೇಶ್ವರೀ॥ ನೀರಾಜನಂ ಸ್ವೀಕುರು ದೇವಿ ನಿಲೋತ್ಪಲ ಶ್ಯಾಮಲವಾರಿಜಾಕ್ಷಿ। ಗೃಹಾಣ ದೇವಿ ಸುರಮೌಳಿರತ್ನ ಮರೀಚನೀರಾಜಿತ ಪಾದಪದ್ಮೇ॥

**ಮಂತ್ರ**

ಸೋಮೋವಾ ಏತಸ್ಯ ರಾಜ್ಯಮಾಧತ್ತೆ ಯೋ ರಾಜಾ ಸನ್ ರಾಜ್ಯೋವಾ–ಸೋಮೇನಯಜತೇ। ದೇವ ಸವಾಮೇತಾನಿ ಹವೀಗ್ಂಷಿ ಭವಂತಿ। ಏತಾವಂತೋ ವೈ ದೇವಾನಾಗ್ ಸವಾಃ। ತ ಏವಾಸ್ಮೈ ಸರ್ವಾನ್ ಪ್ರಯಚ್ಛಂತಿ। ತ ಏವಂ ಪುನಸ್ಸುವಂತೇ ರಾಜ್ಯಾಯ ದೇವಸೂ ರಾಜಾ ಭವತಿ। ಶ್ರೀ ಸ್ವರ್ಣಗೌರ್ಯೈ ನಮಃ ಕರ್ಪೂರ ಉತ್ತರನೀರಾಜನಂ ದರ್ಶಯಾಮಿ॥ ನೀರಾಜನಾನಂತರಂ ಆಚಮನೀಯಂ ಸಮರ್ಪಯಾಮಿ॥ ಆಚಮನೀಯಾನಂತರಂ ಪರಿಮಳ ಪತ್ರ ಪುಷ್ಪಾಣಿ ಸಮರ್ಪಯಾಮಿ॥

**ಮಂತ್ರಪುಷ್ಪ**

ಯೋಽಪಾಂ ಪುಷ್ಪಂ ವೇದಾ ಪುಷ್ಪವಾನ್ ಪ್ರಜಾವಾನ್ ಪಶುಮಾನ್ ಭವತಿ। ಚಂದ್ರಮಾ ವಾ ಅಪಾಂ ಪುಷ್ಪಂ ಪುಷ್ಪವಾನ್ ಪ್ರಜಾವಾನ್ ಪಶುಮಾನ್ ಭವತಿ। ತದ್ವಿಷ್ಣೋ ಪರಮಂ ಪದಂ। ಸದಾ ಪಶ್ಯಂತಿ ಸೂರಯಃ। ದಿವೀವಚಕ್ಷುರಾತತಂ। ತದ್ವಿಪ್ರಾಸೋವಿಪನ್ಯವೋ। ಜಾಗೃವಾಂ ಸಸ್ಸಮಿಂಧತೇ। ವಿಷ್ಣೋರ್ಯತ್ಪರಮಂ ಪದಂ। ಚಂಪಕೈಶ್ಶತಪತ್ರೈಶ್ಚ ಕಲ್ಹಾರೈಃ ಕರವೀರಕೈಃ। ಪಾಟಲೈರ್ವಕುಳೈರ್ಯುಕ್ತಂ ಗೃಹಾಣ ಕುಸುಮಾಂಜಲೀಂ॥

॥ಶ್ರೀ ಸ್ವರ್ಣಗೌರ್ಯೈ ನಮಃ ವೇದೋಕ್ತ ಮಂತ್ರಪುಷ್ಪಂ ಸಮರ್ಪಯಾಮಿ॥

## ಪ್ರದಕ್ಷಿಣ ನಮಸ್ಕಾರ

ನಮಸ್ತೇ ದೇವಿ ಕಲ್ಯಾಣಿ ನಮಸ್ತೇ ವಿಶ್ವವಂದಿತೇ। ನಮೋ ಭಕ್ತಾರ್ತಿ ನಾಶಿನ್ಯೈ ಭವಾನ್ಯೈ ತೇ ನಮೋ ನಮಃ॥ ಪ್ರದಕ್ಷಿಣತ್ರಯಂ ದೇವಿ ಪ್ರಯತ್ನೇನ ಮಯಾಕೃತಂ। ತೇನ ಪಾಪಾನಿ ಸರ್ವಾಣಿ ವ್ಯಪೋಹತು ಸದಾ ಮಮ॥ ನಮಸ್ತೇ ಗಿರಿಜೇ ದೇವಿ ನಮಸ್ತೇ ಲೋಕನಾಯಕಿ। ನಮಸ್ತೇ ಸರ್ವಪಾಪಘ್ನಿ ಸ್ವರ್ಣಗೌರಿ ನಮೋಸ್ತುತೇ॥ ಯಾನಿ ಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ ॥ ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ॥ ಪಾಪೋಽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ ತ್ರಾಹಿಮಾಂ ಕೃಪಯಾ ದೇವಿ ಶರಣಾಗತವತ್ಸಲೇ॥ ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ॥ ತಸ್ಮಾತ್ಕಾರುಣ್ಯಭಾವೇನ ರಕ್ಷ ರಕ್ಷ ಮಹೇಶ್ವರಿ॥

॥ ಶ್ರೀ ಸ್ವರ್ಣಗೌರ್ಯೈ ನಮಃ ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ॥

## ಪ್ರಸನ್ನಾರ್ಘ್ಯಂ

ಗಂಗಾದಿ ಪುಣ್ಯಸಲಿಲೈಃ ಗಂಧಮಾಲ್ಯಾದಿ ವಾಸಿತೈಃ॥ ಅರ್ಘ್ಯಂ ದದಾಮಿ ವರದೇ ಗೃಹಾಣ ಶಾರ್ಙ್ಗಧಾರಿಣೀ॥ ಪುನರರ್ಘ್ಯಂ ಪ್ರದಾಸ್ಯಾಮಿ ಮಂಗಳೇ ಶಿವಸುಂದರಿ॥ ಸರ್ವಪಾಪಕ್ಷಯಂ ಕೃತ್ವಾ ರಕ್ಷ ಮಾಂ ಶರಣಾಗತಂ॥

॥ಶ್ರೀ ಸ್ವರ್ಣಗೌರ್ಯೈ ನಮಃ ಪುನರರ್ಘ್ಯಂ ಸಮರ್ಪಯಾಮಿ॥

## ಪೂರ್ಣಫಲ ಸಮರ್ಪಣಂ

ಇದಂ ಫಲಂ ಮಯಾದತ್ತಂ ಪುತ್ರ ಪೌತ್ರಾದಿ ವೃದ್ಧಯೇ। ದೇವೀ ಪೂರ್ಣಫಲಂ ದೇಹಿ ಕೃಪಾಂ ಕುರು ಶಿವೇ ಮಯಿ॥ ಇದಂ ಫಲಂ ಮಯಾ ದೇವಿ ಸ್ಥಾಪಿತಂ ಪುರತಸ್ತವ ತೇನ ಮೇ ಸಫಲಾವಾಪ್ತಿರ್ಭವೇಜ್ಜನ್ಮನೀ ಜನ್ಮನಿ॥

॥ ಶ್ರೀ ಸ್ವರ್ಣಗೌರ್ಯೈ ನಮಃ ಪೂರ್ಣಫಲಂ ಸಮರ್ಪಯಾಮಿ॥

## ದೋರಬಂಧನಂ

ಓಂ ನಮಶ್ಶಿವಕಾಂತಾಯೈ ಹ್ರೀಂ ನಮಶ್ಶಿವಶಕ್ತಯೇ। ಶ್ರೀಂ ನಮೋ ಜಗತಾಂ ಮಾತ್ರೇ ಮಮ ಭೂಯೂನ್ಮನೋರಥಃ॥ ಭಕ್ತಪ್ರಿಯೇ ಮಹಾದೇವಿ ಸರ್ವೈಶ್ವರ್ಯ ಪ್ರದಾಯಿನೀ॥ ಸೂತ್ರಂ ತೇ ಧಾರಯಿಷ್ಯಾಮಿ ಮಮಾಭೀಷ್ಟಂ ಸದಾ ಕುರು

॥ ಇತಿ ದೋರಬಂಧನಂ ಕರಿಷ್ಯಾಮಿ॥

## ಪ್ರಾರ್ಥನಾ

ಪುತ್ರಾನ್ ದೇಹಿ ಧನಂ ದೇಹಿ ಸೌಭಾಗ್ಯಂ ದೇಹಿ ಸುವ್ರತೇ। ಅನನ್ಯಾನ್ ಸರ್ವಕಾಮಾಂಶ್ಚ ದೇಹಿ ದೇವಿ ನಮೋಸ್ತುತೇ॥

॥ಶ್ರೀ ಸ್ವರ್ಣಗೌರ್ಯೈ ನಮಃ ಮನಸಾಭೀಷ್ಟ ಪ್ರಾರ್ಥನಾಂ ಸಮರ್ಪಯಾಮಿ॥

### ಬ್ರಾಹ್ಮಣ ಪೂಜಾ ಉಪಾಯನದಾನಂ

ಭವಾನ್ಯಾಶ್ಚ ಮಹಾದೇವ್ಯಾಃ ವ್ರತಸಂಪೂರ್ಣಹೇತವೇ। ಪ್ರೀತಯೇ ದ್ವಿಜವರ್ಯಾಯ ವಾಯನಂ ಪ್ರದದಾಮ್ಯಹಂ॥ ಸಂಯುತಾನಿ ಚ ಪಕ್ವಾನ್ನೈಃ ವೇಣುಪಾತ್ರಾಣಿ ಷೋಡಶ। ಶರ್ಕರಾಘೃತಸಂಯುಕ್ತಾನ್ಯಾಹೂಯ ದ್ವಿಜದಂಪತೀಃ॥ ವ್ರತೋದ್ಯಾಪನಸಿದ್ಧ್ಯರ್ಥಂ ಬ್ರಾಹ್ಮಣೇಭ್ಯೋ ದದಾಮ್ಯಹಂ। ಸುಸಂತುಷ್ಟಾಸ್ಸುವಾಸಿನ್ಯಃ ಪಾತಿವ್ರತ್ಯೇನ ಭೂಷಿತಾಃ॥ ಮಮ ಕಾಮ್ಯ ಸಮೃದ್ಧ್ಯರ್ಥಂ ಪ್ರತಿಗೃಹ್ಣಂತು ಸುವ್ರತಾಃ॥

ಇದಂ ವಾಯನದಾನಂ ಗೌರೀಸ್ವರೂಪದ್ವಿಜವರ್ಯಾಯ ತುಭ್ಯಮಹಂ। ಸಂಪ್ರದದೇ ನ ಮಮ ನ ಮಮ॥

### ಶೂರ್ಪವಾಯನಂ

ಸ್ವರ್ಣಗೌರೀಸ್ವರೂಪ–ಸುವಾಸಿನ್ಯೈ ನಮಃ। ಗಂಧಪುಷ್ಪಧೂಪದೀಪ ಸಕಲಾರಾಧನೈಃ ಸ್ವರ್ಚಿತಂ। ಇದಂ ಶೂರ್ಪವಾಯನದಾನಂ ಸ್ವರ್ಣಗೌರೀ ಸ್ವರೂಪಿಣ್ಯೈ ಸುವಾಸಿನ್ಯೈ ಶುಭ್ಯಮಹಂ ಸಂಪ್ರದೇ। ನ ಮಮ ನ ಮಮ॥

### ಪುನಃ ಪೂಜಾ

**॥ಆರಾಧಿತಾನಾಂ ದೇವತಾನಾಂ ಪುನಃ ಪೂಜಾಂ ಕರಿಷ್ಯೇ॥**

ಶ್ರೀ ಸ್ವರ್ಣಗೌರೀ ದೇವತಾಭ್ಯೋ ನಮಃ। ಪೂಜಾಂತೇ ಛತ್ರಂ ಸಮರ್ಪಯಾಮಿ। ಚಾಮರಂ ಸಮರ್ಪಯಾಮಿ। ನೃತ್ಯಂ ಸಮರ್ಪಯಾಮಿ। ಗೀತಂ ಸಮರ್ಪಯಾಮಿ। ವಾದ್ಯಂ ಸಮರ್ಪಯಾಮಿ। ಆಂದೋಳಿಕಾರೋಹಣಂ ಸಮರ್ಪಯಾಮಿ। ಅಶ್ವಾರೋಹಣಂ ಸಮರ್ಪಯಾಮಿ। ಗಜಾರೋಹಣಂ ಸಮರ್ಪಯಾಮಿ। ಪುರಾಣಶ್ರವಣಂ ಸಮರ್ಪಯಾಮಿ। ಪಂಚಾಂಗಶ್ರವಣಂ ಸಮರ್ಪಯಾಮಿ।

ಶ್ರೀ ಸ್ವರ್ಣಗೌರೀ ದೇವತಾಭ್ಯೋ ನಮಃ ಸಮಸ್ತ ರಾಜೋಪಚಾರ ದೇವೋಪಚಾರ, ಶಕ್ತ್ಯುಪಚಾರ, ಭಕ್ತ್ಯುಪಚಾರಪೂಜಾಃ ಸಮರ್ಪಯಾಮಿ॥

**(ಅನಂತರ ಹಾಡನ್ನು ಹೇಳಿಕೊಂಡು ಆರತಿಯನ್ನು ಮಾಡುವುದು).**

### ಆತ್ಮಸಮರ್ಪಣಂ

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾ ಕ್ರಿಯಾದಿಷು। ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇತಮಚ್ಯುತಂ॥ ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಮಹೇಶ್ವರಿ। ಯತ್ಪೂಜಿತಂ ಮಯಾದೇವೀ ಪರಿಪೂರ್ಣಂ ತದಸ್ತು ಮೇ॥ ಅನೇನ ಮಯಾಕೃತೇನ ಶ್ರೀ ಸ್ವರ್ಣಗೌರೀ ದೇವತಾ ಪೂಜಾ ವಿಧಾನೇನಭಗವತೀ ಸರ್ವಾತ್ಮಕಾ ಸ್ವರ್ಣಗೌರೀ ದೇವತಾ ಸುಪ್ರೀತಾ ಸುಪ್ರಸನ್ನಾ ವರದಾ ಭವತು॥ ಮಮ ಇಷ್ಟಕಾಮ್ಯಾರ್ಥ ಸಿದ್ಧಿರಸ್ತು ಸಮಸ್ತ ಸನ್ಮಂಗಳಾನಿ ಭವಂತು॥ ಮಧ್ಯೇ ಮಧ್ಯೇ ಮಂತ್ರ

ತಂತ್ರ ಸ್ವರವರ್ಣ ನ್ಯೂನಾತಿರಿಕ್ತ ಲೋಪದೋಷ ಪ್ರಾಯಶ್ಚಿತ್ತಾರ್ಥಂ ಅಚ್ಯುತಾನಂತ ಗೋವಿಂದ ನಾಮತ್ರಯ ಮಹಾಮಂತ್ರ ಜಪಂ ಕರಿಷ್ಯೇ।

## ಮಹಾಮಂತ್ರಜಪಂ

ಅಚ್ಯುತಾಯ ನಮಃ। ಅನಂತಾಯ ನಮಃ। ಗೋವಿಂದಾಯ ನಮಃ। ಅಚ್ಯುತಾಯ ನಮಃ। ಅನಂತಾಯ ನಮಃ। ಗೋವಿಂದಾಯ ನಮಃ। ಅಚ್ಯುತಾಯ ನಮಃ। ಅನಂತಾಯ ನಮಃ। ಗೋವಿಂದಾಯ ನಮಃ। ಅಚ್ಯುತಾನಂತ ಗೋವಿಂದೇಭ್ಯೋ ನಮಃ।।

ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ಕರೋಮಿ ಯದ್ಯತ್ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮೀ। ನಮಸ್ಕರೋಮಿ।। ಶ್ರೀ ಸ್ವರ್ಣಗೌರೀ ದೇವತಾ ಪ್ರಸಾದಂ ಶಿರಸಾ ಗೃಹ್ಣಾಮಿ।।

## ಉದ್ವಾಸನಾ ಕ್ರಮ

(ಆಯಾ ಸಂವತ್ಸರದ ಪಂಚಾಂಗ ಸೂಚನೆಯ ಪ್ರಕಾರ ಸ್ವರ್ಣಗೌರೀ ವಿಸರ್ಜನೆ ಮಾಡಬೇಕು. ಘಂಟಾನಾದ, ಪೂಜೆ, ನೀರಾಜನ, ಆರತಿ ಮಾಡಿ ಪ್ರಾರ್ಥಿಸಬೇಕು).

ಯಾಂತು ದೇವಿಗಣಾಸ್ಸರ್ವಾಃ ಪೂಜಾಮಾದಾಯ ಮತ್ಕೃತಾಂ। ಇಷ್ಟ ಕಾಮ್ಯಾರ್ಥ ಸಿದ್ಧ್ಯರ್ಥಂ ಪುನರಾಗಮನಾಯ ಚ।। ಶ್ರೀ ಸ್ವರ್ಣಗೌರ್ಯೈ ನಮಃ ಯಥಾಸ್ಥಾನ ಮುದ್ವಾಸಯಾಮಿ।। (ಗೌರೀ ಪ್ರತಿಮೆಯನ್ನು ಸ್ವಲ್ಪ ಬಲಗಡೆ ಸರಿಸಬೇಕು). ನಂತರ ಅಕ್ಕಿ, ತೆಂಗಿನಕಾಯಿ, ಬೆಲ್ಲ, ವಸ್ತ್ರ (ಕಣ) ಇವುಗಳಿಂದ ಗೌರೀದೇವಿಗೆ ಮಡಿಲು ತುಂಬಬೇಕು.

ಇತಿ ಶ್ರೀ ಸ್ವರ್ಣಗೌರೀ ವ್ರತ ಪೂಜಾ ವಿಧಾನಂ ಸಂಪೂರ್ಣಂ

# ಶ್ರೀ ಸ್ವರ್ಣಗೌರೀ ವ್ರತ ಕಥೆ

## (ಸ್ಕಾಂದ ಪುರಾಣೋಕ್ತ)

ಸೂತಪುರಾಣಿಕರು ಶೌನಕಾದಿ ಮಹಾಮುನಿಗಳನ್ನು ಕುರಿತು, ಎಲೈ ಮುನಿವರ್ಯರೇ! ಕೈಲಾಸ ಪರ್ವತದಲ್ಲಿ ಪರಶಿವಮೂರ್ತಿಯು ಯಕ್ಷ ಕಿನ್ನರ ಗಂಧರ್ವರಿಂದ ಸೇವೆಯನ್ನು ಕೈಗೊಳ್ಳುತ್ತಾ ನಾರದ ತುಂಬುರರ ವೀಣಾಗಾನದಿಂದ ಆನಂದವನ್ನು ಹೊಂದಿರುವ ಸಮಯದಲ್ಲಿ ಷಣ್ಮುಖಸ್ವಾಮಿಯು ಭಕ್ತಿವಿನಯಪೂರಿತನಾಗಿ ಸ್ವಾಮಿಯನ್ನು ಕುರಿತು, ಹೇ ಸ್ವಾಮಿಯೇ, ಪ್ರಪಂಚದಲ್ಲಿ ಜನರು ಯಾವ ವ್ರತವನ್ನು ಆಚರಿಸಿದರೆ ಸಮಸ್ತ ಇಷ್ಟಾರ್ಥಗಳನ್ನು ಹೊಂದಿ ಸಂತೋಷಚಿತ್ತರಾಗಿ ಯಾವ ವಿಧವಾದ ನ್ಯೂನತೆಯೂ ಇಲ್ಲದೆ ಪುತ್ರಪೌತ್ರಾಭಿವೃದ್ಧಿಯನ್ನು ಹೊಂದುತ್ತಾರೆಯೋ ಅಂತಹ ವ್ರತವೊಂದನ್ನು ಪ್ರಪಂಚೋದ್ಧಾರಕ್ಕಾಗಿ ತಿಳಿಸಬೇಕೆಂದು ಪ್ರಾರ್ಥಿಸಲು, ಪರಮೇಶ್ವರನು ಷಣ್ಮುಖನ

ಮಾತನ್ನು ಕೇಳಿ ಆನಂದದಿಂದ ಎಲೇ ಷಣ್ಮುಖನೇ, ಒಳ್ಳೆಯ ಪ್ರಶ್ನೆಯನ್ನೇ ಮಾಡಿದೆ, ಹೇಳುವೆನು ಕೇಳು ; ಪ್ರಪಂಚದಲ್ಲಿ ಜನಗಳು ಆಚರಿಸತಕ್ಕ ಈ ವ್ರತವು ಸಕಲ ಇಷ್ಟಾರ್ಥಗಳನ್ನು ಕೊಡವುದಲ್ಲದೆ ಮಹಾಪುಣ್ಯಕರವಾದದ್ದು. ಈ ಬಗ್ಗೆ ಇತಿಹಾಸವನ್ನು ಹೇಳುವೆನು ಕೇಳು.

ಪೂರ್ವಕಾಲದಲ್ಲಿ ಸರಸ್ವತೀ ನದೀತೀರದಲ್ಲಿನ ವಿಮಲಾಪುರವೆಂಬ ಪಟ್ಟಣವನ್ನು ಚಂದ್ರಪ್ರಭನೆಂಬ ರಾಜನು ಸತ್ಯಧರ್ಮಗಳನ್ನು ಬಿಡದೆ ಪರಿಪಾಲಿಸುತ್ತಿದ್ದನು. ಆತನಿಗೆ ಸೌಂದರ್ಯನಿಧಿಗಳಾದ ಇಬ್ಬರು ಪತ್ನಿಯರಿದ್ದರು. ಇವರಲ್ಲಿ ಹಿರಿಯ ಹೆಂಡತಿಯಲ್ಲಿ ರಾಜನಿಗೆ ಪ್ರೇಮವು ಅತಿಯಾಗಿದ್ದಿತು. ಹೀಗಿರಲು ಚಂದ್ರಪ್ರಭನು ಅರಣ್ಯದಲ್ಲಿ ಕ್ರೂರಮೃಗಗಳ ಕಾಟವು ಹೆಚ್ಚಾಗಿರುವುದೆಂದು ವನಪಾಲಕರಿಂದರಿತು ಬೇಟೆಯಾಡುವ ಉದ್ದಿಶ್ಯದಿಂದ ಕಾಡಿಗೆ ಹೊರಟನು. ಅಲ್ಲಿ ಕ್ರೂರ ಮೃಗಗಳನ್ನು ಬೇಟೆಯಾಡಿ ಬಳಲಿ ವಿಶ್ರಾಂತಿಗಾಗಿ ಸ್ಥಳವನ್ನು ಹುಡುಕಿಕೊಂಡು ಹೊರಟನು. ದೂರದಲ್ಲಿ ಒಂದು ರಮಣೀಯವಾದ ಸರೋವರವು ಗೋಚರಿಸಿತು. ಆ ಸ್ಥಳಕ್ಕೆ ತಲುಪಲು, ಅಲ್ಲಿ ಅನೇಕ ಮಂದಿ ಅಪ್ಸರ ಸ್ತ್ರೀಯರು ನಿಯಮದಿಂದ ವ್ರತಾಚರಣೆ (ದೇವತಾಪೂಜೆ) ಮಾಡುತ್ತಿರುವುದನ್ನು ಕಂಡು ಅವರನ್ನು ಕುರಿತು ಎಲೈ ಸೌಭಾಗ್ಯವತಿಯರೇ, ನೀವು ಮಾಡುತ್ತಿರುವ ದೇವತಾಪೂಜೆ ಯಾವುದು? ಎಂದು ಕೇಳಲು ಅವರುಗಳು ಎಲೈ ಮಾನ್ಯನೇ, ನಾವು ಅತ್ಯಂತ ಪುಣ್ಯಕರವಾದ ಸ್ವರ್ಣಗೌರಿ ವ್ರತವನ್ನು ಮಾಡುತ್ತಿದ್ದೇವೆ ಎಂದು ಹೇಳಲು, ಆಶ್ಚರ್ಯಚಕಿತನಾದ ರಾಜನು, ಎಲೈ ಅಪ್ಸರ ಕಾಮಿನಿಯರೇ, ಈ ವ್ರತ ವಿಧಾನವು ಹೇಗೆ ? ಇದರಿಂದ ಯಾವ ವಿಧವಾದ ಇಷ್ಟಾರ್ಥಸಿದ್ಧಿಯಾಗುವುದು? ಇದೆಲ್ಲವನ್ನು ಸವಿಸ್ತಾರವಾಗಿ ಹೇಳಬೇಕೆಂದು ಕೇಳಲು, ಆ ಅಪ್ಸರಾಂಗನೆಯರು, ಎಲೈ ಪುಣ್ಯಪುರುಷನೆ, ಈ ವ್ರತವನ್ನು ಭಾದ್ರಪದ ಮಾಸ ಶುದ್ಧ ತದಿಗೆ ದಿನಗಳಲ್ಲಿ ಆಚರಿಸಬೇಕು. ಹದಿನಾರು ವರ್ಷಗಳು ಕ್ರಮವಾಗಿ ಈ ವ್ರತವನ್ನು ಆಚರಿಸಿ ಆದಿಯಲ್ಲಾಗಲೀ, ಮಧ್ಯದಲ್ಲಾಗಲೀ, ಅಂತ್ಯದಲ್ಲಾಗಲಿ ವ್ರತದ ಉದ್ಯಾಪನೆಯನ್ನು ಮಾಡಬೇಕು ಎಂದು ಹೇಳಿದ ಅವರ ಮಾತನ್ನು ಕೇಳಿ ರಾಜನು ಅತ್ಯಂತ ಭಕ್ತಿಯಿಂದ ಅವರು ಹೇಳಿದ ಪ್ರಕಾರ ಅಲ್ಲಿಯೇ ವ್ರತವನ್ನು ಆಚರಿಸಿ ಷೋಡಷಗ್ರಂಥಿಯುಕ್ತವಾದ ದೋರವನ್ನು ದಕ್ಷಿಣ (ಬಲ) ಹಸ್ತದಲ್ಲಿ ಧರಿಸಿ ಅರಮನೆಗೆ ಹಿಂದಿರುಗಿ ತನ್ನ ಇಬ್ಬರು ಭಾರ್ಯೆಯರಿಗೂ ಈ ಸಂಗತಿಯನ್ನೆಲ್ಲಾ ಹೇಳಿ ವ್ರತವನ್ನು ಮಾಡಿಸಲು ಪ್ರಯತ್ನಪಟ್ಟನು. ಹಿರಿಯ ಹೆಂಡತಿಯು ಪತಿಯ ಮಾತನ್ನು ಕೇಳುತ್ತಲೇ ಕೋಪದಿಂದ ಪತಿಯು ಧರಿಸಿದ್ದ ದಾರವನ್ನು ಕಿತ್ತು ಅರಮನೆಯ ಹಿಂದೆ ಇದ್ದ ಒಂದು ಒಣಗಿದ ಗಿಡದ ಮೇಲೆ ಎಸೆದಳು. ಪತಿಯು ಇದು ಸರಿಯಲ್ಲವೆಂದು ಎಷ್ಟು ಹೇಳಿದರೂ ಕೇಳಲಿಲ್ಲ. ಈಕೆಯು ಎಸೆದ ವ್ರತ ದಾರದ ಮಹಿಮೆಯಿಂದ ಗಿಡವು ಒಣಗಿದ್ದರೂ ಚಿಗುರಿ ಪುಷ್ಪಗಳಿಂದಲೂ, ಫಲಗಳಿಂದಲೂ ಸಮೃದ್ಧಿಯಾಗಲು ಇದನ್ನೆಲ್ಲಾ ನೋಡಿದ ರಾಜನ ಕಿರಿಯ ಭಾರ್ಯೆಯು





ಆ ದಾರವನ್ನು ಭಕ್ತಿಯಿಂದ ತೆಗೆದುಕೊಂಡು ಹೋಗಿ ಪತಿಯು ಹೇಳಿದಂತೆ ವ್ರತವನ್ನು ಆಚರಿಸಿ ಆತನ ಪ್ರೀತಿಗೆ ಪಾತ್ರಳಾಗಿ ಬೇಕಾದ ಇಷ್ಟಾರ್ಥಗಳೆಲ್ಲವನ್ನು ಪಡೆದು ಆನಂದದಿಂದಿದ್ದಳು. ಹಿರಿಯ ಹೆಂಡತಿಯು ವ್ರತವನ್ನು ದೂರೀಕರಿಸಿದ ಪಾತಕದಿಂದ ಅತ್ಯಂತ ತೊಂದರೆ ಗಳಿಗೊಳಗಾಗಿ ರಾಜನಿಂದ ದೂಷಿಸಲ್ಪಟ್ಟವಳಾಗಿ ಅರಣ್ಯಕ್ಕೆ ಹೋಗಿ ಅಲ್ಲಿದ್ದ ಋಷ್ಯಾಶ್ರಮಗಳನ್ನು ಆಶ್ರಯಿಸಿದಳು.

ಅವರೂ ಸಹ ನೀನು ಪಾಪಿಯು, ನಮ್ಮ ಆಶ್ರಮಗಳಲ್ಲಿ ನಿಲ್ಲಲು ಅವಕಾಶ ವಿಲ್ಲವೆಂದು ತೊರೆದುಬಿಟ್ಟರು. ಅಲ್ಲಿಂದ ತಿರಸ್ಕೃತಳಾಗಿ ಹೊರಟು ಫಣಪತಿಯನ್ನು ದರ್ಶಿಸಿದಳು. ಆದರೂ ತನ್ನ ಮನಸ್ಸಿನಲ್ಲಿರುವಂತೆ ಗೌರೀದರ್ಶನವಿಲ್ಲದುದರಿಂದ ಅದಕ್ಕಾಗಿ ಉಪವಾಸ ವ್ರತವನ್ನು ಕೈಗೊಂಡಳು. ಅಲ್ಲಿಗೂ ತನ್ನ ಉದ್ದಿಶ್ಯ ಫಲಕಾರಿಯಾಗದಿರಲು, ಆಕೆಗೆ ವರಲಕ್ಷ್ಮಿ ದರ್ಶನವಾಯಿತು. ಆಕೆಯಿಂದಲೂ ತಿರಸ್ಕೃತಳಾಗಿ ಹೊರಟು ಸ್ವರ್ಣಗೌರಿಯನ್ನೇ ಧ್ಯಾನಿಸುತ್ತಾ ದುಃಖದಿಂದ ಒಂದು ಪ್ರದೇಶದಲ್ಲಿ ಕುಳಿತು ಕೊಳ್ಳಲು, ರಾಣಿಯಲ್ಲಿ ಸಂತುಷ್ಟಗೊಂಡ ಸ್ವರ್ಣಗೌರಿಯು ಪ್ರತ್ಯಕ್ಷಳಾದಳು. ಕೂಡಲೇ ರಾಜನ ಭಾರ್ಯೆಯು ಸಂತೋಷದಿಂದಲೂ, ಭಕ್ತಿಯಿಂದಲೂ ದೇವಿಗೆ ಸಾಷ್ಟಾಂಗ ದಂಡ ಪ್ರಣಾಮಗಳನ್ನು ಮಾಡಿ ಸ್ತುತಿಸಿದಳು. ಈಕೆಯು ಮಾಡಿದ ಭಕ್ತಿಯುಕ್ತವಾದ ಸ್ತುತಿಯಿಂದ ಗೌರೀ ದೇವಿಯು ತೃಪ್ತಳಾಗಿ ಆಕೆಗೆ ಸೌಭಾಗ್ಯವನ್ನೂ, ಪುತ್ರ ಸಂತಾನವನ್ನೂ, ಇಷ್ಟಾರ್ಥಸಿದ್ಧಿಗಳನ್ನೂ ನೀಡಿ ಅಂತರ್ಧಾನಳಾದಳು. ಸಂತೋಷದಿಂದ ರಾಣಿಯು ತನ್ನ ಪತಿಗೃಹವನ್ನು ಸೇರಿದಳು.

ಆ ರಾಜಪತ್ನಿಯು ಸ್ವರ್ಣಗೌರೀ ವ್ರತವನ್ನು ಆಚರಿಸಿದ್ದರಿಂದ ಸಕಲೈಶ್ವರ್ಯ ಸಹಿತ ಪತಿಯೊಡನೆ ಅನೇಕ ಕಾಲ ಬಹುಸೌಖ್ಯವಾಗಿ ಪುತ್ರಪೌತ್ರಸಮೇತಳಾಗಿದ್ದು ಪತಿ ಸಹಿತ ಶಿವಲೋಕ ಹೊಂದಿ ಕೈವಲ್ಯಮುಕ್ತಿಯನ್ನು ಪಡೆದಳು. ಆದ್ದರಿಂದ ಈ ಸ್ವರ್ಣಗೌರೀ ವ್ರತವನ್ನು ಪ್ರತಿವರ್ಷವೂ ಯಾರು ಭಾದ್ರಪದಶುದ್ಧ ತದಿಗೆ ದಿನದಲ್ಲಿ ಆಚರಿಸುವರೋ ಅವರಿಗೆ ಸಮಸ್ತ ಇಷ್ಟಾರ್ಥಸಿದ್ಧಿಯೂ, ಪುತ್ರಪೌತ್ರಾಭಿವೃದ್ಧಿಯೂ, ಮೋಕ್ಷವೂ ದೊರೆಯುವುದೆಂದು ಪರಮೇಶ್ವರನು ಷಣ್ಮುಖಸ್ವಾಮಿಯನ್ನು ಕುರಿತು ಹೇಳಿದ ಈ ಸ್ವರ್ಣಗೌರೀವ್ರತ ಕಥೆಯನ್ನು ಸೂತಪುರಾಣಿಕರು ಶೌನಕಾದಿ ಋಷಿಗಳಿಗೆ ಹೇಳಿದರು ಎಂಬಲ್ಲಿಗೆ ಶ್ರೀ ಸ್ವರ್ಣಗೌರೀವ್ರತ ಕಥೆ ಸಂಪೂರ್ಣವಾಯಿತು.

(ಈ ಸ್ವರ್ಣಗೌರೀವ್ರತ ಕಥೆಯು ಸ್ಕಾಂದ ಪುರಾಣದಲ್ಲಿ ಹೇಳಲ್ಪಟ್ಟಿದೆ)

॥ ಸ್ವರ್ಣಗೌರೀ ಪ್ರಸಾದ ಸಿದ್ಧಿರಸ್ತು ॥

ಸಮಸ್ತ ಸನ್ಮಂಗಳಾನಿ ಭವಂತು



॥ ಶುಭಮಸ್ತು ॥

ಶ್ರೀ ಮಂಗಳಗೌರ್ಯೈ ನಮಃ

# ಶ್ರೀ ಮಂಗಳಗೌರೀ ವ್ರತ

**ಸೂಚನೆ :** ಈ ವ್ರತವನ್ನು ಶ್ರಾವಣ ಮಂಗಳವಾರಗಳಲ್ಲಿ ಆಚರಿಸುವುದು. ಈ ವ್ರತವನ್ನು ಮದುವೆಯಾದ ಸುಮಂಗಲೆಯರು ಮದುವೆಯಾದ ಪರ್ಯಂತ ಐದು ವರ್ಷಗಳವರೆವಿಗೂ ಆಚರಿಸಬೇಕು.

**-: ವ್ರತಕ್ಕೆ ಸಿದ್ಧತೆಗಳು :-**

1. ಕಲಶ, ಪೂಜಾಸಾಮಗ್ರಿ.
2. ಪರಿಮಳ ದ್ರವ್ಯಗಳು, ತಾಂಬೂಲ.
3. ಹಣ್ಣುಗಳು, ತೆಂಗಿನಕಾಯಿ.
4. ಕುಬುಸದ ಖಣ (ರೇಷ್ಮೆ ಅಥವಾ ನೂಲಿನ ವಸ್ತ್ರ).
5. ವಾಯನ ಸಾಮಾಗ್ರಿ (ಹಸಿಕಡಲೆ ಸಮೇತ) (ಮೊರದ ಬಾಗಿನ).

## ಪುರಾಣ ವಚನ

ಯುಧಿಷ್ಠರ ಉವಾಚ : ವ್ರತಂ ಮಂಗಳಗೌರ್ಯಾಸ್ತು ಸೌಮಂಗಲ್ಯ ಪ್ರವರ್ಧನಂ। ಸ್ತ್ರೀಕರ್ತವ್ಯ ಮನುಬ್ರೂಹಿ ಪುಣ್ಯಂಸೋದ್ಯಾಪನಂ ಹರೆ॥

ಶ್ರೀಕೃಷ್ಣ ಉವಾಚ : ವದಾಮಿ ವ್ರತರಾಜಸ್ಯ ಸ್ತ್ರೀಭಿಃಕರ್ತವ್ಯಮುತ್ತಮಂ। ಶ್ರಾವಣೇ ಭೌಮವಾರೇಷು ಚತ್ರುಷು ವ್ರತಮಾಚರೇತ್। ಪ್ರಾತುರುತ್ಥಾಯಸ್ನಾತ್ವಾಚ ಸಂಕಲ್ಪ್ಯ ವ್ರತಮುತ್ತಮಂ। ದೀಪಂ ಮಹಾಂತಂ ಪ್ರಜ್ವಾಲ್ಯ ಪೂಜಯೇತ್ಸರ್ವಮಂಗಳಾಂ॥

## ಪೂಜಾವಿಧಿ

ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಕ್ಷಸಾಂ। ಕುರ್ವೇಘಂಟಾರವಂ ತತ್ರ ದೇವತಾಹ್ವಾನ ಲಾಂಛನಂ॥

(ಘಂಟಾನಾದವನ್ನು ಮಾಡಬೇಕು ಮತ್ತು ಹೂವು ಅಕ್ಷತೆ ತೆಗೆದುಕೊಳ್ಳಬೇಕು.)

ಧ್ಯಾನಂ : ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ॥

ಸಂಕಲ್ಪ : ಶುಭೇ ಶೋಭನೇ ಮುಹೂರ್ತೇ। ಆದ್ಯಬ್ರಹ್ಮಣಃ ದ್ವಿತೀಯ ಪ್ರಹರಾರ್ಧೆ। ಶ್ವೇತವರಾಹಕಲ್ಪೇ। ವೈವಸ್ವತ ಮನ್ವಂತರೇ। ಕಲಿಯುಗೇ। ಪ್ರಥಮಪಾದೇ। ಭರತವರ್ಷೇ। ಭರತಖಂಡೇ। ಜಂಬೂದ್ವೀಪೇ। ದಂಡಕಾರಣ್ಯೇ। ಗೋದಾವರ್ಯಾಃ ದಕ್ಷಿಣೇತೀರೇ। ಶಾಲಿವಾಹನಶಕೇ। ಬೌದ್ಧಾವತಾರೇ। ರಾಮಕ್ಷೇತ್ರೇ। ಅಸ್ಮಿನ್ವರ್ತಮಾನೇ। ವ್ಯವಹಾರಿಕೇ ಚಾಂದ್ರಮಾನೇನ ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ। ಸಂವತ್ಸರೇ.... ಅಯನೇ.... ಋತೌ...... ಮಾಸೇ...... ಪಕ್ಷೇ..... ತಿಥೌ..... ವಾಸರ..... ಯುಕ್ತಾಯಾಂ ಶುಭನಕ್ಷತ್ರ ಶುಭಯೋಗ ಶುಭಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ। ಶುಭತಿಥೌ। ಮಮ ಉಪಾತ್ತ ದುರಿತಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಧರ್ಮಾರ್ಥ ಕಾಮಮೋಕ್ಷ ಚತುರ್ವಿಧಫಲ ಪುರುಷಾರ್ಥ ಸಿದ್ಧ್ಯರ್ಥಂ ಶ್ರೀಮಂಗಳದೇವತಾ ಮುದ್ದಿಶ್ಯ ಮಂಗಳಗೌರೀ ದೇವತಾ ಪ್ರೀತ್ಯರ್ಥಂ ಮಂಗಳಗೌರೀ ಪೂಜಾಂ ಕರಿಷ್ಯೇ॥

(ಕಲಶಕ್ಕೆ ಮೂರುಕಡೆ ಗಂಧವನ್ನು ಇಟ್ಟು ಅಕ್ಷತೆಯನ್ನು ಗಂಧದ ಬೊಟ್ಟಿನ ಮೇಲೆ ಇಟ್ಟು, ಕಲಶದಲ್ಲಿ ಪುಷ್ಪವನ್ನು ಹಾಕಿ ಕೈಯನ್ನು ಮುಚ್ಚಿಕೊಳ್ಳಬೇಕು).

ಕಲಶಪೂಜಾ : ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಾ॥ ಮೂಲೇ ತತ್ರ ಸ್ಥಿತೋಬ್ರಹ್ಮಾ ಮಧ್ಯೆ ಮಾತೃಗಣಸ್ಮೃತಾಂ ಕುಕ್ಷೌತು ಸಾಗರಾಸ್ಸರ್ವೇ ಸಪ್ತದ್ವೀಪಾವಸುಂಧರಾ। ಋಗ್ವೇದೋಥಯಜುರ್ವೇದ ಸಾಮವೇದೋಹ್ಯಥರ್ವಣಃ ಅಂಗೈಶ್ಚ ಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾಃ ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ॥ ಗಂಗೇ ಚ ಯಮುನೇಚೈವ ಗೋದಾವರೀ ಸರಸ್ವತೀ ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು॥

ಮಂತ್ರ : ಆಪೋವಾ ಇದಗ್ಂ ಸರ್ವಂ ವಿಶ್ವಭೂತಾನ್ಯಾಪಃ॥ ಪ್ರಾಣಾವಾಆಪಃ ಪಶವ ಆಪೋನ್ನಮಾಪೋಮೃತಮಾಪಸ್ಸಂರಾಡಾಪೋವಿರಾಡಾಪ ಸ್ವರಾಡಾಪ ಶ್ಛಂದಾಗ್ ಸ್ಯಾಪೋ ಜ್ಯೋತಿಗ್ಂಷ್ಯಾಪೋ ಯಜುಗ್ಂಷ್ಯಾಪ ಸತ್ಯಮಾನಸ್ಸರ್ವಾ ದೇವತಾ ಆಪೋ ಭೂರ್ಭುವಸ್ಸುವರಾಪ ಓಂ–

ಕಶೋದಕೇನ ಪೂಜಾದ್ರವ್ಯಾಣಿ ಸಂಪ್ರೋಕ್ಷ್ಯ ದೇವಮಾತ್ಮಾನಂ ಪ್ರೋಕ್ಷಯೇತ್ (ಕಲಶದಲ್ಲಿರುವ ನೀರನ್ನು ತೆಗೆದುಕೊಂಡು ದೇವರ ಮೇಲೆಯೂ ಪೂಜಾದ್ರವ್ಯಗಳ ಮೇಲೆಯೂ, ತನ್ನ ಮೇಲೂ ಪ್ರೋಕ್ಷಣೆಯನ್ನು ಮಾಡಿಕೊಳ್ಳಬೇಕು).

**ಗಣಾಧಿಪತಿ ಪೂಜಾ :** ಗಣಾನಾಂತ್ವಾ ಗಣಪತಿಗ್ಂಹವಾಮಹೇ ಕವಿಂ ಕವೀನಾಮುಪಶ್ರವಸ್ತವಂ ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಶ್ಶೃಣ್ವನ್ನೂತಿ–ಭಿಸ್ಸೀದಸಾಧನಂ॥

**- ಮಹಾಗಣಪತಿಂ ಧ್ಯಾಯಾಮಿ -**

ಮಹಾಗಣಾಧಿಪತಯೇ ನಮಃ ಆಸನಂ ಸಮರ್ಪಯಾಮಿ
" ಅರ್ಘ್ಯಂ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ ಪಾದ್ಯಂ ಸಮರ್ಪಯಾಮಿ
" ಆಚಮನೀಯಂ ಸಮರ್ಪಯಾಮಿ
" ಔಪಚಾರಿಕಸ್ನಾನಂ ಸಮರ್ಪಯಾಮಿ
" ಸ್ನಾನಾನಂತರಂ ಆಚಮನೀಯಂ ಸಮರ್ಪಯಾಮಿ
" ವಸ್ತ್ರಾರ್ಥಂ ಅಕ್ಷತಾನ್ ಸಮರ್ಪಯಾಮಿ
" ಯಜ್ಞೋಪವೀತಾರ್ಥಂ ಅಕ್ಷತಾನ್ ಸಮರ್ಪಯಾಮಿ
" ಗಂಧಾನ್ ಧಾರಯಾಮಿ

ಗಂಧಸ್ಯೋಪರಿ – ಅಲಂಕಾರಾರ್ಥಂ ಅಕ್ಷತಾ ಸಮರ್ಪಯಾಮಿ। ಪುಷ್ಪಂ ಪೂಜಯಾಮಿ॥ ಓಂ ಸುಮುಖಾಯನಮಃ, ಏಕದಂತಾಯನಮಃ, ಕಪಿಲಾಯ ನಮಃ, ಗಜಕರ್ಣಕಾಯನಮಃ, ಲಂಬೋದರಾಯನಮಃ, ವಿಕರ್ಣಾಯ ನಮಃ, ವಿಘ್ನರಾಜಾಯನಮಃ, ಧೂಮಕೇತವೇನಮಃ, ಗಣಾಧ್ಯಕ್ಷಾಯ ನಮಃ, ಫಾಲಚಂದ್ರಾಯನಮಃ, ಕುಮಾರಗುರವೇನಮಃ, ಈಶ್ವರಪುತ್ರಾಯ ನಮಃ, ಸರ್ವಸಿದ್ಧಿಪ್ರದಾಯ ನಮಃ, ಮಹಾಗಣಾಧಿಪತಯೇ ನಮಃ, ನಾನಾ ವಿಧ ಪರಿಮಳ ಪತ್ರಪುಷ್ಪಾಣಿ ಸಮರ್ಪಯಾಮಿ, ಧೂಪಾರ್ಥಂ ಅಕ್ಷತಾನ್ ಸಮರ್ಪಯಾಮಿ, ಶ್ರೀಮರ್ಮಹಾಗಣಾಧಿಪತಯೇ ನಮಃ, ದೀಪಾರ್ಥಂ ಅಕ್ಷತಾನ್ ಸಮರ್ಪಯಾಮಿ, ಓಂಭೂರ್ಭುವಸ್ಸುವಃ.... ಯಾತ್ ದೇವಸವಿತಃ ಪ್ರಸುವ, ಸತ್ಯಂತ್ವರ್ತೇನ ಪರಿಷಿಂಚಾಮಿ, ಅಮೃತಮಸ್ತು ಅಮೃತೋಪಸ್ತರಣಮಿಸಿ ಸ್ವಾಹಾ, ಓಂ ಅಪಾನಾಯ ಸ್ವಾಹಾ, ಓಂ ವ್ಯಾನಾಯ ಸ್ವಾಹಾ, ಉದಾನಾಯ ಸ್ವಾಹಾ, ಬ್ರಹ್ಮಣೇ ಸ್ವಾಹಾ, ಬ್ರಹ್ಮಣೇಮ, ಆತ್ಮಾಮೃತತ್ವಾಯ ಕಲ್ಪತೇ॥ ಮಹಾಗಣಾಧಿಪತಯೇ ನಮಃ ನಿವೇದನಂ

ಸಮರ್ಪಯಾಮಿ, ಮಹಾಗಣಾಧಿಪತಯೇ ನಮಃ ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ, ಮಹಾಗಣಾಧಿಪತಯೇ ನಮಃ ತಾಂಬೂಲಂ ಸಮರ್ಪಯಾಮಿ, ಮಹಾಗಣಾಧಿಪತಯೇ ನಮಃ ನೀರಾಜನಂ ಸಮರ್ಪಯಾಮಿ, ನೀರಾಜನಾನಂತರಂ ಆಚಮನೀಯಂ ಸಮರ್ಪಯಾಮಿ॥

ವಕ್ರತುಂಡಮಹಾಕಾಯ ಕೋಟಿಸೂರ್ಯ ಸಮಪ್ರಭ॥ ಅವಿಘ್ನಂಕುರುಮೇ ದೇವ ಸರ್ವಕಾರ್ಯೇಷು ಸರ್ವದಾ॥ ಮಹಾಗಣಾಧಿಪತಯೇ ನಮಃ – ಮಂತ್ರಪುಷ್ಪಂ ಸಮರ್ಪಯಾಮಿ, ಆತ್ಮಪ್ರದಕ್ಷಿಣ ನಮಸ್ಕಾರಂ ಸಮರ್ಪಯಾಮಿ, ಸರ್ವೋಪಚಾರಪೂಜಾಂ ಸಮರ್ಪಯಾಮಿ॥ ಯಸ್ಯಸ್ಮೃತ್ಯಾಚ ನಾಮೋಕ್ತ್ಯಾತಪಃ ಪೂಜಾಕ್ರಿಯಾದಿಷು। ನ್ಯೂನಂ ಸಂಪೂರ್ಣತಾಂ ಯಾತಿಸದ್ಯೋವಂದೇ ತಮಚ್ಯುತಂ। ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಗಣಾಧಿಪ॥ ಯತ್ಪೂಜಿತಂ ಮಯಾದೇವ ಪರಿಪೂರ್ಣಂ ತದಸ್ತುತೇ॥ ಅನಯಾ ಷೋಡಶೋಪಚಾರ ಪೂಜಯಾ ಭಗವಾನ್ ಸರ್ವಾತ್ಮಕಃ ಶ್ರೀ ಮಹಾಗಣಾಧಿಪತಿಃ ಸುಪ್ರಸನ್ನೋ ವರದೋಭವತು (ಎಂದು ಹೇಳಿ ಹೂವು ಅಕ್ಷತೆಯನ್ನು ತೆಗೆದುಕೊಂಡು ನೀರು ಹಾಕಿ ಬಿಡತಕ್ಕದ್ದು).

**ಗಣಾಧಿಪತಿ ಪ್ರಸಾದಂ ಶಿರಸಾಗೃಹ್ಣಾಮಿ (ಎಂದು ಹೂವು ಅಕ್ಷತೆಯನ್ನು ಶಿರದಲ್ಲಿ ಧರಿಸತಕ್ಕದ್ದು).**

## ಶ್ರೀ ಮಂಗಳಗೌರೀ ಪೂಜಾವಿಧಿಃ

(ಪುಷ್ಪಾಕ್ಷತಾ ಗೃಹೀತ್ವಾ) ಅಥಧ್ಯಾನಂ॥ ನೀಲಲೋಹಿತತಾಟಂಕ ಹರಿದ್ರಾಕುಂಕುಮಾದಿಷು॥ ತಾಂಬೂಲಪುಷ್ಪಗಂಧೇಷು । ದರ್ಪಣೆಕಚ ಶೋಧಕ॥ ಸಿಂಧೂರೈ ಕಜ್ಜಲೈರ್ವಸ್ತ್ರೇಕಂಕಸೌದೌಫಲಾದಿಷು ॥ ಜ್ವಾಲಾಯಾಂ ಘೃತದೀಪಸ್ಯ ಮಂಗಳದ್ರವ್ಯಭಾಜನೆ। ಶುಭಕಾರ್ಯೇಷು ಸಂತೋಷ ॥ ನಿತ್ಯಲೀಲಾವಿಲಾಸಿನೀಂ॥ ಸಂಪೂರ್ಣಚಂದ್ರವದನಾಂ॥ ಸರ್ವಜ್ಞಾಂ ಶಿವ ಸುಂದರೀ । ವರಾಭಯಕರಾಂ–ಭೋಜಾಂ ಪಾಶಾಂಕುಶಕರೋಜ್ಜ್ವಲಾಂ ಸಾವಿತ್ರೀಂ ಸದಯಾ ದೇವೀ ॥ ಸರ್ವಮಂಗಳ ದೇವತಾಂ । ಬಾಲಾಂ ನವೋಢ್ಯಾಂ ಸಂಪೂಜ್ಯಾಂ ಮಂಗಳದ್ರವ್ಯ– ವಾಸಿನೀಂ । ಸರ್ವಾಲಂಕಾರ ಸಂಪೂರ್ಣಾಂ ಭಾವಯೇತ್ಸರ್ವಮಂಗಳಾಂ ॥ ಐಂ । ಹ್ರೀಂ । ಕ್ಲೀಂ । ನಮಸ್ಸರ್ವಮಂಗಳಾಯೈ ಮಂಗಳಗೌರ್ಯೈ ನಮಃ ಧ್ಯಾನಂ ॥ ಅತ್ರಾಗಚ್ಛ ಮಹಾದೇವಿ ಸರ್ವಲೋಕ ಸುಖಪ್ರದೆ । ಯಾವದ್ವ್ರತ ಮಹಂಕುರ್ವೇ । ಪುತ್ರ ಪೌತ್ರಾಭಿವೃದ್ಧಯೇ ॥

ಪ್ರಾಣಪ್ರತಿಷ್ಠೆ : ಅಸ್ಯ ಶ್ರೀಮಂಗಳಗೌರೀ ದೇವತಾಂ ಉದ್ದಿಶ್ಯ ಕರ್ತವ್ಯೇ ಶ್ರೀಮಂಗಳಗೌರೀ ದೇವತಾ ಪ್ರಾಣಪ್ರತಿಷ್ಠಾಪನ ಮಹಾಮಂತ್ರಸ್ಯ ಬ್ರಹ್ಮ ವಿಷ್ಣು ಮಹೇಶ್ವರಾ ಋಷಯಃ । ಋಗ್ಯಜುಸಾಮಾಥರ್ವಾಣಿ ಛಂದಾಸಿ ಪ್ರಾಣಶಕ್ತಿಃ ಪರದೇವತಾ। ಹ್ರಾಂ ಬೀಜಂ, ಹ್ರೀಂ, ಶಕ್ತಿಃ, ಹ್ರೂಂ ಕೀಲಕಂ ಮಮ ಇಷ್ಟಕಾಮ್ಯಾರ್ಥ ಸಿದ್ಧ್ಯರ್ಥೇ ಶ್ರೀ ಮಂಗಳಗೌರೀ ಪ್ರಾಣಪ್ರತಿಷ್ಠಾ ಜಪೇ ವಿನಿಯೋಗಃ॥

| ಕರನ್ಯಾಸ | ಅಂಗನ್ಯಾಸ |
| --- | --- |
| ಹ್ರಾಂ ಅಂಗುಷ್ಠಾಭ್ಯಾಂನಮಃ | ಹ್ರಾಂ ಹೃದಯಾಯನಮಃ |
| ಹ್ರೀಂ ತರ್ಜನೀಭ್ಯಾಂನಮಃ | ಹ್ರೀಂ ಶಿರಸೇ ಸ್ವಾಹಾ |
| ಹ್ರೂಂ ಮಧ್ಯಮಾಭ್ಯಾಂನಮಃ | ಹ್ರೂಂ ಶಿಖಾಯೈವೌಷಟ್ |
| ಹ್ರೇಂ ಅನಾಮಿಕಾಭ್ಯಾಂನಮಃ | ಹ್ರೇಂ ಕವಚಾಯ ನಮಃ |
| ಹ್ರೌಂ ಕನಿಷ್ಠಿಕಾಭ್ಯಾಂ ನಮಃ | ಹ್ರೌಂ ನೇತ್ರತ್ರಯಾಯವೌಷಟ್ |
| ಹ್ರಃ ಕರತಲಕರಪೃಷ್ಠಾಭ್ಯಾಂ ನಮಃ | ಹ್ರಃ ಅಸ್ತ್ರಾಯಫಟ್ |
| | ಭೂರ್ಭುವಸ್ಸುವರೋಮಿತಿ ದಿಗ್ಬಂಧಃ |

## ಧ್ಯಾನಂ

ಶ್ಲೋಕ|| ರಕ್ತಾಂಬೋಧಿಸ್ಥಪೋತೋಲ್ಲಸದರುಣ ಸರೋಜಾಧಿರೂಢಾಂ ಕರಾಬ್ಜೈಃ ಪಾಶಂ ಕೋದಂಡಮಿಕ್ಷೂದ್ಭವ ಮಣಿಗಣಮಪ್ಯಂಕುಶಂ ಪಂಚಬಾಣಾನ್ || ಭಿಭ್ರಾಣಾಸೃಕ್ಕಪಾಲಂ ತ್ರಿನಯನಲಸಿತಾ ಪೀನವಕ್ಷೋರುಹಾಢ್ಯಾ। ದೇವೀ ಬಾಲಾರ್ಕವರ್ಣಾ ಭವತು ಸುಖಕರೀ ಪ್ರಾಣಶಕ್ತಿಃ ಪರಾನಃ||

ಹ್ರಾಂ, ಹ್ರೀಂ, ಕ್ರೋಂ, ಯ, ರ, ಲ, ವ, ಶ, ಷ, ಸ, ಹೋಂ, ಓಂ ಮಂಗಳಗೌರೀ ಪ್ರಾಣಃ ಮಮ ಪ್ರಾಣಃ ಶ್ರೀ ಮಂಗಳಗೌರ್ಯಾ ಜೀವಃ ಮಮ ಜೀವ, ವಾಂಗ್ಮನಃ ಶ್ರೋತ್ರ ಜಿಹ್ವಾಘ್ರಾಣೈಃ ಉಚ್ಛ್ವಾಸ್ವರೂಪೇಣ ಬಹಿರಾಗತ್ಯ ಅಸ್ಮಿನ್ ಬಿಂಬೇ ಅಸ್ಮಿನ್ ಕಲಶೇ (ಅಸ್ಯಾಂ ಪ್ರತಿಮಾಯಾಂ) ಸುಖೇನ ಚಿರಂತಿಷ್ಠಂತು ಸ್ವಾಹಾ||

ಮಂತ್ರ : ಅಸುನೀತೇ ಪುನರಸ್ಮಾಸುಚಕ್ಷುಃ ಪುನಃ ಪ್ರಾಣಮಿಹೀನೋ ದೇಹಿ ಭೋಗಂ ಜ್ಯೋಕ್ಪಶ್ಯೇಮಸೂರ್ಯ ಮುಚ್ಚರಂತಂ ಮನುಮತೇ ಮೃಡಯಾನ ಸ್ವಸ್ತಿ। ಅಮೃತಂ ವೈ ಪ್ರಾಣಾ ಅಮೃತಮಾಪಃ ಪ್ರಾಣಾನೇವ ಯಥಾಸ್ಥಾನ ಮುಪಹ್ವಯೇತ್||

ಆವಾಹಿತಾಭವ, ಸ್ಥಾಪಿತಾಭವ, ಸುಪ್ರಸನ್ನಾಭವ, ವರದಾಭವ, ಅವಕುಂಠಿತಾಭವ, ಮಮ ಸರ್ವಾಭಿಷ್ಟಫಲಪ್ರದಾಭವ||

ಮಂತ್ರ : ಆತ್ವಾಹವಂತು ಹರಯಸ್ಸಚೇತಸ್ಸ್ವೈ ತೈರಶ್ವೈಸ್ಸಹಕೇತುಮದ್ಭಿಃ। ವಾತಾಜವೈರ್ಬಲವದ್ಭಿರ್ಮನೋಜವೈರಾಯಾಹಿಶೀಘ್ರಂ ಮಮ ಹವ್ಯಾಯಶರ್ವೋಂ||

(ಈ ಮಂತ್ರವನ್ನು ಹೇಳಿ ಹೂವು ಅಕ್ಷತೆಯನ್ನು ಶ್ರೀ ಮಂಗಳಗೌರೀ ಪ್ರತಿಮೆಯ ಮೇಲಿಟ್ಟು ಕರವನ್ನು ಬಿಂಬದ ಮೇಲಿಡಬೇಕು) ಯತ್ಕಿಂಚಿನ್ನಿವೇದನಂ ಕುರ್ಯಾತ್||

||ಇತಿ ಪ್ರಾಣಪ್ರತಿಷ್ಠಾಪನ ವಿಧಿಃ ಸಂಪೂರ್ಣಂ||

ಆವಾಹನಂ : ರೌಪ್ಯೇಣ ಚಾಸನಂ ದಿವ್ಯಂ । ರತ್ನಮಾಣಿಕ್ಯ ಶೋಭಿತಂ || ಮಾಯಾಕೃತಂ ಗೃಹಾಣತ್ವಾಂ । ಗೌರೀ ಕೌಮಾರಿವಲ್ಲಭೆ || ||ಆಸನಂ||

ಗಂಧಪುಷ್ಪಾಕ್ಷತೈರ್ಯುಕ್ತಂ । ಪಾದ್ಯಂ ಸಂಪಾದಿತಂ ಮಯಾ।। ತ್ವಂ ಗೃಹಾಣ ದಯಾಸಿಂಧೋ ।। ಗೌರೀ ಮಂಗಳದೇವತಾ ।।ಅರ್ಘ್ಯಂ।। ಕೌಮಾರವಲ್ಲಭೇದೇವಿ । ಕುರ್ವಾಚಮನಮಂಬಿಕೆ ।। ನಿರಂತಮಹಂವದೇ ಚರಣೌತವಪಾರ್ವತಿ।। ಆಚಮನಂ ಪಯೋದದಿಘೃತಂಚೈವ ಮಧುಶರ್ಕರಯಾಸವುಂ । ಪಂಚಾಮೃತೇನ ಸ್ನಪನಂಕಾರಯೇತ್ವಾ ಶಿವಪ್ರಿಯೇ।। ಪಂಚಾಮೃತಸ್ನಾನಂ । ಜಾಹ್ನವೀತೋಯ–ಮಾನೀತಂ ।। ಶುಭಂ ಕರ್ಪೂರ ಸಂಯುತಂ ।। ಸ್ನಾಪಯಾಮಿ ಸುರಶ್ರೇಷ್ಠೇ ।। ತ್ವಾಂ ಪುತ್ರಾದಿಫಲಪ್ರದಂ।। ಶುದ್ಧೋದಕಸ್ನಾನಂ।। ವಸ್ತ್ರಂಚಸೋಮದೈವತ್ಯಂ ಲಜ್ಜಾಯಾಸ್ತು ವಿವಾರಣೇಂ ।। ಮಯಾಸಮರ್ಪಿತಂ ಭಕ್ತ್ಯಾ ।। ಗೃಹಾಣಪರಮೇಶ್ವರಿ ।। ವಸ್ತ್ರಂ ।। ಕಂಚುಕೀಮುಪವಸ್ತ್ರಂ ಚ । ನಾನಾರತ್ನೈಸಮನ್ವಿತಂ ।। ಗೃಹಾಣತ್ವಂ ಮಯಾದತ್ತಂ । ಜಗದೀಶ್ವರಿ ಪಾರ್ವತಿ ।। ಕಂಚುಕಂ ।। ಸರ್ವಮಂಗಳ ಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ ।। ಶರಣ್ಯೇತ್ರಿಯಂಬಕೇ ದೇವೀ । ನಾರಾಯಣಿ ನಮೋಸ್ತುತೇ । ಹರಿದ್ರಾ ಕುಂಕುಮಚೂರ್ಣಂ ।। ಕುಂಕುಮಾಗರುಕರ್ಪೂರ । ಕಸ್ತೂರೀ ಚಂದನಾದಿಕಂ ವಿಲೇಪನಂ ಮಹಾದೇವಿ ।। ಗಂಧಂ ಸ್ವೀಕುರು ಶಾಂಕರೀ ।। ಗಂಧಂ ।। ಸಿಂಚಿತಾಕುಂಕುಮಾಘೇನ ಹರಿದ್ರಾತ್ವಾದ್ರತಾಕ್ಷತಾಃ ।। ಪರಾಲಂಕರಣಾರ್ಥಾಯ ।। ಪ್ರದತ್ತಂ ಸರ್ವಮಂಗಳೇ।। ಅಕ್ಷತಾನ್ ಕಿರೀಟಹಾರ ಕೇಯೂರ ಕಂಕಣಾದಿ ವಿಭೂಷಣೈಃ ಅಲಂಕಾರೋಮಿತ್ವಾಂ ಭಕ್ತ್ಯಾ । ಸರ್ವಾಲಂಕಾರಕಾರಿಣಿ ।। ಆಭರಣಾನಿ ।। ಮಾಲ್ಯಾನೀ ಸುಗಂಧಿನೀಮಾಲಿತ್ಯಾದಿ ಪುಷ್ಪಾಣಿ ಪ್ರತಿಗೃಹ್ಯತಾಂ ।।ಪುಷ್ಪಾಣಿ।।

## ಅಥಾಂಗ ಪೂಜಾ

| | | | |
|---|---|---|---|
| ಉಮಾಯೈ ನಮಃ | ಪಾದೌ ಪೂಜಯಾಮಿ | | (ಪಾದಗಳು) |
| ಗೌರ್ಯೈ ನಮಃ | ಜಂಘೇ | '' | (ಹಿಂಭಾಗ) |
| ಪಾರ್ವತ್ಯೈ ನಮಃ | ಜಾನುನೀ | '' | (ಮೊಣಕಾಲು) |
| ಜಗನ್ಮಾತ್ರೇ ನಮಃ | ಊರುನ್ | '' | (ತೊಡೆ) |
| ಜಗತ್ಪ್ರತಿಷ್ಠಾಯೈ ನಮಃ | ಕಟಿಂ | '' | (ನಡು) |
| ಮೂಲಪ್ರಕೃತ್ಯೈ ನಮಃ | ನಾಭಿಂ | '' | (ಹೊಕ್ಕಳು) |
| ಅಂಬಿಕಾಯೈ ನಮಃ | ಉದರಂ | '' | (ಹೊಟ್ಟೆ) |
| ಅನ್ನಪೂರ್ಣಾಯೈ ನಮಃ | ಸ್ತನೌ | '' | (ಸ್ತನಗಳು) |
| ವಸುಂದರ್ಯೈ ನಮಃ | ವಕ್ಷೌ | '' | (ವಕ್ಷ) |
| ಮಹಾಬಲಾಯೈ ನಮಃ | ಬಾಹೂನ್ | '' | (ತೋಳು) |
| ವರಪ್ರದಾಯೈ ನಮಃ | ಹಸ್ತಾನ್ | '' | (ಕೈಗಳು) |
| ಕಂಬುಕಂಠ್ಯೈ ನಮಃ | ಕಂಠಂ | '' | (ಕತ್ತು) |

| | | | |
|---|---|---|---|
| ಬ್ರಹ್ಮವಿದ್ಯಾಯೈ ನಮಃ | ಜಿಹ್ವಾಂ | " | (ನಾಲಿಗೆ) |
| ಶಾಂಕರ್ಯೈ ನಮಃ | ಮುಖಂ | " | (ಮುಖ) |
| ಶಿವಾಯೈ ನಮಃ | ನೇತ್ರೇ | " | (ಕಣ್ಣುಗಳು) |
| ರುದ್ರಾಣ್ಯೈ ನಮಃ | ಕರ್ಣೌ | " | (ಕಿವಿಗಳು) |
| ಸರ್ವಮಂಗಳಾಯೈ ನಮಃ | ಲಲಾಟಂ | " | (ಹಣೆ) |
| ಸರ್ವೈಶ್ವರ್ಯೈ ನಮಃ | ಶಿರಃ | " | (ತಲೆ) |
| ಮಂಗಳಗೌರ್ಯೈ ನಮಃ | ಸರ್ವಾಂಗಾನಿ | " | (ಎಲ್ಲಾ ಅಂಗಗಳು) |

॥ಅಥಾಂಗಪೂಜಾಂ ಸಮರ್ಪಯಾಮಿ॥

## ಲಲಿತಾ ಅಷ್ಟೋತ್ತರ ಶತನಾಮಾವಳಿಃ

### ಓಂ-ಐಂ-ಹ್ರೀಂ-ಶ್ರೀಂ

ಓಂ ರಜತಾಚಲ ಶೃಂಗಾಗ್ರಮಧ್ಯಸ್ಥಾಯೈ ನಮೋ ನಮಃ
ಓಂ ಹಿಮಾಚಲಮಹಾವಂಶಪಾವನಾಯೈ ನಮೋ ನಮಃ
ಓಂ ಶಂಕರಾರ್ಧಾಂಗಸೌಂದರ್ಯ ಶರೀರಾಯೈ ನಮೋ ನಮಃ
ಓಂ ಲಸನ್ಮರಕತಸ್ವಚ್ಛವಿಗ್ರಹಾಯೈ ನಮೋ ನಮಃ
ಓಂ ಮಹಾತಿಶಯ ಸೌಂದರ್ಯ ಲಾವಣ್ಯಾಯೈ ನಮೋ ನಮಃ
ಓಂ ಶಶಾಂಕಶೇಖರಪ್ರಾಣವಲ್ಲಭಾಯೈ ನಮೋ ನಮಃ
ಓಂ ಸದಾಪಂಚದಶಾತ್ಮೈಕ್ಯಸ್ವರೂಪಾಯೈ ನಮೋ ನಮಃ
ಓಂ ವಜ್ರ ಮಾಣಿಕ್ಯ ಕಟಕಕಿರೀಟಾಯೈ ನಮೋ ನಮಃ
ಓಂ ಕಸ್ತೂರೀತಿಲಕೋಲ್ಲಾಸನಿಟಿಲಾಯೈ ನಮೋ ನಮಃ
ಓಂ ಭಸ್ಮರೇಖಾಂಕಿತಲಸನ್ಮಸ್ತಕಾಯೈ ನಮೋ ನಮಃ 10
ಓಂ ವಿಕಚಾಂಭೋರುಹದಳಲೋಚನಾಯೈ ನಮೋ ನಮಃ
ಓಂ ಶರಚ್ಚಾಂಪೇಯ ಪುಷ್ಪಾಭನಾಸಿಕಾಯೈ ನಮೋ ನಮಃ
ಓಂ ಲಸತ್ಕಾಂಚನತಾಟಂಕಯುಗಳಾಯೈ ನಮೋ ನಮಃ
ಓಂ ಮಣಿದರ್ಪಣಸಂಕಾಶಕಪೋಲಾಯೈ ನಮೋ ನಮಃ
ಓಂ ತಾಂಬೂಲಪೂರಿತಸ್ಮೇರವದನಾಯೈ ನಮೋ ನಮಃ
ಓಂ ಸುಪಕ್ವದಾಡಿಮೀಬೀಜರದನಾಯೈ ನಮೋ ನಮಃ
ಓಂ ಸ್ಥೂಲಮುಕ್ತಾಫಲೋದಾರಸುಹಾರಾಯೈ ನಮೋ ನಮಃ
ಓಂ ಗಿರೀಶ ಬದ್ಧ ಮಾಂಗಲ್ಯ ಮಂಗಳಾಯೈ ನಮೋ ನಮಃ
ಓಂ ಪದ್ಮ ಪಾಶಾಂಕುಶಲಸತ್ಕರಾಬ್ಜಾಯೈ ನಮೋ ನಮಃ 20
ಓಂ ಪದ್ಮಕೈರವ ಮಂದಾರಸುಮಾಲಿನ್ಯೈ ನಮೋ ನಮಃ

ಓಂ ಸುವರ್ಣಕುಂಬಯುಗ್ಮಾಭಸುಕುಚಾಯೈ ನಮೋ ನಮಃ
ಓಂ ರಮಣೀಯಚತುರ್ಬಾಹುಸಂಯುಕ್ತಾಯೈ ನಮೋ ನಮಃ
ಓಂ ಕನಕಾಂಗದಕೇಯೂರಭೂಷಿತಾಯೈ ನಮೋ ನಮಃ
ಓಂ ಬೃಹತ್ಸೌವರ್ಣಸೌಂದರ್ಯವಸನಾಯೈ ನಮೋ ನಮಃ
ಓಂ ಬೃಹನ್ನಿತಂಬವಿಲಸಜ್ಜಘನಾಯೈ ನಮೋ ನಮಃ
ಓಂ ಸೌಭಾಗ್ಯಜಾತಶೃಂಗಾರಮಧ್ಯಮಾಯೈ ನಮೋ ನಮಃ
ಓಂ ದಿವ್ಯಭೂಷಣ ಸಂದೋಹರಂಜಿತಾಯೈ ನಮೋ ನಮಃ
ಓಂ ಪಾರಿಜಾತಗುಣಾಧಿಕ್ಯ ಪದಾಬ್ಜಾಯೈ ನಮೋ ನಮಃ
ಓಂ ಸುಪದ್ಮರಾಗಸಂಕಾಶ ಚರಣಾಯೈ ನಮೋ ನಮಃ 30
ಓಂ ಕಾಮಕೋಟಿ ಮಹಾಪದ್ಮಪೀಠಸ್ಥಾಯೈ ನಮೋ ನಮಃ
ಓಂ ಶ್ರೀಕಂಠನೇತ್ರಕುಮುದ ಚಂದ್ರಿಕಾಯೈ ನಮೋ ನಮಃ
ಓಂ ಸಚಾಮರರಮಾವಾಣೀವೀಜಿತಾಯೈ ನಮೋ ನಮಃ
ಓಂ ಭಕ್ತರಕ್ಷಣದಾಕ್ಷಿಣ್ಯ ಕಟಾಕ್ಷಾಯೈ ನಮೋ ನಮಃ
ಓಂ ಭೂತೇಶಾಲಿಂಗನೋದ್ಭೂತಪುಳಕಾಂಗ್ಯೈ ನಮೋ ನಮಃ
ಓಂ ಅನಂಗಜನಕಾಪಾಂಗವೀಕ್ಷಣಾಯೈ ನಮೋ ನಮಃ
ಓಂ ಬ್ರಹ್ಮೋಪೇಂದ್ರ ಶಿರೋರತ್ನ ರಂಜಿತಾಯೈ ನಮೋ ನಮಃ
ಓಂ ಶಚೀಮುಖ್ಯಾಮರವಧೂಸೇವಿತಾಯೈ ನಮೋ ನಮಃ
ಓಂ ಲೀಲಾಕಲ್ಪಿತಬ್ರಹ್ಮಾಂಡಮಂಡಲಾಯೈ ನಮೋ ನಮಃ
ಓಂ ಅಮೃತಾದಿಮಹಾಶಕ್ತಿ ಸಂವೃತಾಯೈ ನಮೋ ನಮಃ 40
ಓಂ ಏಕಾತಪತ್ರ ಸಾಮ್ರಾಜ್ಯದಾಯಿಕಾಯೈ ನಮೋ ನಮಃ
ಓಂ ಸನಕಾದಿಸಮಾರಾಧ್ಯಪಾದುಕಾಯೈ ನಮೋ ನಮಃ
ಓಂ ದೇವರ್ಷಿಭಿಸ್ತೂಯಮಾನವೈಭವಾಯೈ ನಮೋ ನಮಃ
ಓಂ ಕಲಶೋದ್ಭವ ದುರ್ವಾಸಃ ಪೂಜಿತಾಯೈ ನಮೋ ನಮಃ
ಓಂ ಮತ್ತೇಭವಕ್ತ್ರಷಡ್ವಕ್ತ್ರವತ್ಸಲಾಯೈ ನಮೋ ನಮಃ
ಓಂ ಚಕ್ರರಾಜಮಹಾಯಂತ್ರ ಮಧ್ಯವರ್ತಿನ್ಯೈ ನಮೋ ನಮಃ
ಓಂ ಚಿದಗ್ನಿಕುಂಡ ಸಂಭೂತಸುದೇಹಾಯೈ ನಮೋ ನಮಃ
ಓಂ ಶಶಾಂಕಖಂಡಸಂಯುಕ್ತ ಮುಕುಟಾಯೈ ನಮೋ ನಮಃ
ಓಂ ಮತ್ತಹಂಸವಧೂಮಂದಗಮನಾಯೈ ನಮೋ ನಮಃ
ಓಂ ವಂದಾರುಜನಸಂದೋಹವಂದಿತಾಯೈ ನಮೋ ನಮಃ 50
ಓಂ ಅಂತರ್ಮುಖಜನಾನಂದಫಲದಾಯೈ ನಮೋ ನಮಃ
ಓಂ ಪತಿವ್ರತಾಂಗನಾಭೀಷ್ಟಫಲದಾಯೈ ನಮೋ ನಮಃ
ಓಂ ಅವ್ಯಾಜಕರುಣಾಪೂರಿತಾಯೈ ನಮೋ ನಮಃ

ಓಂ ನಿತಾಂತಸಚ್ಚಿದಾನಂದಸಂಯುಕ್ತಾಯೈ ನಮೋ ನಮಃ
ಓಂ ಸಹಸ್ರಸೂರ್ಯಸಂಯುಕ್ತ ಪ್ರಕಾಶಾಯೈ ನಮೋ ನಮಃ
ಓಂ ರತ್ನ ಚಿಂತಾಮಣಿಗೃಹಮಧ್ಯಸ್ಥಾಯೈ ನಮೋ ನಮಃ
ಓಂ ಹಾನಿವೃದ್ಧಿ ಗುಣಾಧಿಕ್ಯರಹಿತಾಯೈ ನಮೋ ನಮಃ
ಓಂ ಮಹಾಪದ್ಮಾಟವೀಮಧ್ಯ ನಿವಾಸಾಯೈ ನಮೋ ನಮಃ
ಓಂ ಜಾಗ್ರತ್ಸ್ವಪ್ನಸುಷುಪ್ತೀನಾಂ ಸಾಕ್ಷಿಭೂತ್ಯೈ ನಮೋ ನಮಃ
ಓಂ ಮಹಾಪಾಪೌಘಪಾಪಾನಾಂ ವಿನಾಶಿನ್ಯೈ ನಮೋ ನಮಃ 60
ಓಂ ದುಷ್ಟಭೀತಿ ಮಹಾಭೀತಿ ಭಂಜನಾಯೈ ನಮೋ ನಮಃ
ಓಂ ಸಮಸ್ತದೇವದನುಜ ಪ್ರೇರಕಾಯೈ ನಮೋ ನಮಃ
ಓಂ ಸಮಸ್ತ ಹೃದಯಾಂಭೋಜನಿಲಯಾಯೈ ನಮೋ ನಮಃ
ಓಂ ಅನಾಹತಮಹಾಪದ್ಮ ಮಂದಿರಾಯೈ ನಮೋ ನಮಃ
ಓಂ ಸಹಸ್ರಾರಸರೋಜಾತವಾಸಿತಾಯೈ ನಮೋ ನಮಃ
ಓಂ ಪುನರಾವೃತ್ತಿ ರಹಿತಪುರಸ್ಥಾಯೈ ನಮೋ ನಮಃ
ಓಂ ವಾಣೀಗಾಯತ್ರೀ ಸಾವಿತ್ರೀಸನ್ನುತಾಯೈ ನಮೋ ನಮಃ
ಓಂ ರಮಾಭೂಮಿಸುತಾರಾಧ್ಯ ಪದಾಬ್ಜಾಯೈ ನಮೋ ನಮಃ
ಓಂ ಲೋಪಾಮುದ್ರಾರ್ಚಿತ ಶ್ರೀಮಚ್ಚರಣಾಯೈ ನಮೋ ನಮಃ
ಓಂ ಸಹಸ್ರಾರತಿಸೌಂದರ್ಯಶರೀರಾಯೈ ನಮೋ ನಮಃ 70
ಓಂ ಭಾವನಾಮಾತ್ರ ಸಂತುಷ್ಟಹೃದಯಾಯೈ ನಮೋ ನಮಃ
ಓಂ ಸತ್ಯಸಂಪೂರ್ಣ ವಿಜ್ಞಾನ ಸಿದ್ಧಿದಾಯೈ ನಮೋ ನಮಃ
ಓಂ ಶ್ರೀಲೋಚನಕೃತೋಲ್ಲಾಸಫಲದಾಯೈ ನಮೋ ನಮಃ
ಓಂ ಶ್ರೀ ಸುದಾಬ್ಧಿ ಮಣಿದ್ವೀಪಮಧ್ಯಗಾಯೈ ನಮೋ ನಮಃ
ಓಂ ದಕ್ಷಾಧ್ವರವಿನಿರ್ಭೇದಸಾಧನಾಯೈ ನಮೋ ನಮಃ
ಓಂ ಶ್ರೀನಾಥಸೋದರೀಭೂತಶೋಭಿತಾಯೈ ನಮೋ ನಮಃ
ಓಂ ಚಂದ್ರಶೇಖರಭಕ್ತಾರ್ತಿಭಂಜನಾಯೈ ನಮೋ ನಮಃ
ಓಂ ಸರ್ವೋಪಾಧಿವಿನಿರ್ಮುಕ್ತಚೈತನ್ಯಾಯೈ ನಮೋ ನಮಃ
ಓಂ ನಾಮಪಾರಾಯಣಾಭೀಷ್ಟಫಲದಾಯೈ ನಮೋ ನಮಃ
ಓಂ ಸೃಷ್ಟಿಸ್ಥಿತಿತಿರೋಧಾನಸಂಕಲ್ಪಾಯೈ ನಮೋ ನಮಃ 80
ಓಂ ಶ್ರೀಶೋಡಶಾಕ್ಷರೀಮಂತ್ರಮಧ್ಯಗಾಯೈ ನಮೋ ನಮಃ
ಓಂ ಅನಾದ್ಯಂತಸ್ವಯಂಭೂತದಿವ್ಯಮೂರ್ತ್ಯೈ ನಮೋ ನಮಃ
ಓಂ ಭಕ್ತಹಂಸಪರೀಮುಖ್ಯವಿಯೋಗಾಯೈ ನಮೋ ನಮಃ
ಓಂ ಮಾತೃಮಂಡಲಸಂಯುಕ್ತಲಲಿತಾಯೈ ನಮೋ ನಮಃ
ಓಂ ಭಂಡದೈತ್ಯಮಹಾಸತ್ತ್ವನಾಶನಾಯೈ ನಮೋ ನಮಃ




ಓಂ ಕ್ರೂರಭಂಡಶಿರಚ್ಛೇದನಿಪುಣಾಯ್ಕೆ ನಮೋ ನಮಃ
ಓಂ ಧಾತ್ರಚ್ಯುತಸುರಾಧೀಶಸುಖದಾಯ್ಕೆ ನಮೋ ನಮಃ
ಓಂ ಚಂಡಮುಂಡನಿಶುಂಭಾದಿಖಂಡನಾಯ್ಕೆ ನಮೋ ನಮಃ
ಓಂ ರಕ್ತಾಕ್ಷರಕ್ತಜಿಹ್ವಾದಿಶಿಕ್ಷಣಾಯ್ಕೆ ನಮೋ ನಮಃ
ಓಂ ಮಹಿಷಾಸುರದೋರ್ವೀರ್ಯನಿಗ್ರಹಾಯ್ಕೆ ನಮೋ ನಮಃ 90
ಓಂ ಅಭ್ರಕೇಶಮಹೋತ್ಸಾಹಕಾರಣಾಯ್ಕೆ ನಮೋ ನಮಃ
ಓಂ ಮಹೇಶಯುಕ್ತನಟನತತ್ಪರಾಯ್ಕೆ ನಮೋ ನಮಃ
ಓಂ ನಿಜಭರ್ತೃಮುಖಾಂಭೋಜಚಿಂತನಾಯ್ಕೆ ನಮೋ ನಮಃ
ಓಂ ವೃಷಭಧ್ವಜವಿಜ್ಞಾನಭಾವನಾಯ್ಕೆ ನಮೋ ನಮಃ
ಓಂ ಜನ್ಮ ಮೃತ್ಯುಜರಾರೋಗಭಂಜನಾಯ್ಕೆ ನಮೋ ನಮಃ
ಓಂ ವಿಧೇಯುಮುಕ್ತ ವಿಜ್ಞಾನಸಿದ್ಧಿದಾಯ್ಕೆ ನಮೋ ನಮಃ
ಓಂ ಕಾಮಕ್ರೋಧಾದಿಷಡ್ವರ್ಗನಾಶನಾಯ್ಕೆ ನಮೋ ನಮಃ
ಓಂ ರಾಜರಾಜಾರ್ಚಿತಪದಸರೋಜಾಯ್ಕೆ ನಮೋ ನಮಃ
ಓಂ ಸರ್ವವೇದಾಂತಸಂಸಿದ್ಧ ಸುತತ್ತ್ವಾಯ್ಕೆ ನಮೋ ನಮಃ
ಓಂ ಶ್ರೀ ವೀರಭಕ್ತವಿಜ್ಞಾನನಿಧಾನಾಯ್ಕೆ ನಮೋ ನಮಃ 100
ಓಂ ಅಶೇಷದುಷ್ಟದನುಜಸೂದನಾಯ್ಕೆ ನಮೋ ನಮಃ
ಓಂ ಸಾಕಾಚ್ಛ್ರೀದಕ್ಷಿಣಾಮೂರ್ತಿಮನೋಜ್ಞಾಯ್ಕೆ ನಮೋ ನಮಃ
ಓಂ ಹಯಮೇಧಾಗ್ರ ಸಂಪೂಜ್ಯ ಮಹಿಮಾಯ್ಕೆ ನಮೋ ನಮಃ
ಓಂ ದಕ್ಷಪ್ರಜಾಪತಿಸುತವೇಷಾಢ್ಯಾಯ ನಮೋ ನಮಃ
ಓಂ ಸುಮಬಾಣೇಕ್ಷು ಕೋದಂಡಮಂಡಿತಾಯ್ಕೆ ನಮೋ ನಮಃ
ಓಂ ನಿತ್ಯಯೌವನಮಾಂಗಲ್ಯ ಮಂಗಳಾಯ್ಕೆ ನಮೋ ನಮಃ
ಓಂ ಮಹಾದೇವಸಮಾಯುಕ್ತ ಶರೀರಾಯ್ಕೆ ನಮೋ ನಮಃ
ಓಂ ಮಹಾದೇವರತೌತ್ಸುಕ್ಯ ಮಹಾದೇವ್ಯೈ ನಮೋ ನಮಃ 108

॥ ಶ್ರೀ ಲಲಿತಾಷ್ಟೋತ್ತರ ಶತನಾಮಾವಳಿಃ ಸಂಪೂರ್ಣಂ ॥

## ಶ್ರೀ ಗೌರೀ ಅಷ್ಟೋತ್ತರ ಶತನಾಮಾವಳಿಃ

ಓಂ ಶಿವಾಯ್ಕೆ ನಮಃ
ಶ್ರೀ ಮಹಾವಿದ್ಯಾಯ್ಕೆ ನಮಃ
ಶ್ರೀಮನ್ಮಕುಟಮಂಡಿತಾಯ್ಕೆ ನಮಃ
ಕಲ್ಯಾಣ್ಯೈ ನಮಃ
ಕಮಲಾರಾಧ್ಯಾಯ್ಕೆ ನಮಃ
ಕರುಣಾರಸಸಾಗರಾಯ್ಕೆ ನಮಃ
ಕಲಿಪ್ರಭೃತಿಸಂಸೇವ್ಯಾಯ್ಕೆ ನಮಃ
ಕಮಲಾಸನಸಂಸ್ತುತಾಯ್ಕೆ ನಮಃ
ಅಂಬಿಕಾಯ್ಕೆ ನಮಃ 10
ಅನೇಕಸೌಭಾಗ್ಯದಾತ್ರ್ಯೈ ನಮಃ
ಆನಂದವಿಗ್ರಹಾಯ್ಕೆ ನಮಃ
ಈಷಣತ್ರಯನಿರ್ಮುಕ್ತಾಯ್ಕೆ ನಮಃ

ಹೃತ್ಸರೋರುಹವಾಸಿನ್ಯೈ ನಮಃ
ಆದ್ಯಂತರಹಿತಾಯೈ ನಮಃ
ಅನೇಕಕೋಟಿಭಾಸ್ಕರವಲ್ಲಭಾಯೈ ನಮಃ
ಈಶ್ವರೋತ್ಸಂಗನಿಲಯಾಯೈ ನಮಃ
ಈತಿಬಾಧಾವಿನಾಶಿನ್ಯೈ ನಮಃ
ಇಂದಿರಾಪತಿಸಂಸೇವ್ಯಾಯೈ ನಮಃ
ಈಶ್ವರಾರ್ಧಶರೀರಿಣ್ಯೈ ನಮಃ
ಲಕ್ಷ್ಯಾರ್ಥರೂಪಾಯೈ ನಮಃ 20
ಲಕ್ಷ್ಮೀಶಬ್ರಹ್ಮೇಶಾಮರಪೂಜಿತಾಯೈ ನಮಃ
ಉತ್ಪತ್ತ್ಯಾದಿವಿನಿರ್ಮುಕ್ತಾಯೈ ನಮಃ
ವಿದ್ಯಾಪ್ರತಿಪಾದಿನ್ಯೈ ನಮಃ
ಊರ್ಧ್ವಲೋಕಪ್ರದಾತ್ರ್ಯೈ ನಮಃ
ಹಾನಿವೃದ್ಧಿವಿವರ್ಜಿತಾಯೈ ನಮಃ
ಸುರೇಶ್ವರ್ಯೈ ನಮಃ
ಸರ್ವಲಭ್ಯಾಯೈ ನಮಃ
ಗುರುಮೂರ್ತಿಸ್ವರೂಪಿಣ್ಯೈ ನಮಃ
ಸಮಸ್ತಪ್ರಾಣಿನಿಲಯಾಯೈ ನಮಃ
ಸರ್ವಲೋಕಸುಂದರ್ಯೈ ನಮಃ 30
ಕಾಮಕ್ಷ್ಯೈ ನಮಃ
ಕಾಮದಾತ್ರ್ಯೈ ನಮಃ
ಕಾಮೇಶಾಂಕನಿವಾಸಿನ್ಯೈ ನಮಃ
ಹರಾರ್ಧದೇಹಾಯೈ ನಮಃ
ಕಲ್ಹಾರಭೂಷಿತಾಯೈ ನಮಃ
ಹರಿಲೋಚನಾಯೈ ನಮಃ
ಲಲಿತಾಯೈ ನಮಃ
ಲಾಕಿನೀಸೇವ್ಯಾಯೈ ನಮಃ
ಲಬ್ಧೈಶ್ವರ್ಯಪ್ರವರ್ತಿನ್ಯೈ ನಮಃ
ಹ್ರೀಂಕಾರಪದ್ಮನಿಲಯಾಯೈ ನಮಃ 40
ಹ್ರೀಂಕಾರಾರ್ಣವಕೌಸ್ತುಭಾಯೈ ನಮಃ
ಸಮಸ್ತಲೋಕಜನನ್ಯೈ ನಮಃ
ಸರ್ವಭೂತೇಶ್ವರ್ಯೈ ನಮಃ
ಕರೀಂದ್ರಾರೂಢಸಂಸೇವ್ಯಾಯೈ ನಮಃ
ಕಮಲೇಶಸಹೋದರ್ಯೈ ನಮಃ
ಲಕ್ಷ್ಯಾಗಾಘೋಷಾಂಬಾಯೈ ನಮಃ
ಸರ್ವೇಶಾಸನ ಪಂಕಜಾಯೈ ನಮಃ
ಹ್ರೀಂಕಾರಪದಸಂವಾಚ್ಯಾಯೈ ನಮಃ
ಹ್ರೀಂಕಾರಬಿಂದುಲಕ್ಷಿತಾಯೈ ನಮಃ
ಏಕಾಕ್ಷರ್ಯೈ ನಮಃ 50
ಏಕರೂಪಾಯೈ ನಮಃ
ಐಶ್ವರ್ಯಫಲದಾಯಿನ್ಯೈ ನಮಃ
ಓಂಕಾರವರ್ಣನಿಲಯಾಯೈ ನಮಃ
ಔದಾರ್ಯಾದಿಪ್ರದಾಯೈ ನಮಃ
ಗಾಯತ್ರ್ಯೈ ನಮಃ
ಗಿರಿಜಾಕನ್ಯಾಯೈ ನಮಃ
ಗೂಢಾರ್ಥಬೋಧಿನ್ಯೈ ನಮಃ
ಚಂದ್ರಶೇಖರಾರ್ಧಾಂಗ್ಯೈ ನಮಃ
ಚೂಡಾಮಣಿ ಭೂಷಿತಾಯೈ ನಮಃ
ಜಾಜೀಚಂಪಕಪುನ್ನಾಗಕೇತಕೀ ಕುಸುಮಾರ್ಚಿತಾಯೈ ನಮಃ
ತನುಮಧ್ಯಾಯೈ ನಮಃ 60
ದಾನವೇಂದ್ರ ಸಂಹೃತ್ಯೈ ನಮಃ
ದೀನರಕ್ಷಿಣ್ಯೈ ನಮಃ
ಸ್ವಧರ್ಮಪರಸಂಸೇವ್ಯಾಯೈ ನಮಃ
ಧನಧನ್ಯಾಭಿವೃದ್ಧಿದಾಯೈ ನಮಃ
ನಾರಾಯಣ್ಯೈ ನಮಃ
ನಾಮರೂಪವಿವರ್ಜಿತಾಯೈ ನಮಃ
ಅಪರಾಜಿತಾಯೈ ನಮಃ
ಪರಮಾನಂದರೂಪಾಯೈ ನಮಃ
ಪರಮಾನಂದದಾಯಿನ್ಯೈ ನಮಃ 70
ಪಾಶಾಂಕುಶಾಭಯಾವರವಿಲಸತ್ಕರ–ಪಲ್ಲವಾಯೈ ನಮಃ
ಪುರಾಣಪುರುಷಸೇವ್ಯಾಯೈ ನಮಃ
ಪುಷ್ಪಮಾಲಾವಿರಾಜಿತಾಯೈ ನಮಃ

ಫಣೇಂದ್ರರತ್ನ ಶೋಭಾಡ್ಯಾಯೈ ನಮಃ
ಬದರೀವನವಾಸಿನ್ಯೈ ನಮಃ
ಬಾಲಾಯೈ ನಮಃ
ವಿಕ್ರಮಸಂಹೃಷ್ಟಾಯೈ ನಮಃ
ಬಿಂಬೇಷ್ಠ್ಯೈ ನಮಃ
ಬಿಲ್ವಪೂಜಿತಾಯೈ ನಮಃ
ಬಿಂದುಚಕ್ರೈಕನಿಲಯಾಯೈ ನಮಃ
ಭವಾರಣ್ಯದವಾನಲಾಯೈ ನಮಃ 80
ಭವಾನ್ಯೈ ನಮಃ
ಭವರೋಗಘ್ನ್ಯೈ ನಮಃ
ಭವದೇಹಾರ್ಧಧಾರಿಣ್ಯೈ ನಮಃ
ಭಕ್ತಸೇವ್ಯಾಯೈ ನಮಃ
ಭಕ್ತಿಗಮ್ಯಾಯೈ ನಮಃ
ಭಾಗ್ಯವೃದ್ಧಿಪ್ರದಾಯಿನ್ಯೈ ನಮಃ
ಭೂತಿದಾತ್ರ್ಯೈ ನಮಃ
ಭೈರವಾದಿಸಂವೃತಾಯೈ ನಮಃ
ಶ್ರೀ ಮಹೇಶ್ವರ್ಯೈ ನಮಃ 90
ಸರ್ವೇಷ್ಟಾಯೈ ನಮಃ
ಶ್ರೀ ಮಹಾದೇವ್ಯೈ ನಮಃ
ತ್ರಿಪುರಸುಂದರ್ಯೈ ನಮಃ
ಮುಕ್ತಿದಾತ್ರ್ಯೈ ನಮಃ
ರಾಜರಾಜೇಶ್ವರ್ಯೈ ನಮಃ
ವಿದ್ಯಾಪ್ರದಾಯಿನ್ಯೈ ನಮಃ
ಭಾವರೂಪಾಯೈ ನಮಃ
ವಿಶ್ವಮೋಹಿನ್ಯೈ ನಮಃ
ಶಾಂಕರ್ಯೈ ನಮಃ
ಶತ್ರುಸಂಹರ್ತ್ರ್ಯೈ ನಮಃ 100
ತ್ರಿಪುರಾಯೈ ನಮಃ
ತ್ರಿಪುರೇಶ್ವರ್ಯೈ ನಮಃ
ಶ್ರೀಶಾರದಾದಿಸಂಸೇವ್ಯಾಯೈ ನಮಃ
ಶ್ರೀಮದ್ಸಿಂಹಾಸನೇಶ್ವರ್ಯೈ ನಮಃ
ಶ್ರೀಮನ್ಮುನೀಂದ್ರಸಂಸೇವ್ಯಾಯೈ ನಮಃ
ಶ್ರೀಮನ್ನಮರನಾಯಿಕಾಯೈ ನಮಃ
ಶ್ರೀ ರಾಜರಾಜೇಶ್ವರ್ಯೈ ನಮಃ
ಶ್ರೀ ಸ್ವರ್ಣಗೌರ್ಯೈ ನಮಃ 108

-: ಶ್ರೀ ಗೌರೀ ಅಷ್ಟೋತ್ತರ ಶತನಾಮಾವಳಿಃ ಸಂಪೂರ್ಣಂ :-

ಧೂಪಂ : ದಶಾಂಗಂ ಗುಗ್ಗುಲಂ ಧೂಪಂ ಸುಗಂಧಂ ಚ ಮನೋಹರಂ। ಕಪಿಲಾಘೃತ ಸಂಯುಕ್ತಂ ಧೂಪೋಯಂ ಪ್ರತಿಗೃಹ್ಯತಾಂ। ಧೂಪಂ ಜ್ಯೋತಿಃ ಸರ್ವ ದೇವಾನಾಂ ತೇಜಸಾಂತೇಜಮುತ್ತಮಂ। ಜ್ಯೋತಿರ್ಮಂಡಲಗೇದುರ್ಗೇ ಸಂಸ್ವೀಕುರು ಚಶಾಂಕ ಶ್ರೀಮಂಗಳಗೌರೀನಮೋಸ್ತುತೇ॥

ದೀಪಂ : ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾದ್ಯೋತಿತಂ ಮಯಾ ॥ ಗೃಹಾಣ ಮಂಗಳಂ ದೀಪಂ ಶ್ರೀ ಮಂಗಳಗೌರೀ ನಮೋಸ್ತುತೇ॥ ಶ್ರೀ ಮಂಗಳಗೌರೀಭ್ಯೋ ನಮಃ ದೀಪಂ ದರ್ಶಯಾಮಿ॥

ನೈವೇದ್ಯಂ : ಸುಗಂಧಾನ್ ಸುಕೃತಾನ್‌ಶ್ಚೈವ ಮೋದಕಾನ್ ಘೃತ ಪಾಚಿತಾನ್ ॥ ನೈವೇದ್ಯಂ ಗೃಹ್ಯತಾಂ ದೇವಿ ಚಣಮುದ್ಗ್ಯೈಃ ಪ್ರಕಲ್ಪಿತಾಂ। ಭಕ್ಷ್ಯಂ ಭೋಜ್ಯಂ ಚ ಲೇಹ್ಯಂ ಚ ಜೋಷ್ಯಂ ಪಾನೀಯ ಮೇವ ಚ। ಇದಂ ಗೃಹಾಣ ನೈವೇದ್ಯ ಮಯಾದತ್ತಂ ಶ್ರೀ ಮಂಗಳಗೌರೀ ॥ ಆಚಮನಾದಿ ॥

## ಮಹಾನೈವೇದ್ಯಂ

ಶ್ರೀ ಮಂಗಳಗೌರ್ಯೈ ನಮಃ – ಮಹಾನೈವೇದ್ಯಂ ಸಮರ್ಪಯಾಮಿ

ಮಂತ್ರ : ದೇವೀಸವಿತ ಃ ಪ್ರಸುವ. ಸತ್ಯಂತ್ವರ್ತೇನಪರಿಷಿಂಚಾಮಿ, ಅಮೃತಮಸ್ತು ಅಮೃತೋಪಸ್ತರಣಮಸಿ ಸ್ವಾಹಾ, ಓಂ ಪ್ರಾಣಾಯ ಸ್ವಾಹಾ, ಅಪಾನಾಯ ಸ್ವಾಹಾ, ವ್ಯಾನಾಯ ಸ್ವಾಹಾ, ಉದಾನಾಯ ಸ್ವಾಹಾ, ಸಮಾನಾಯ ಸ್ವಾಹಾ, ಬ್ರಹ್ಮಣೇಸ್ವಾಹಾ.

ತಾಂಬೂಲಂ : ಪೂಗೀಫಲಸಮಾಯುಕ್ತ ನಾಗವಲ್ಲೀ ದಳೈರ್ಯುತಂ। ಕರ್ಪೂರಚೂರ್ಣ ಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ.

ಶ್ರೀ ಮಂಗಳಗೌರೀದೇವತಾಭ್ಯೋನಮಃ – ತಾಂಬೂಲಂ ಸಮರ್ಪಯಾಮಿ.

ದಕ್ಷಿಣೆ : ಸದಾನಂದಪ್ರದೇ ದೇವಿ ಪುಷ್ಕಲಾನಿ ಧನಾನಿ ಚ ಭೂಮ್ಯಾಂಸ್ಥಿತಾನಿ ಭಗವತಿ ಸ್ವೀಕುರುಷ್ವ ಶ್ರೀಮಂಗಳಗೌರೀ॥

ಶ್ರೀ ಮಂಗಳಗೌರೀ ದೇವತಾಭ್ಯೋನಮಃ – ಸುವರ್ಣಪುಷ್ಪಂ ಸಮರ್ಪಯಾಮಿ

## ಮಹಾಮಂಗಳಾರತಿ

ಶ್ಲೋಕ॥ ಘೃತವರ್ತಿ ಸಹಸ್ರೈಶ್ಚ ಕರ್ಪೂರಸಕಲೈಸ್ತಥಾ।
ನೀರಾಜನಂ ಮಯಾದತ್ತಂ ಗೃಹಾಣ ವರದಾಭವ॥
ಶ್ರೀ ಮಂಗಳಗೌರ್ಯೈ ನಮಃ –ನೀರಾಜನಂ ದರ್ಶಯಾಮಿ।
ನೀರಾಜನಾನಂತರಂ ಆಚಮನೀಯಂ ಸಮರ್ಪಯಾಮಿ॥

ಮಂತ್ರ : ಹಿರಣ್ಯಪಾತ್ರಂ ಮಧೋಃ ಪೂರ್ಣಂ ದಧಾತಿ ಮಧವ್ಯೋಸಾ ನೀತಿ ಏಕತಾ ಬ್ರಹ್ಮಣ ಉಪಹರತಿಏಕಧೈವ ಯಜಮಾನಃ ಆಯುಸ್ತೇಜೋ ದಧಾತಿ॥

ಮಂತ್ರಪುಷ್ಪಂ : ಪುಷ್ಪಾಂಜಲಿಂ ಪ್ರಯಚ್ಛಾಮಿ ಭಕ್ತಿಪೂರ್ವಂ ಸಮಂತ್ರಂ ತೇನ ಪಾಪಾನಿ ಪಶ್ಯಂತು ಮಂಗಳಂ ತವಪಾದಯೋಃ॥

ಪ್ರದಕ್ಷಿಣೆ : ಯಾನಿಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ। ತಾನಿತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ಪಾಪೋಽಹಂ ಪಾಪಕರ್ಮಾಽಹಂ ಪಾಪಾತ್ಮಾ ಪಾಪಸಂಭವಃ। ತ್ರಾಹಿಮಾಂ ಕೃಪಯಾದೇವಿ ಶರಣಾಗತ ವತ್ಸಲೇ॥ ಅನ್ಯಥಾಶರಣಂನಾಸ್ತಿ ತ್ವಮೇವ ಶರಣಂ ಮಮ। ತಸ್ಮಾತ್ಕಾರುಣ್ಯ ಭಾವೇನ ರಕ್ಷರಕ್ಷ ಮಹೇಶ್ವರಿ। ಪ್ರದಕ್ಷಿಣ ನಮಸ್ಕಾರಂ॥

ಪ್ರಾರ್ಥನೆ : ಪುತ್ರಾನ್‌ದೇಹಿಧನಂದೇಹಿ ಸೌಭಾಗ್ಯಂ ಸರ್ವಮಂಗಳೇ। ಸೌಮಾಂಗಲ್ಯಂ ಸುಖಂಜ್ಞಾನಂ ದೇಹಿಮೇ ಶಿವಸುಂದರೀ॥ ಇತಿ ಸಂಪ್ರಾರ್ಥ್ಯ॥

ಅಥ ವಾಯನದಾನ ವಿಧಿ : ಬ್ರಾಹ್ಮಣಂ ಸಂಪೂಜ್ಯ ತತೋ ವೈಣವ ಪಾತ್ರೇಷು ಮಂಗಳದ್ರವ್ಯ ಸಂತಂ ತಾಂಬೂಲಾದಿ ಸಮಾಯುಕ್ತಂ ಚಣಕಾದಿ ಸಮನ್ವಿತಂ।





ಸದಕ್ಷಿಣಾಕಂ ಪ್ರದಾಸ್ಯಾಮಿ ಮಂಗಳಂಬಾ ಪ್ರಸೀದತು ||ಇತಿ ವಾಯುನದಾನಂ|| ಕಾತ್ಯಾಯನೀ ಶಿವೇ ಗೌರೀ ಸಾವಿತ್ರಿ ಸರ್ವಮಂಗಳಾ ಸುವಾಸಿನೀಭ್ಯೋ ದಾಸ್ಯಾಮಿ ವಾಯನಂ ಪ್ರಸೀದತು|| ||ಇತಿ ಸುವಾಸಿನೀಭ್ಯೋ ವಾಯನದಾನಾನಿ|| ಅಥ ಮಾತೃ ವಾಯನ ದಾನಂ| ತಾಮ್ರೇವಾವ್ಯೇಣ ಪಾತ್ರೇವಾಸೌಭಾಗ್ಯದ್ರವ್ಯಮಾಕ್ಷಪತು| ಬಹು ಕಂಚುಕ ಸಂಯುಕ್ತಂ ಸಹಿರಣ್ಯಂ ಸವಸ್ತ್ರಕಂ| ಮಾತ್ರೆದದ್ಯಾತ್ಸುವಾಸಿನ್ಯೈ ಜಗನ್ಮಾತಾ ಪ್ರಸೀದತು.

*(ಈ ಬಾಗಿನವನ್ನು ತಾಯಿಗೆ ಕೊಟ್ಟು ಆಶೀರ್ವಾದ ಪಡೆಯಬೇಕು)

## ಪುನಃ ಪೂಜಾ

ಛತ್ರಂ ಸಮರ್ಪಯಾಮಿ| ಚಾಮರಂ ಸಮರ್ಪಯಾಮಿ| ನೃತ್ಯಂ ಸಮರ್ಪಯಾಮಿ| ಗೀತಂ ಸಮರ್ಪಯಾಮಿ| ವಾದ್ಯಂ ಸಮರ್ಪಯಾಮಿ| ಆಂದೋಳಕಂ ಸಮರ್ಪಯಾಮಿ| ಅಶ್ವಾರೋಹಣಂ ಸಮರ್ಪಯಾಮಿ| ಗಜಾರೋಹಣಂ ಸಮರ್ಪಯಾಮಿ| ರಥಾರೋಹಣಂ ಸಮರ್ಪಯಾಮಿ| ಸಮಸ್ತರಾಜೋಪಚಾರ ಭಕ್ತ್ಯೋಪಚಾರ ಶಕ್ತ್ಯೋಪಚಾರ ಷೋಡಶೋಪಚಾರ ಪೂಜಾಂ ಸಮರ್ಪಯಾಮಿ||

ಯಸ್ಯಸ್ಮೃತ್ಯಾಚನಾವೋಕ್ತ್ಯಾ| ತಪಃ ಪೂಜಾಕ್ರಿಯಾದಿಷು| ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇತಮಚ್ಯುತಂ| ಮಂತ್ರಹೀನಂ| ಕ್ರಿಯಾಹೀನಂ| ಭಕ್ತಿಹೀನಂ ಜನಾರ್ದನ| ಯತ್ಪೂಜಿತಂ ಮಯಾದೇವೀ ಪರಿಪೂರ್ಣಂ ತದಸ್ತು ಮೇ| ಅನೇನ ಯಾವಚ್ಛಕ್ತಿ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾವಿಧಾನೇನ ಭಗವತಿ ಸರ್ವಾತ್ಮಿಕಾಃ| ಮಂಗಳಗೌರೀ ದೇವತಾಸ್ಸು ಪ್ರೀತಾಸ್ಸುಪ್ರಸನ್ನಾ ವರದಾ ಭವಂತು||

||ಶ್ರೀ ಮಂಗಳಗೌರೀ ವ್ರತ ಪೂಜಾವಿಧಿಃ ಸಂಪೂರ್ಣಂ||

## ಶ್ರೀ ಮಂಗಳಗೌರೀ ವ್ರತಕಥೆ

ಎಲೈ ನಂದಕುಮಾರನಾದ ಗೋವಿಂದನೇ ನಿನ್ನಿಂದ ಅನೇಕ ಕಥೆಗಳನ್ನು ಕೇಳಿದೆನು; ಮತ್ತು ಇನ್ನೂ ಕೇಳಲು ಅಪೇಕ್ಷಿತನಾಗಿರುವ ನನಗೆ, ಪುತ್ರರಿಗೆ ಆಯುರ್ವೃದ್ಧಿಕರವಾಗಿರುವ ವ್ರತವೊಂದನ್ನು ಹೇಳಬೇಕೆಂದು ಧರ್ಮರಾಯನು ಪ್ರಾರ್ಥಿಸಲು, ಶ್ರೀ ಕೃಷ್ಣನು ''ಎಲೈ ಯಮನಂದನನೇ ! ಕೇಳು ! ಪುತ್ರರಿಗೆ ಆಯುರ್ವೃದ್ಧಿಕರವಾಗಿಯೂ, ಪುತ್ರಿಯರಿಗೆ ವೈಧವ್ಯನಾಶಕರವಾಗಿಯೂ ಇರುವ ಪುಣ್ಯಕರವಾದ ಅಪೂರ್ವ ಕಥೆಯನ್ನು ಹೇಳುತ್ತೇನೆ. ಸ್ಥಿರಮನಸ್ಸಿನಿಂದ ಕೇಳು; ಪೂರ್ವಕಾಲದಲ್ಲಿ ಸುಪ್ರಸಿದ್ಧವಾದ ಕುಂಡನೀಪುರದಲ್ಲಿ ಧರ್ಮಪಾಲನೆಂಬ ಪ್ರಸಿದ್ಧ ವರ್ತಕನಿದ್ದನು. ಆತನು ಬಹಳ ಹಣವಂತನಾಗಿದ್ದನು. ಮಕ್ಕಳಿಲ್ಲದ ವ್ಯಥೆಯು ಆತನಿಗೆ

ತಪ್ಪಿರಲಿಲ್ಲ. ಹೀಗಿರುವಲ್ಲಿ ಒಬ್ಬ ಸನ್ಯಾಸಿಯು ವಿಭೂತಿ ರುದ್ರಾಕ್ಷಿಗಳಿಂದಲೂ, ಜಟೆಗಳಿಂದಲೂ, ನಾರುಮುಡಿಗಳಿಂದಲೂ ಶೋಭಿತನಾಗಿ ಅವರ ಮನೆಗೆ ಬಂದು ಪ್ರತಿದಿನವೂ ಭಿಕ್ಷವನ್ನು ತೆಗೆದುಕೊಳ್ಳದೆ ಹೊರಟುಹೋಗುತ್ತಿದ್ದನು. ಈ ಯತಿಯ ಅನಾದರಣೆಯು ವರ್ತಕನಿಗೂ ಆತನ ಭಾರ್ಯೆಗೂ ಬಹುಮಟ್ಟಿಗೆ ಅವಮಾನಕ್ಕೆ ಆಕರವಾಯಿತು. ಹೀಗಿರಲು ಒಂದು ದಿನ ವರ್ತಕನ ಭಾರ್ಯೆಯು ತನ್ನ ಮನೋಗತವನ್ನು ಪತಿಗೆ ತಿಳಿಸಿ ಅತ್ಯಂತ ದುಃಖಪಟ್ಟಳು. ಅದಕ್ಕೆ ಆತನು ''ಪ್ರಿಯೆ, ಇದಕ್ಕಾಗಿ ಚಿಂತೆಯೇಕೆ ? ಆತನು ಭಿಕ್ಷಕ್ಕೆ ಬರುವ ಸಮಯಕ್ಕೆ ಸರಿಯಾಗಿ ಚಿನ್ನದ ನಾಣ್ಯವನ್ನು ಕೈಲಿಟ್ಟುಕೊಂಡು ನಿಂತಿರು. ಆತನು ಬರುತ್ತಲೇ ಚಿನ್ನದ ನಾಣ್ಯವನ್ನು ಆತನ ಕೈಯಲ್ಲಿ ಹಾಕಿಬಿಡು'' ಎಂದು ಹೇಳಲು, ಆಕೆಯು ಪತಿಯ ವಾಕ್ಯದಂತೆ ಮಾರನೆಯ ದಿನ ಚಿನ್ನದ ನಾಣ್ಯಗಳನ್ನು ತೆಗೆದುಕೊಂಡು ಯತಿಯು ಬರುವ ವೇಳೆಗೆ ಸರಿಯಾಗಿ ಬೀದಿಯ ಬಾಗಿಲಿಗೆ ಬಂದು ನಾಣ್ಯಗಳನ್ನು ಕೊಡಲು, ಆ ಯತಿಯು ''ನಿನಗೆ ಮಕ್ಕಳಿಲ್ಲವಾದ್ದರಿಂದ ನಾನು ಭಿಕ್ಷವನ್ನು ತೆಗೆದುಕೊಳ್ಳುವುದಿಲ್ಲವೆಂದು ಹೊರಟು ಹೋಗುತ್ತಿದ್ದರೂ ಈ ಹಣವನ್ನು ನನ್ನ ಮಡಿಲಲ್ಲಿ ಹಾಕಿ ಮೋಸ ಮಾಡಿದ್ದರಿಂದ ನಿನಗೆ ಮಕ್ಕಳಿಲ್ಲದೆಯೇ ಹೋಗಲಿ'' ಎಂದು ಶಾಪವಿತ್ತನು. ಆಗ ಆಕೆಯು ಸನ್ಯಾಸಿಯನ್ನು ಕುರಿತು ''ಸ್ವಾಮಿ ನನ್ನ ಅವಿವೇಕದಿಂದ ತಮ್ಮಿಂದ ಶಾಪಗ್ರಸ್ಥಳಾದೆನು. ಇದು ಪರಿಹಾರವಾಗಲು ದಾರಿಯೊಂದನ್ನು ಹೇಳಬೇಕೆಂದು'' ಪ್ರಾರ್ಥಿಸಿಕೊಳ್ಳಲು, ಸನ್ಯಾಸಿಯು ಕರುಣಾಂತರಂಗನಾಗಿ, ''ಎಲೈ ಮಗಳೇ ನೀನು ಈಗಲೇ ಮನೆಗೆ ಹೋಗಿ ನಿನ್ನ ಪತಿಯೊಡನೆ ಹೇಳು. ಕಪ್ಪು ಉಡುಪನ್ನು ಧರಿಸಿ, ಕಪ್ಪು ಕುದುರೆಯ ಮೇಲೇರಿ, ಅರಣ್ಯಕ್ಕೆ ಹೋಗಿ, ಅಲ್ಲಿ ಕುದುರೆಯು ಜಾರುವವರೆವಿಗೂ ಪ್ರಯಾಣ ಮಾಡಿ ಕುದುರೆಯು ಎಲ್ಲಿ ಜಾರುವುದೋ ಆ ಪ್ರದೇಶದಲ್ಲಿ ಅಗೆದರೆ ಸೊಗಸಾದ ಜಲವೂ, ಅನೇಕ ವಿಧಗಳಾದ ಮೃಗಪಕ್ಷಿಗಳಿಂದ ಕೂಡಿದುದಾಗಿಯೂ, ನವರತ್ನಗಳಿಂದ ಕೆತ್ತಲ್ಪಟ್ಟು ಚಿನ್ನದಿಂದ ಕೂಡಿದುದಾಗಿಯೂ, ನಾನಾ ಜಾತಿಯ ಸುಗಂಧಪುಷ್ಪಭರಿತ ವಾಗಿರುವ ಒಂದು ದೇವಾಲಯ ಕಾಣವುದು. ಆ ದೇವಾಲಯದಲ್ಲಿ ಭಕ್ತರ ಇಷ್ಟಾರ್ಥಗಳನ್ನೆಲ್ಲಾ ಸಲ್ಲಿಸುವ ಪಾರ್ವತಿದೇವಿಯು ನೆಲೆಯಾಗಿರುವಳು. ಆಕೆಯನ್ನು ಯಥಾವಿಧಿಯಾಗಿ ಷೋಡಶೋಪಚಾರ ಪೂಜೆಯಿಂದ ಅರ್ಚಿಸಿದರೆ ನಿನ್ನ ಈ ಶಾಪವು ಪರಿಹಾರವಾಗುವುದೆಂದು'' ಹೇಳಲು, ಈಕೆಯು ಸಂತೋಷದಿಂದ ಆತನ ಪಾದಗಳಿಗಭಿವಂದಿಸಿ ಸ್ತುತಿಸುತ್ತಿರುವಂತೆಯೇ ಆತನು ಅಂತರ್ಧಾನನಾದನು.

ನಂತರ ತಾನು ಮನೆಯೊಳಕ್ಕೆ ಬಂದು ಸನ್ಯಾಸಿಯಿಂದ ತನಗುಂಟಾದ ಶಾಪವನ್ನು ವಿಮೋಚನೆಯ ವಿಧಾನವನ್ನೂ ತಿಳಿಸಲು, ಕೇಳದ ವರ್ತಕನು ಕೂಡಲೇ ಕಪ್ಪು ಬಟ್ಟೆಗಳನ್ನುಟ್ಟು, ಕಪ್ಪು ಕುದುರೆಯ ಮೇಲೇರಿ ಅರಣ್ಯಕ್ಕೆ ಹೋದನು. ಆ ಅರಣ್ಯವು ದೊಡ್ಡ ದೊಡ್ಡ ವೃಕ್ಷಗಳಿಂದ ನಿಬಿಡವಾದುದಾಗಿಯೂ, ಆ ವೃಕ್ಷಗಳ ಮಧ್ಯಪ್ರದೇಶದಲ್ಲಿ ಸಿಂಹ, ಹುಲಿ, ಕಾಡೆಮ್ಮೆ ಮೊದಲಾದ ದುಷ್ಟಮೃಗಗಳಿಂದ ನಿಬಿಡವಾಗಿತ್ತು. ವರ್ತಕನು





ಹಾಗೆಯೇ ಪ್ರಯಾಣ ಮಾಡುತ್ತಿರಲು ಆ ಪ್ರದೇಶದಲ್ಲಿ ಕಮಲಪುಷ್ಪಗಳಿಂದಾವೃತವಾದ ರಮ್ಯವಾದ ಸರೋವರವೊಂದು ಕಂಗೊಳಿಸಿತು. ಅಲ್ಲಿ ಕುದುರೆಯಿಂದಿಳಿದು ಸ್ನಾನ ಸಂಧ್ಯಾದ್ಯನುಷ್ಠಾನಗಳನ್ನು ಆಚರಿಸಿ, ಮುಂದೆ ಸ್ವಲ್ಪ ದೂರ ಪ್ರಯಾಣ ಮಾಡುವಷ್ಟರಲ್ಲಿಯೇ ಕುದುರೆಯು ಜಾರಿತು. ಕೂಡಲೇ ಸಂತೋಷಗೊಂಡವನಾಗಿ ಕುದುರೆಯಿಂದ ಇಳಿದು ದೇವಾಲಯ ಸಿಕ್ಕುವವರೆಗೂ ಭೂಮಿಯನ್ನಗೆದು ತನ್ನ ಇಷ್ಟದಂತೆ ಅನೇಕ ವಿಧಗಳಾದ ಫಲಪುಷ್ಪಭರಿತ ವೃಕ್ಷಗಳಿಂದಲೂ, ರತ್ನಖಚಿತವಾದ ಚಿನ್ನದ ಗೋಡೆಗಳಿಂದಲೂ ಕೂಡಿ ಮೆರೆಯುವ ದೇವಾಲಯವನ್ನು ಕಂಡು ಯತಿಯ ವಾಕ್ಯವನ್ನು ಸ್ಮರಿಸುತ್ತಾ ದೇವಾಲಯದೊಳಗೆ ಪ್ರವೇಶಿಸಿ ಸ್ಥಿರಮನಸ್ಕನಾಗಿ ಹೊಂಬಣ್ಣದ ವಸ್ತುಗಳಿಂದಲೂ, ಚಂದನವನ್ನು, ಶುಭಕರಗಳಾದ ಅಕ್ಷತೆಗಳನ್ನು, ಧೂಪದೀಪಾದಿ ಗಳಿಂದಲೂ, ನಾನಾವಿಧ ಶಾಕಪಕ್ವಾನ್ನಗಳನ್ನೂ, ಶರ್ಕರೆಯಿಂದ ಕೂಡಿ ಕ್ಷೀರವನ್ನೂ, ತಾಂಬೂಲ ದಕ್ಷಿಣೆಗಳನ್ನೂ ಸಿದ್ಧಮಾಡಿಕೊಂಡು ಶಾಸ್ತ್ರೋಕ್ತವಾಗಿ ದೇವಿಗೆ ಪೂಜೆಯನ್ನು ಮಾಡಲು, ಆಕೆಯು ಸುಪ್ರೀತಳಾಗಿ ಈ ಅರಣ್ಯದಲ್ಲಿ ನನಗೆ ಇಂತಹ ಅಮೋಘ ಪೂಜಾದ್ರವ್ಯಗಳಿಂದ ಪೂಜಿಸಿದವನಿಗೆ ವರವನ್ನು ಕೊಡಬೇಕೆಂದು ಪ್ರತ್ಯಕ್ಷಳಾಗಿ ''ಎಲೈ ವ್ಯಾಪಾರಿಯೇ! ನಿನ್ನ ಕೋರಿಕೆ ತಿಳಿಸಿದರೆ, ಅನುಗ್ರಹಿಸುವೆನೆಂದು ಹೇಳಲು, ವರ್ತಕನು ಮಾತೆಯೇ ನನಗೆ ಬೇಕಾದಷ್ಟು ಐಶ್ವರ್ಯವಿದ್ದರೂ ಸಂತಾನವಿಲ್ಲದೆ ಬಹಳವಾಗಿ ನೊಂದಿರುತ್ತೇನೆ. ಸಂತಾನವಾಗುವಂತೆ ಅನುಗ್ರಹಿಸಿ ಪಿತೃವರ್ಗವನ್ನು ಪಾವನಮಾಡಿ ನನಗೆ ಸಂತೋಷವನ್ನುಂಟು ಮಾಡಬೇಕೆಂದು ಪ್ರಾರ್ಥಿಸಲು, ದೇವಿಯು ''ಎಲೈ ಧರ್ಮಪಾಲನೆ! ಮಕ್ಕಳಿಂದುಂಟಾಗುವ ಸಂತೋಷ ಸುಖವು ನಿನಗಿಲ್ಲವು. ಆದಾಗ್ಯೂ ವೈಧವ್ಯ ಭರಿಸುವ ಒಬ್ಬ ಪುತ್ರಿಯನ್ನಾಗಲೀ, ಅಲ್ಪಾಯುಸ್ಸುಳ್ಳ ಸುಂದರನಾದ ಒಬ್ಬ ಪುತ್ರನನ್ನಾಗಲೀ, ದೀರ್ಘಾಯುವಾದ ಒಬ್ಬ ಕುರುಡ ಪುತ್ರನನ್ನಾಗಲೀ ಅಪೇಕ್ಷಿಸಿದರೆ ಕೊಡುವೆನೆಂದು'' ಹೇಳಲು; ವರ್ತಕನು ''ಜನನೀ! ಸುಂದರನೂ ಅಲ್ಪಾಯುವೂ ಆದ ಪುತ್ರನನ್ನೇ ಕೊಡು'' ಎಂದು ಪ್ರಾರ್ಥಿಸಲು, ದೇವಿಯು ಪಕ್ಕದಲ್ಲಿದ್ದ ಗಣಪತಿಯ ಮೇಲೆ ಹತ್ತಿ ಅಲ್ಲಿಂದ ಒಂದು ಮಾವಿನ ಹಣ್ಣನ್ನು ತೆಗೆದುಕೊಂಡು ಅದನ್ನು ನಿನ್ನ ಸತಿಗೆ ಕೊಟ್ಟಲ್ಲಿ ಇಷ್ಟಾರ್ಥ ನೆರವೇರುವುದೆಂದು ಹೇಳಲು, ಧರ್ಮಪಾಲನು ಅವಿವೇಕದಿಂದ ಗಣಪತಿಯ ನಾಭಿಯ ಮೇಲೇರಿ ಮಾವಿನ ಮರದಲ್ಲಿ ತನಗೆ ಬೇಕಾದಷ್ಟು ಹಣ್ಣುಗಳನ್ನು ಕಿತ್ತುಕೊಂಡು ಕೆಳಕ್ಕೆ ಬಂದು ನೋಡಲು ಒಂದೇ ಹಣ್ಣು ಕಾಣಿಸಿತು. ನಂತರ ಮತ್ತೊಂದು ಸಲ ಹತ್ತಿದನು. ಆಗಲೂ ಇದೇ ರೀತಿಯಾಯಿತು. ಹೀಗೆ ಅನೇಕ ಸಲ ಮಾಡುತ್ತಿರಲು, ಗಣಪತಿಯು ಕೋಪಗೊಂಡವನಾಗಿ ''ನಿನ್ನ ಮಗ ಹದಿನಾರನೆಯ ವರ್ಷದಲ್ಲಿ ಹಾವು ಕಚ್ಚಿ ಸಾಯಲಿ'' ಎಂದು ಶಾಪವನ್ನು ಕೊಟ್ಟನು. ಅನಂತರ ಧರ್ಮಪಾಲನು ಖಿನ್ನನಾಗಿ ಉಳಿದಿದ್ದ ಒಂದು ಫಲವನ್ನೇ ವಸ್ತ್ರದಲ್ಲಿ ಗಂಟು ಹಾಕಿಕೊಂಡು ಬಂದು ತನ್ನ ಸತಿಗೆ ಕೊಡಲು ಆಕೆಯು ಅದನ್ನು ಭಕ್ಷಿಸಿ ಪತಿಯೊಡನೆ ಸುಖವಾಗಿದ್ದು ಒಂದು ದಿನ

ಗರ್ಭವನ್ನು ಧರಿಸಿದಳು. ನವಮಾಸಗಳು ಪೂರ್ತಿಯಾಗಲು, ಒಂದು ಸುಲಗ್ನದಲ್ಲಿ ಸುಂದರನಾದ ಮಗನನ್ನು ಹೆತ್ತಳು. ಆರನೆಯ ದಿನದಲ್ಲಿ ಇಷ್ಟದೇವತಾ ಪೂಜೆಯನ್ನು ಮಾಡಿ ಹನ್ನೆರಡನೆಯ ದಿನದಲ್ಲಿ ''ಶಿವ'' ಎಂದು ನಾಮಕರಣವನ್ನು ಮಾಡಿದರು. ಆರನೆಯ ತಿಂಗಳಲ್ಲಿ ಅತ್ಯುತ್ಸಾಹದಿಂದ ಅನ್ನಪ್ರಾಶನವನ್ನು ಮಾಡಿದರು. ಶಾಸ್ತ್ರೋಕ್ತವಾಗಿ ಆ ಬಾಲಕನಿಗೆ ಮೂರನೆಯ ವರ್ಷದಲ್ಲಿ ಚೌಲವನ್ನೂ, ಎಂಟನೆಯ ವರ್ಷದಲ್ಲಿ ಉಪನಯನವನ್ನೂ ಮಾಡಿದರು. ಹೀಗೆಯೇ ನಡೆದು ಬಾಲಕನಿಗೆ ಹತ್ತು ವರ್ಷಗಳು ಪ್ರಾಪ್ತವಾಗಲು, ಧರ್ಮಪಾಲನ ಪತ್ನಿಯು ''ಪ್ರಿಯನೇ! ಮಗನಿಗೆ ವಿವಾಹ ಮಾಡಬೇಕೆಂದು''ಪ್ರಾರ್ಥಿಸಲು, ಧರ್ಮಪಾಲನು ''ಸ್ತ್ರೀಯಳೆ! ಪುತ್ರನನ್ನು ನಾನು ಕಾಶಿಕ್ಷೇತ್ರಕ್ಕೆ ಕಳುಹಿಸಬೇಕೆಂದು ಸಂಕಲ್ಪ ಮಾಡಿರುತ್ತೇನೆ. ಕಾಶೀಕ್ಷೇತ್ರಕ್ಕೆ ಹೋಗಿ ಬಂದನಂತರ ನಿನ್ನ ಇಷ್ಟದಂತೆ ವಿವಾಹವನ್ನು ಮಾಡುವೆನೆಂದು'' ಹೇಳಿ ತನ್ನ ಭಾವಮೈದನನನ್ನು ಜೊತೆ ಮಾಡಿ ಕಾಶೀ ಕ್ಷೇತ್ರಕ್ಕೆ ಪ್ರಯಾಣವನ್ನು ಏರ್ಪಡಿಸಿದನು. ಸೋದರಮಾವನೊಂದಿಗೆ ಶಿವನು ಪ್ರಯಾಣ ಮಾಡುತ್ತಾ ದಾರಿಯಲ್ಲಿ ಅನೇಕ ಮಹಾಸ್ಥಳಗಳನ್ನು ಸಂದರ್ಶಿಸಿ ಅಲ್ಲಲ್ಲಿ ದಾನ ಧರ್ಮಗಳನ್ನು ಮಾಡುತ್ತಾ ಪ್ರತಿಷ್ಠಾನಗರಕ್ಕೆ ಬಂದರು. ಅಲ್ಲಿ ಕೆಲವು ಕನ್ಯೆಯರ ಮಧ್ಯದಲ್ಲಿ ಚಿನ್ನದ ಗೊಂಬೆಯಂತೆ ಶೋಭಾಯಮಾನಳಾಗಿರುವ ಸುಶೀಲೆ ಎಂಬ ಕನ್ಯೆಯನ್ನು ಮತ್ತೊಬ್ಬ ಬಾಲಕಿಯು ಕಲಹಕಾರಣದಿಂದ ರಂಡೆ, ನಿರ್ಭಾಗ್ಯಳೆ ಎಂದು ಬಯ್ಯುತ್ತಿರಲು ಅದನ್ನು ಕೇಳಿದ ಸುಶೀಲೆಯು ''ಎಲೌ ಸಖಿಯೇ, ಸುಮ್ಮನೆ ನನ್ನನ್ನೇಕೆ ಬಯ್ಯುತ್ತೀಯೆ; ನಮ್ಮ ಜನನಿಯು ಮಾಡುತ್ತಿರುವ ಅಮೋಘವಾದ ಗೌರಿಯ ವ್ರತದ ಪ್ರಭಾವದಿಂದ ಆಕೆಯ ಹೆಣ್ಣು ಮಕ್ಕಳಿಗೆ ವೈಧವ್ಯವಿಲ್ಲದೆ ಸದಾ ಸುಮಂಗಲಿಯರಾಗಿಯೇ ಇರುವುದರಿಂದ ನೀನು ಹೇಳಿದಂತೆ ಎಂದಿಗೂ ನಡೆಯಲಾರದು. ಶುಭಕರವಾದ ಈ ವ್ರತದ ಪ್ರಭಾವವನ್ನು ಹೇಳುವೆನು ಕೇಳು; ಇಂತಹ ಶುಭಕರವಾದ ವ್ರತವನ್ನು ಮಾಡುವ ಕಾಲದಲ್ಲಿ ಇಡುವ ಧೂಪ ದೀಪಗಳನ್ನು ಇಟ್ಟಿರುವ ಕಡೆಯಲ್ಲಿರುವವರಿಗೂ ಸಹ ಸುಖವುಂಟಾಗುವುದು'' ಎಂದು ಹೇಳಲು ಈ ಮಾತನ್ನು ಕೇಳಿ ಈ ಹುಡುಗನ ಸೋದರ ಮಾವನು ವಿಸ್ಮಿತನಾಗಿ ಈ ಬಾಲಕಿಯ ತಾಯಿಯಿಂದ ನಮ್ಮ ಹುಡುಗನ ತಲೆಯಮೇಲೆ ಅಕ್ಷತೆಗಳನ್ನು ಹಾಕಿಸಿದರೆ ಇವನು ದೀರ್ಘಾಯುವಾಗುವನೆಂದು ಯೋಚಿಸಿ ಆ ಬಾಲಕಿಯು ಹೋಗುತ್ತಿದ್ದ ದಾರಿಯನ್ನೇ ಅನುಸರಿಸಿ ಹೊರಟನು. ಸುಂದರಾಂಗಿಯಾದ ಸುಶೀಲೆಯು ತನ್ನ ಮನೆಗೆ ಹೊರಟಳು. ಅವರ ಮನೆಯ ಸಮೀಪದಲ್ಲಿ ದಿವ್ಯವಾದ ತಟಾಕದಿಂದ ಪ್ರಕಾಶಮಾನವಾದ ಒಂದು ಸ್ಥಳದಲ್ಲಿ ಇವರಿಬ್ಬರೂ ವಾಸ ಮಾಡುತ್ತಿದ್ದರು.

ಇತ್ತ ಸುಶೀಲೆಯ ತಂದೆಯಾದ ಹರಿ ಎಂಬುವನು ತಟಾಕದ ಸಮೀಪದಲ್ಲಿರುವ ಸ್ವಾಮಿಯ ಆಜ್ಞೆಯಂತೆ ಸಕಲ ಕಾರ್ಯಗಳನ್ನು ಮಾಡುತ್ತಿದ್ದನಾದ ಕಾರಣ ಸುಶೀಲೆಗೆ ಪ್ರಾಪ್ತವಾಗಿರುವ ವಿವಾಹ ಕಾಲದ ದೆಸೆಯಿಂದ ದೇವರನ್ನು ಪ್ರಸಾದ ಕೇಳಿ ಮುಂದಿನ




ಕಾರ್ಯಕ್ಕೆ ತೊಡಗಬೇಕೆಂದು ಯೋಚಿಸಿ ದೇವಾಲಯಕ್ಕೆ ಹೋಗಿ ಶಿವನನ್ನು ಅರ್ಚಿಸಿ ಪ್ರಸಾದವನ್ನು ಬೇಡಲು, ಶಿವನು ಪ್ರಸಾದವನ್ನು ಕೊಡದಿರಲು ಸುಶೀಲೆಯ ಮಾತಾಪಿತೃಗಳಿಬ್ಬರೂ ಕೈಗಳನ್ನು ಜೋಡಿಸಿಕೊಂಡು ವಿನಯದಿಂದ ಪಾರ್ವತೀ ದೇವಿಯನ್ನು ಹೀಗೆ ಪ್ರಾರ್ಥಿಸಿದರು : ತಾಯೇ, ಅಂಬಿಕೆಯೇ! ನಮ್ಮ ಪುತ್ರಿಗೆ ವಿವಾಹ ಕಾಲವು ಸನ್ನಿಹಿತವಾಗಿರುವುದು. ಆಕೆಯನ್ನು ಯಾವ ವರನಿಗೆ ಕೊಡಬೇಕೆಂಬ ವಿಚಾರವನ್ನು ನಿನ್ನ ಕಾಂತನು ನಿರ್ಧಾರ ಮಾಡಿ ಹೇಳಲಿಲ್ಲ. ಆತನ ಅನುಜ್ಞೆಯಿಲ್ಲದೆ ಯಾವ ಕೆಲಸವನ್ನು ನಾವು ಮಾಡತಕ್ಕವರಲ್ಲವೆಂಬುದು ನಿನಗೆ ತಿಳಿಯದ ವಿಷಯವಲ್ಲ ಅನುಗ್ರಹಿಸು'' ಎಂದು ಪ್ರಾರ್ಥಿಸಲು, ಆ ಸಮಯದಲ್ಲಿಯೇ ಶಿವನ ಸೋದರಮಾವನು ತನ್ನ ಅಳಿಯನಿಗೆ ಸುಶೀಲೆಯನ್ನು ಸಂಘಟಿಸಬೇಕೆಂಬ ಸಂಕಲ್ಪದಿಂದ ದೇವಿಯ ವಿಗ್ರಹದ ಹಿಂಭಾಗದಲ್ಲಿ ಸೇರಿಕೊಂಡು ''ಎಲೈ ದಂಪತಿಗಳಿರಾ! ಇಲ್ಲಿಗೆ ಪರಸ್ಥಳದಿಂದ ಬಂದಿರತಕ್ಕ ಶಿವನೆಂಬ ವರನು ನಿಮ್ಮ ಮಗಳಿಗೆ ತಕ್ಕವನು. ಆತನಿಗೆ ಕೊಟ್ಟು ಮದುವೆಯನ್ನು ಮಾಡಬಹುದೆಂದು'' ಹೇಳಿದನು. ಈ ರೀತಿಯಾಗಿ ಹೇಳಲ್ಪಟ್ಟ ಮಾತು ದೇವಿಯದೆಂದೇ ಭಾವಿಸಿ ಹರಿಯೂ ಆತನ ಭಾರ್ಯೆಯೂ ಶಿವನಿಗೆ ತಮ್ಮ ಮಗಳನ್ನು ಕೊಡಬೇಕೆಂಬ ಸಂಕಲ್ಪದಿಂದಿರಲು ಬುದ್ಧಿಶಾಲಿಯಾದ ಶಿವನ ಸೋದರಮಾವನು ಮಾರನೆಯ ದಿನ ಹರಿಯ ಬಳಿಗೆ ಬಂದು ಸೋದರಳಿಯನಾದ ಶಿವನೊಂದಿಗೆ ತಾನು ಕನ್ಯಾರ್ಥಿಯಾಗಿ ಬಂದಿರುವುದಾಗಿಯೂ ತಮ್ಮ ಮಗಳನ್ನು ಶಿವನಿಗೆ ಕೊಡಬೇಕೆಂಬುದಾಗಿಯೂ ಕೇಳಿದನು. ಆ ಮಾತಿಗೆ ಹರಿಯು ಸಮ್ಮತಿಸಿ ಶುಭಮುಹೂರ್ತವನ್ನು ಗೊತ್ತುಮಾಡಿ ತನ್ನ ಮಗಳಾದ ಸುಶೀಲೆಯನ್ನು ಶಿವನಿಗೆ ಕೊಟ್ಟ ವಿವಾಹವನ್ನು ನಡೆಸಿದನು. ಆ ರಾತ್ರಿ ಶಿವನು ಸುಶೀಲೆಯೊಡನೆ ಮಲಗಿರಲು ಸುಶೀಲೆಯ ಸ್ವಪ್ನದಲ್ಲಿ ಮಂಗಳಗೌರಿಯು ಆಕೆಯ ತಾಯಿಯ ರೂಪದಿಂದ ಬಂದು ಈ ರೀತಿಯಾಗಿ ಹೇಳಿದಳು. ''ಎಲೈ ಮಗಳೇ! ನಿನ್ನ ಪತಿಯನ್ನು ಕಚ್ಚುವುದಕ್ಕಾಗಿ ಒಂದು ದೊಡ್ಡ ಹಾವು ಬರುತ್ತಿರುವುದು, ಮೇಲಕ್ಕೇಳು, ಆ ಹಾವಿಗೆ ಹಾಲನ್ನು ಇಡು, ಅಲ್ಲದೆ ಒಂದು ದೊಡ್ಡ ಕುಂಭವನ್ನು ಇಲ್ಲಿಡು; ಆ ಹಾವು ಕುಂಭದೊಳಗೆ ಹೋಗುವುದು. ಅನಂತರ ನಿನ್ನ ಕುಪ್ಪಸದಿಂದ ಆ ಕುಂಭದ ಬಾಯಿಯನ್ನು ಕಟ್ಟು, ಉದಯಕ್ಕೆ ಎದ್ದು ಮಂಗಳಸ್ನಾನವನ್ನು ನಿರ್ವರ್ತಿಸಿ ನಿಮ್ಮ ತಾಯಿಗೆ ಬಾಗಿನವನ್ನು ಕೊಡು'' ಎಂದು ಹೇಳಲು ಆ ಮಾತನ್ನು ಕೇಳಿ ಸುಶೀಲೆಯು ಗಾಬರಿಯಿಂದ ಮೇಲಕ್ಕೆದ್ದು ನೋಡುವಲ್ಲಿ ಒಂದು ದೊಡ್ಡ ಕರಿಯ ನಾಗರಹಾವು ಅತಿ ರಭಸದಿಂದ ಬರುತ್ತಿತ್ತು. ದೇವಿಯ ಮಾತಿನಂತೆ ಅದಕ್ಕೆ ಹಾಲನ್ನಿಟ್ಟು ಒಂದು ಕುಂಭವನ್ನು ತಂದಿಡಲು ಹಾವು ಅದರೊಳಗೆ ಹೋಯಿತು. ನಂತರ ತನ್ನ ಕುಪ್ಪಸದಿಂದ ಆ ಕುಂಭದ ಬಾಯಿಯನ್ನು ಕಟ್ಟಿದಳು. ಆ ಸಮಯಕ್ಕೆ ಸರಿಯಾಗಿ ಶಿವನು ಮೇಲಕ್ಕೆದ್ದು ''ಎಲೈ ಸುಶೀಲೆಯೇ! ನನಗೆ ಹಸಿವಾಗುತ್ತಿರುವುದು, ಆಹಾರ ಏನಾದರೂ ಕೊಡೆಂದು ಕೇಳಲು, ಸುಶೀಲೆಯು ಆ ಮಾತನ್ನು ಕೇಳುತ್ತಲೇ

ಒಂದು ಚಿನ್ನದ ಪಾತ್ರೆಯಲ್ಲಿ ಲಡ್ಡು ಜಿಲೇಬಿ ಮೊದಲಾದ ಭಕ್ಷ್ಯಗಳನ್ನು ತಂದುಕೊಟ್ಟಳು. ಅದನ್ನು ತಿಂದು ಚಿನ್ನದ ಪಾತ್ರೆಯಲ್ಲಿ ತನ್ನ ಮುದ್ರಿಕೆಯ ಉಂಗುರವನ್ನಿಟ್ಟು ಸತಿಪತಿಗಳಿಬ್ಬರೂ ಸುಖವಾಗಿ ಮಲಗಿ ನಿದ್ರಿಸುತ್ತಿದ್ದರು. ಪ್ರಾತಃಕಾಲವಾಗುವುದರೊಳಗಾಗಿಯೇ ಶಿವನು ಮೇಲಕ್ಕೆದ್ದು ತನ್ನ ಸತಿಗೆ ಹೇಳದೆ ಹೊರಟುಹೋದನು. ಉದಯವಾದ ಮೇಲೆ ಸುಶೀಲೆಯು ಮೇಲಕ್ಕೆದ್ದು ತನ್ನ ಪತಿಯನ್ನು ಕಾಣದೆ ನಾಚಿಕೆಯಿಂದ ಹೊರಗೆ ಬಂದು ತನ್ನ ತಾಯಿಗೆ ಬಾಗಿನವನ್ನು ಕೊಡಲು ಅದರಲ್ಲಿದ್ದ ಮುತ್ತಿನ ಹಾರವನ್ನು ಸಂತೋಷದಿಂದ ಮಗಳಿಗೆ ಕೊಟ್ಟಳು. ನಂತರ ಸಾಕ್ಷಾತ್ ಸಾಂಬಮೂರ್ತಿಯು ಶಿವನ ವೇಷದಿಂದ ಬರಲು ಅಲ್ಲಿದ್ದ ವರೆಲ್ಲಾ ಇವನಿಗೂ ವರನಿಗೂ ಯಾವ ವ್ಯತ್ಯಾಸ ಕಾಣದಿರುವುದನ್ನು ನೋಡಿ ಇವನೇ ವರನೆಂದು ನಿಶ್ಚೈಸಿದರು. ಸುಶೀಲೆಯೂ ಆ ವರನನ್ನು ನೋಡಿ "ಅಮ್ಮಾ! ನಾನು ಲಗ್ನವಾದ ವರನು ಈತನಲ್ಲವು. ಆದುದರಿಂದ ಈತನೊಡನೆ ನಾನು ಇರಲಾರೆನು" ಎಂದು ಹೇಳಲು ಅಲ್ಲಿದ್ದ ವರನು ಅಂತರ್ಧಾನನಾದನು. ಈ ಮಾತನ್ನು ಕೇಳಿ ಆಕೆಯ ಮಾತಾಪಿತೃಗಳು ಚಿಂತಾಕ್ರಾಂತರಾದರು. ವರನನ್ನು ಹುಡುಕುವುದಕ್ಕಾಗಿ ಪ್ರಯತ್ನಿಸಿ ಇಹಪರಗಳಿಗೆ ಸಾಧನಕಾರಿಯಾದ ಅನ್ನದಾನದ ನೆಪದಿಂದ ವರನನ್ನು ಹುಡುಕಬೇಕೆಂದು ಸಂಕಲ್ಪಿಸಿ ಅನ್ನದಾನವನ್ನು ಮಾಡಲು ಉಪಕ್ರಮಿಸಿದರು. ಆ ಸಮಾರಾಧನೆಯಲ್ಲಿ ಸುಶೀಲೆಯು ತನ್ನ ಪತಿಯ ಮುದ್ರಿಕಾ ಉಂಗುರವನ್ನಿಟ್ಟು ಬ್ರಾಹ್ಮಣರ ಕಾಲುಗಳನ್ನು ತೊಳೆಯುವಳು. ಆಕೆಯ ತಾಯಿಯು ನೀರನ್ನು ಹಾಕುವಳು. ತಂದೆಯು ತಾಂಬೂಲಾದಿಗಳನ್ನು ಕೊಟ್ಟು ಭೋಜನ ಮಾಡಿಸುತ್ತಿದ್ದರು. ಅಣ್ಣ ತಮ್ಮಂದಿರು ಗಂಧಪುಷ್ಪಾದಿಗಳನ್ನು ಕೊಡುತ್ತಿದ್ದರು. ಈ ಪ್ರಕಾರವಾಗಿ ಅತಿಥಿಗಳಿಗೆ ಸುಖವಾದ ಅನ್ನದಾನವು ನಡೆಯುತ್ತಿತ್ತು.

ಇತ್ತ ಶಿವನೆಂಬ ವರನೂ ಆತನ ಸೋದರಮಾವನೂ ಸಕಲ ಇಷ್ಟಾರ್ಥಗಳನ್ನೂ ಈಡೇರಿಸುವ ಕಾಶೀಕ್ಷೇತ್ರಕ್ಕೆ ಹೋಗಿ ಪುಣ್ಯಪಾವನೆಯಾದ ಗಂಗಾನದಿಯಲ್ಲಿ ಸ್ನಾನ ಮಾಡಿ ವಿಶ್ವೇಶ್ವರನನ್ನು ಸಂದರ್ಶಿಸಿ, ಉತ್ತಮವಾದ ಧರ್ಮಕಾರ್ಯಗಳನ್ನು ಮಾಡುತ್ತಾ ಹರಿದ್ವಾರಕ್ಕೆ ಬಂದು, ಅಲ್ಲಿಯೂ ಗಂಗಾಸ್ನಾನವನ್ನು ಮಾಡಿಕೊಂಡು ಸ್ವಾಮಿಯ ದಿವ್ಯದರ್ಶನದಿಂದ ಸಂತೃಪ್ತರಾಗಿ, ಆ ಪ್ರದೇಶದಲ್ಲಿರುವ ಯತಿಗಳನ್ನೆಲ್ಲಾ ನೋಡಿ ಅವರಿಂದ ಆಶೀರ್ವಾದವನ್ನು ಪಡೆದು, ಮನೆಗಳಲ್ಲಿರುವ ಸದ್ಬ್ರಾಹ್ಮಣರ ದರ್ಶನವನ್ನು ಮಾಡಿ, ಅವರಿಗೆ ಪೀತಾಂಬರ ದಾನಗಳನ್ನು ಕೊಟ್ಟು ಅವರಿಂದಲೂ ಚಿರಂಜೀವಿಯಾಗೆಂದು ಶಿವನು ಆಶೀರ್ವಾದವನ್ನು ಪಡೆದು ಪುನಃ ಕಾಶೀಕ್ಷೇತ್ರಕ್ಕೆ ಬಂದು ಅಲ್ಲಿಯೇ ಇರಲಾಗಿ ಶಿವನ ಸೋದರಮಾವನು ತನ್ನ ಅಳಿಯನ ಗಂಡಾಂತರದ ಬಗ್ಗೆ ಚಿಂತಿಸುತ್ತಿದ್ದನು. ಹೀಗಿರಲು ಶಿವನಿಗೆ ಹದಿನಾರು ವರ್ಷಗಳು ಸಂಪ್ರಾಪ್ತವಾಯಿತು. ಆಗ ಸಾಕ್ಷಾತ್ ಶಿವಮೂರ್ತಿಯು ಪ್ರತ್ಯಕ್ಷನಾಗಿ ಅವನಿಗೆ ಮಂಗಳಾಶೀರ್ವಾದವನ್ನು ಮಾಡಿದನು. ಪ್ರಾತಃಕಾಲದಲ್ಲಿ ಶಿವನು ಮೇಲಕ್ಕೆದ್ದು ಮಂಗಳ ಸ್ವರೂಪನಾದ ಶಿವನೇ

ಬಂದು ತನ್ನನ್ನು ಕಾಪಾಡಿ ಆಶೀರ್ವದಿಸಿದನೆಂದೂ ಹೇಳಲು ಸಂತೋಷಿತರಾದ ಅವರಿಬ್ಬರೂ ಮಂಗಳಸ್ನಾನ ಮಾಡಿ ಸ್ವಾಮಿಯನ್ನು ಕೊಂಡಾಡಿ ಅಲ್ಲಿಯೇ ಇರುತ್ತಿರಲು, ಒಂದು ದಿನ ಕೆಲವು ಯಾತ್ರಿಕರು ಹರಿಯು ಮಾಡುತ್ತಿರುವ ಅನ್ನದಾನವನ್ನೂ, ಸುಶೀಲೆಯ ಗುಣಗಳನ್ನೂ ಇವರ ಮುಂದೆ ವಿಸ್ತಾರವಾಗಿ ಹೇಳಲು, ಸೋದರಮಾವನೂ ಅಳಿಯನೂ ಹೊರಟುಬಂದು ಹರಿಯ ಮನೆಯನ್ನು ಪ್ರವೇಶಿಸಿದರು. ಪಾದಗಳನ್ನು ತೊಳೆಯಲು ಬಂದ ಸುಶೀಲೆಯು ಈತನೇ ತನ್ನ ಪತಿಯೆಂದು ಹೇಳಲು, ಹರಿಯು ಆತನ ಪತ್ನಿಯೂ ಸಂತೋಷಗೊಂಡವರಾಗಿ ಆತನಿಗೆ ತಮ್ಮ ಮಗಳನ್ನೂ, ಅನೇಕವಾಗಿ ಧನಕನಕ ವಸ್ತು ವಾಹನಾದಿಗಳನ್ನು ಕೊಟ್ಟು ಆನಂದಿಸಿದರು. ಇತ್ತ ಧರ್ಮಪಾಲನು ತನ್ನ ಮಗನ ಸಮಾಚಾರವನ್ನು ತಿಳಿಯದೆ ಚಿಂತಾಕ್ರಾಂತನಾಗಿರಲು, ಕೆಲವು ಮಂದಿ ಚಾರರು ಬಂದು ಅಲ್ಲಿ ನಡೆದಿರುವ ಸಮಾಚಾರಗಳನ್ನೆಲ್ಲಾ ಹೇಳಲು, ಅತ್ಯಾಶ್ಚರ್ಯಗೊಂಡವನಾಗಿ ಮಗನನ್ನೂ ಸೊಸೆಯನ್ನು ಸಂತೋಷದಿಂದ ಕರೆತಂದು ಸುಶೀಲೆಯಿಂದ ಮಂಗಳಗೌರೀವ್ರತದ ಮಹಿಮೆಯನ್ನು ಕೇಳಿ ಅದರಂತೆಯೇ ಆಕೆಯ ಕೈಲಿ ವ್ರತವನ್ನು ಸಾಂಗವಾಗಿ ಮಾಡಿಸುತ್ತಿದ್ದನು.

''ಎಲೈ ಧರ್ಮನಂದನನೇ! ಈ ವ್ರತವನ್ನು ಶ್ರಾವಣಮಾಸದಲ್ಲಿ ಮಂಗಳವಾರದ ದಿನದಂದು ಆಚರಿಸಬೇಕು. ಪ್ರಾತಃಕಾಲದಲ್ಲಿ ಎದ್ದು ಮಂಗಳಸ್ನಾನ ಆಚರಿಸಿ ಮಂಗಳಗೌರಿಯನ್ನು ಪ್ರತಿಷ್ಠಿಸಿ ಷೋಡಶೋಪಚಾರ ಪೂಜಾಕ್ರಮದಿಂದ ದೇವಿಯನ್ನು ಆರಾಧಿಸಬೇಕು. ಹದಿನಾರು ದೀಪಗಳನ್ನು ದೇವಿಗೆ ಇಡಬೇಕು. ಈ ಹದಿನಾರು ದೀಪಗಳನ್ನು ಹದಿನಾರು ಮಂದಿ ಸುವಾಸಿನಿಯರಿಗೆ ಕೊಡಬೇಕು. ''ಆ ದಿನ ಉಪ್ಪಿಲ್ಲದ ಅನ್ನವನ್ನು ಭುಜಿಸಬೇಕು'' ಎಂಬುದಾಗಿ ಶ್ರೀ ಕೃಷ್ಣನು ಹೇಳಿದನೆಂಬಲ್ಲಿಗೆ ವ್ರತಕಥೆ ಮುಗಿಯಿತು.

ಶ್ರೀ ಮಂಗಳಗೌರೀ ವ್ರತಕಥೆ ಸಂಪೂರ್ಣಂ

## ಉದ್ಯಾಪನಾವಿಧಿ

ಈ ವ್ರತವನ್ನು ಐದು ವರ್ಷಗಳು ಆಚರಿಸಿ ಕಡೆಯ ಶ್ರಾವಣ ಮಂಗಳವಾರ ಪೂಜಾನಂತರ ಲಿಂಗ ಸಹಿತ ದಿವ್ಯಮಂಟಪದಲ್ಲಿ ಕಲಶ ಸ್ಥಾಪನೆ ಮಾಡಿ ಅದರ ಮೇಲೆ ಉಮಾಮಹೇಶ್ವರ ವಿಗ್ರಹವನ್ನು ಸ್ಥಾಪಿಸಬೇಕು. ಬ್ರಹ್ಮಕಲಶ, ಗಣೇಶಕಲಶ, ಕುಮಾರಕಲಶ, ಶಚೀಪುರಂದರಕಲಶ, ಸಪ್ತಮಾತೃಕೆಯರಿಗೆ ಏಳು ಕಲಶ, ಲಕ್ಷ್ಮೀನಾರಾಯಣರಿಗೆ ಒಂದು ಕಲಶ, ಸಾವಿತ್ರಿಗೆ ಒಂದು ಕಲಶ, ನವಗ್ರಹಗಳಿಗೆ ಒಂದು ಕಲಶ, ಸಮಸ್ತ ದೇವತೆಗಳಿಗೆ ಒಂದು ಕಲಶ ಹೀಗೆ ಒಟ್ಟು ಹದಿನೈದು ಕಲಶಗಳನ್ನು ಸ್ಥಾಪಿಸಬೇಕು. ನಿರಾಹಾರದಿಂದ ನಾಲ್ಕು ಯಾಮಗಳಲ್ಲಿಯೂ ಮಂಗಳಗೌರಿಯನ್ನು ಪೂಜಿಸಬೇಕು.

ಬೆಳಿಗ್ಗೆ ಸ್ನಾನಾನಂತರ ದೇವತೆಗಳಿಗೆ ಸಮಿತ್ತು, ದೂರ್ವ, ಆಜ್ಯ, ಪಾಯಸ, ಜೀರಿಗೆ, ಬೆಲ್ಲಗಳಿಂದ ಆಹುತಿ ಕೊಡಬೇಕು. ದೇವಿಯನ್ನು–

**ಸರ್ವಮಂಗಳಮಾಂಗಲ್ಯೇ ಶಿವೇ ಸರ್ವಾರ್ಥಸಾಧಕೇ।**
**ಶರಣ್ಯೇ ತ್ರಯಂಬಕೇ ದೇವೀ ನಾರಾಯಣೀ ನಮೋಸ್ತು ತೇ॥**

ಎಂಬ ಮಂತ್ರಗಳಿಂದ ಪಠಿಸಿ ಪ್ರಧಾನ ಹೋಮ ಮಾಡಿ ಪೂರ್ಣಾಹುತಿ ಕೊಡಬೇಕು. ಅನಂತರ ಹದಿನಾರು ಸುಮಂಗಲಿಯರಿಗೆ ಬಾಗಿನ ಕೊಡುವುದು ಮತ್ತು ಹದಿನಾರು ದೀಪಗಳನ್ನು ದಾನಮಾಡುವುದು, ಸುವಾಸಿನೀ ಪೂಜೆ, ದಂಪತಿ ಪೂಜೆ, ಗೋದಾನ ಮಾಡಿ ಬ್ರಾಹ್ಮಣ ಸಂತರ್ಪಣೆ ಮಾಡುವುದು. ಇದರಿಂದ ದೇವಿಯು ಸಂತುಷ್ಟಳಾಗಿ ಸಕಲ ಇಷ್ಟಾರ್ಥಗಳನ್ನು ಕೊಡುವಳು.

**-: ಉದ್ಯಾಪನಾವಿಧಿ ಸಂಪೂರ್ಣವು :-**

## ಶ್ರೀ ಮಂಗಳಗೌರೀ ಹಾಡು

ಪರಮ ಸಂತೋಷದಲ್ಲಿ ಪತಿಯ ಪಾದಕ್ಕೆರಗಿ। ವರದ ಗಣಪತಿಗೆ ವಂದನೆಯ ಮಾಡಿ। ಹರನರಸಿ ಮಂಗಳಗೌರೀದೇವೀ ಕಥೆಯ। ನೊರೆವೆ ಬಲ್ಲವಂತ ಸಜ್ಜನರು ಕೇಳಿ ॥1॥ ಕೌರವೇಶ್ವರನು ಕುಟಿಲದಿ ಜೂಜನಾಡಿ ಪುರವ ಬಿಟ್ಟೊರಡಿಸಿದರೆ ಪಾಂಡವರು ಅಡವಿಲಿ ವನವಾಸವನಾಚರಿಸುತ ದಿನವ ಕಳೆಯುತ್ತಿದ್ದರು. ಹರಿಯ ಧ್ಯಾನದಿಂದ॥2॥

ಒಂದು ದಿನ ಹರಿಯು ಕಾಮ್ಯಕ ವನಕೆ ನಡೆತರಲು। ಬಂದವರೆದುರಿಗೆ ಧೌಮ್ಯ ಮುನಿಸಹಿತಲೆ॥ ಬಂದು ಪಾಂಡವರು ಮುಯ್ಯಿಕ್ಕಿದರು ಹರಿಪಾದ। ದ್ವಂದ್ವದಲಿ। ದ್ರೌಪದೀದೇವಿ ಸಹಿತ ॥3॥ ನಾರಾಯಣ ತಾನು ನಗುತ ದ್ರೌಪದಿಗೆ। ಹೇಳಿದನು ಪೂರ್ವಜನ್ಮದ ಕರ್ಮವ ಮಾಡಿ ಅನುಭವಿಸಿದಲ್ಲದೆ ಬಿಡದು। ಚಿಂತಿಸಬೇಡವೆನ್ನುತಿದ್ದನು ॥4॥

ಧರೆಯೊಳಗೆ ಉತ್ತಮ ವ್ರತವು ಯಾವುದು ಎಂದು। ನರಹರಿಯು ತನ್ನೊಳಗೆ ತಾನೇ ತಿಳಿದು। ಹರನರಸಿ ಮಂಗಳಗೌರೀದೇವಿಯ ವ್ರತವಾಚರಿಸೆ ನಿಮ್ಮ ರಾಜ್ಯ ಸಾಧ್ಯವಹುದು ॥5॥ ಶ್ರಾವಣ ಮಾಸದಲಿ ಐದು ಮಂಗಳವಾರ ಈ ವ್ರತವು ಐದು ವರುಷವಾಚರಿಸಲು। ಯಾರು ಮಾಡಿದರು ಮನಸಿನ ಸಿದ್ಧಿ ಹೌದೆಂದು ಭಾಮೆ ದ್ರೌಪದಿಗೆ ಹರಿ ನುಡಿದನಾಗ ॥6॥

ಯಾರು ಮಾಡಿದರು ಈ ವ್ರತದ ಮಹಿಮೆಗಳೇನು। ಏನು ಫಲವೆಂದು ದ್ರೌಪದಿ ಕೇಳಲು॥ ನಾನು ಹೇಳುವೆನು ಕೇಳು॥ ಮುನ್ನ ಕರ್ನಾಟಕ ದೇಶದೊಳಗೊಬ್ಬ ದೊರೆ ಇರುತ್ತಿದ್ದನು॥7॥ ರನ್ನೆ ಕೇಳು ಶ್ರೀಪಾದನೆಂಬೊನಾಮದಲಿ। ಸುವರ್ನಾವತಿಯೆಂಬೊ ಪಟ್ಟಣದಲ್ಲಿ। ತನ್ನ ವಲ್ಲಭೆ ಕನಕ ಮಂಜುಳಸಹಿತಲೆ। ಚೆನ್ನಾಗಿ ಧರೆಯ ಪಾಲಿಸುತ್ತಿದ್ದನು ॥8॥

ಮಕ್ಕಳಿಲ್ಲದ ಅವನು ಮನದ ಸಂತಾಪದಲಿ| ಬತ್ತಿದಾ ಸಸಿಗೆ ನೀರಿಲ್ಲದಂತೆ|| ಬತ್ತಿದಾ ಕೊಳದಂತೆ ಮನದಲ್ಲಿ ಮರುಗುತ್ತ ಮುಕ್ಕಣ್ಣ ಹರನ ಧ್ಯಾನದಲ್ಲಿದ್ದರು ||9|| ಪರಮ ಹರಿಭಕ್ತರು ತನಯರಿಲ್ಲದೆ ಅವರು| ಮೃಡನ ಪೂಜಿಸುತ್ತಿರಲು ಅನುಗಾಲವು|| ಹರ ತನ್ನ ಭಕ್ತನ ಮನದ ಚಿಂತೆಯ ತಿಳಿದು । ತಿರುಕನಂದದಲಿ ಭಿಕ್ಷೆಗೆ ಬಂದನು ||10||

ಬಂದವನ ಕಾಣುತ್ತ ಕನಕಮಂಜುಳಿ ಮುತ್ತು ತಂದು ಮೊರದೊಳಗೆ ಭಿಕ್ಷವ ನೀಡಲು || ಮಂದೆ ನಿಂತಿದ್ದಾಗ ಹರ ತಾನು ಮುಟ್ಟದೆ| ತಂದು ಈಶಾನ್ಯ| ಮೂಲೆಗೆ ಚೆಲ್ಲಿದ||11|| ಯಾವಾಗ ಬಂದರು ನೀಡುವಳು ಭಿಕ್ಷವನು| ಮಾರಹರ ಮುಟ್ಟದಲ್ಲಿಯೇ ಚೆಲ್ಲುವ|| ಏನು ಕಾರಣವೆಂದು ರಾಯ ಬಂದರೆ ಅವಳ ಭಾವವನು ಹೇಳಿದಳು ಚಿಂತೆಯಿಂದ ||12||

ನಾಳಿ ಭಿಕ್ಷವ ನೀಡು ನಾನು ನೋಡತಲಿಹೆನು| ಏನು ಕಾರಣವೆಂದು ಕೇಳು ಅವನ|| ಹೀಗೆ ಚಿಂತಿಸುವ ಕಳೆಯೆ ಮರುದಿನ| ಬಾಗಿಲಿಗೆ ಬಂದು ಭಿಕ್ಷಾಯೆಂದರೆ||13|| ಬಂದವನ ಕಾಣುತ್ತ ಕನಕಮಂಜುಳಿ ಮುತ್ತು ತಂದು ಮೊರದೊಳಗೆ ಭಿಕ್ಷವ ನೀಡಲು|| ಮನದ ಸಂಶಯವೇನು ಎಂದು ಕೇಳಿದರವನ| ತನಯರಿಲ್ಲದೋರ ಭಿಕ್ಷೆ ಮುಟ್ಟೆನೆಂದ ||14||

ಭಿಕ್ಷುಕನು ಆಡಿದ ಕಷ್ಟದಾ ನುಡಿ ಕೇಳಿ ಮಕ್ಕಳಿಲ್ಲದ ಜನ್ಮ ವ್ಯರ್ಥವೆಂದು ದುಃಖಿಸಿ ಸತಿಪತಿಗಳಿಬ್ಬರು ಬಂದು|| ಮುಕ್ಕಣ್ಣ ಹರನ ಚರಣಕ್ಕೆ ಬಿದ್ದರು ||15|| ಪರಮ ಭಕ್ತರ ಬಿಗಿದಪ್ಪಿ ತಕ್ಕೈಸಿ| ತನಯರಿಲ್ಲದೆ ಬಹಳನೊಂದೆ ಮಗನೆ । ನಿನಗೆ ಮಕ್ಕಳ ಫಲವಿಲ್ಲ ಹದಿನಾರು ವರುಷ । ಆಯುಷ್ಯದ ಮಗನ ಕೊಡುವೆನು ಎಂದನು ||16||

ಒಂದು ಫಲವನ್ನು ಕೊಟ್ಟು ನಂದೀಶ್ವರ ಹೋದ । ಮಂಜುಳೆಗೆ ಗರ್ಭಸ್ಥಿರವಾಯಿತಾಗ|| ಒಂಭತ್ತು ತಿಂಗಳು ಹಡೆದಳು ಭೂ ಮಂಡಲವನ್ನಾಳುವ ಹರಭಕ್ತನ ||17|| ಜ್ಯೋತಿಷ್ಕರಲಿ ಹೋಗಿ ಜಾತಕ ಬರೆಸಿದನು|| ಪ್ರೀತಿಯಿಂದಲೆ ನಾಮಕರಣ ಮಾಡಿ| ದೇವಪಾಲನು ತನ್ನ ತನಯನಿಗೆ| ಚಂದ್ರಶೇಖರನೆಂಬೊ ಹೆಸರು ಇಟ್ಟನಾಗ ||18||

ಆಡುವ ಬಾಲನ ನೋಡಿ ಹಿಗ್ಗುತ್ತಿರಲು । ಆದವು ಆರೇಳು ವರುಷದಲ್ಲಿ|| ಮಾಡಿ ಮುಂಜಿ ಸಕಲ ವಿದ್ಯೆಯನು ಕಲಿಸಿದರು|| ಆರೇಳು ವರುಷವಾಯಿತು ತನಯನಿಗೆ ||19|| ಹದಿನಾರು ವರುಷವಾಗಲು ಅವನಿಗೆ ತಾಯಿ–ತಂದೆ| ತಿಳಿದು ಸಂಕಟವು ಪರಿಹಾರವಾಗಲಿ| ಎನ್ನುತ ಮಾವನ ಕರೆಸಿ ಕಾಶಿಗೆ ಮಗನ ಕರೆದುಕೊಂಡು ಹೋಗೆಂದು ಒಪ್ಪಿಸಿದರು ||20||

ಸೋದರಳಿಯನ ಸಹಿತಾ ತಾ ಬಂದನು| ಗೊಂಡಾರಣ್ಯವೆಂಬ ಪುರ ಮಧ್ಯದಲ್ಲಿ| ಆ ದೇಶದ್ದೊರೆಯ ಮಂಡೋರಾಯನಪುರದ| ಹುಪ್ಪಿನ ತೋಟದಲ್ಲಿ ನಿಂದರವರು ಮಂಡೋರಾಯನ ಮಗಳು ಸಂಗಾತಿರೋಷಗೊಂಡು| ಒಂದು ದಿನ ಹುಪ್ಪಿನಾ ವನಕೆ

ಬರಲು। ಚಂದ್ರಶೇಖರನರಸಿ ಸೋಲು ಮುಡಿಗೆನುತಲೆ। ದುಂಡು ಮಲ್ಲಿಗೆ ಹುವ್ವ ಕೊಯ್ಯುತ್ತಿದ್ದಳು ||22||

ರಾಯನ ಮಗಳ ಸಂಗಾತ ಬಂದೋರೆಲ್ಲ। ಹುವ್ವ ಕೊಯ್ಯುವಾಗ ಒಬ್ಬಳು ಕೋಪಿಸಿ॥ ರಾಜ್ಯಾಧಿಪತಿಯ ಮಗಳೆಂದು ನೋಡದೆ॥ ಅವಳು ಬಹಳ ಕಷ್ಟದ ಮಾತು ನುಡಿದಳಾಗ ||23|| ನುಡಿದ ಮಾತನು ಕೇಳಿ ನಗುತ ಮನದಲಿ॥ ಮಂಗಳಗೌರೀ ದಯವುಂಟು ಎನಗೆ ಮಂದಮತಿ ನೀ ನುಡಿದರೇನಾಯಿತೆನಗೆ । ಬಂದ ವಿಪತ್ತುಗಳ ಜೈಸುವೆನೆಂದಳು ||24||

ಶ್ರಾವಣಮಾಸದಲ್ಲಿ ಐದು ಮಂಗಳವಾರ ನಾನು ಪೂಜಿಸಿ । ಪೂರ್ಣಾಯುಷ್ಯದ ಪತಿಯನು ಬೇಡುವೆನು ಹರನಲಿ ವರನೆಂದಳು ||25|| ಆ ಮಾತನಾಲೈಸಿ ಕೇಳಿದ ಸುಕುಮಾರ। ಮಾವಯ್ಯ ನೋಡೋ ಹೆಣ್ಣಿನ ಮಾತನು। ರೂಡಿಗೀಶ್ವರ ದಯೆಯುಂಟಾದರೆ ನಮಗೆ॥ ಈ ಹೆಣ್ಣು ನಮಗೆ ಆಗಬೇಕೆಂದು ನುಡಿದ ||26||

ಮಾಡಿಸಾವರಣೆಯು ಮಗಳ ಮದುವೆಗೆ ವರನು। ಹೇಳಿ ಕಳುಹಿಸಿದರೆ ದಿಬ್ಬಣದವರನು॥ ಸಾಗಿಬಂದರೆ ಕುಷ್ಠಿ ಸಹಿತ ಮಂಡೋಪುರದ। ಹುವ್ವಿನತೋಟದಲ್ಲಿ ನಿಂದರವರು ||27|| ಬಾಲಾಚಂದ್ರಮನಂತೆ ಹೊಳೆವ ಕುಮಾರನು ಇವನು ನಮಗೊಂದು ಘಳಿಗೆ ಎರವು। ಕೊಡಿರೆಂದು ದಿಬ್ಬಣದವರು ಮಾವನ । ಆಡಿದ ಮಾತಿಗೆ ನಕ್ಕು ಮಾವ ||28||

ಹೊನ್ನು ಆಣೆಬೆಳ್ಳಿ ಬಂಗಾರ ಎರವುಂಟು। ಚಿನ್ನಬೆಳ್ಳಿಯು ಮುಂತಾಗಿ ಉಂಟು॥ ಕನ್ನಿಕೆಗೆ ವರನು ಎರವ ಕೇಳುವರ । ಕಣ್ಣಲ್ಲಿ ನಾಕಾಣೆ ಇಂತೆಂದ ಮಾವ ||29|| ಕಾಲವು ಒದಗೀ ಹೊತ್ತಿಗ್ಧದಿನಾರು ವರುಷ ನೋಡಲಾರವೆಂದು ಮನದೊಳರಿತು॥ ಯಾವ ಪುಣ್ಯದಲ್ಲಿ ಬದುಕಿದರೆ ಸಾಕು ಮದುವೆ ಆಗು ಹೋಗೆಂದು ಕಳಿಸಿದ ಮಾವನು ||30||

ಬೃಹಸ್ಪತಿಯ ಕರೆಸಿ ನಕ್ಷತ್ರಾವನೆ ನೋಡಿ। ಮದುವೆಯ ಲಗ್ನ ನಿಶ್ಚಯ ಮಾಡಿ। ಆ ಕುಷ್ಠಿಯ ಬಚ್ಚಿಟ್ಟು ಸುಕುಮಾರಗೆರೆದರು । ಧಾರೆಯಾರರಿಯದೆ ||31|| ಮಾಣಿಕದ ಗಿಂಡಿಲಿ ಭಾಗಿರಥಿ ತುಂಬಿ॥ ಪ್ರಾಣದೊಲ್ಲಭೆ ಸಹಿತ ಮಂಗಳಧಾರೆ || ಭಾಗ್ಯದಲ್ಲಿ ಎರೆದ ವಿನಯದಲಿ ಮಂಡೋರಾಯ। ದಾನಧರ್ಮದಲಿ ದಣಿಸಿದ ವಿಪ್ರರ ||32||

ಮಂಗಳಗೌರಿಯು ಮುಂದೆ ಗೃಹದೊಳು ಸಂಗಾತಲುಂಡು ಇಬ್ಬರು ಮಲಗಿರೆ। ಚಂದ್ರಶೇಖರನು ಸ್ವಪ್ನದಿಂದ ತನ್ನ । ಹೆಂಡತಿಯ ಕೂಡೆ ನುಡಿದ ವಿನಯದಿ ||33|| ಗಂಡನ್ಹೇಳಿದ ಮಾತು ಕೇಳಿ ಲಡ್ಡಿಗೆ ತುಪ್ಪ ತಂದು ಬಟ್ಟಲವಳಗೆ । ತಂದು ಇರಿಸಿದಳು ದೇವರ ಮನೆಯಾಲಿ ||34||

ಮತ್ತೆ ಮಲಗಿರುವಾಗ ಘಟಸರ್ಪ ಮಂಚದ ಬಳಿಗೆ ಬಂದಿತು ಆ ಸಮಯದಲ್ಲಿ॥ ಹರನರಸಿ ಮಂಗಳಗೌರಿಯನೆ ಪೂಜಿಸಿ। ಶಿರಸಿನಲಿ ತಂದು ಅಕ್ಷತೆ ತಳಿದು ||35|| ತಳಿದ

ಅಕ್ಷತೆಯು ಸರ್ಪದ ಮೇಲೆ ಬೀಳಲು। ಅದರಾಯುಷ್ಯವು ಕ್ಷೀಣವಾಯಿತು।। ಹರನರಸಿ ಮಂಗಳಗೌರಿಯ ದಯದಿಂದ। ಚಿರಂಜೀವಿ ಆಯ್ತು ಕೇಳೆಂದು ಹರಿಯು ॥36॥

ಆಗ ಕಂಡಳು ಫಣಿಯ ನೋಡಿ ಬೆರಗಾಗುತ್ತ। ಏನು ಕಾರಣ ಬಳಿಗೆ ಬಂದಿತೆಂದು । ಶೀಘ್ರದಲಿ ತಂದು ಕಲಶವ ತುಂಬಿ ಕಂಚುಕ। ಬಾಯಿ ಕಟ್ಟಿರಿಸಿ ಮಲಗಿದಳು ಹರುಷದಿ ॥37॥ ಆ ಹೊತ್ತಿನಿರುಳಲ್ಲಿ ಸ್ತ್ರೀಪುರುಷರೊಂದಾಗಿ। ಬಹಳ ಸಂತೋಷದಲಿರುತಿರ್ದರು ಆ ಇರುಳು ಕಳೆದು ಬೆಳಗಾಗೆ ಮಾವನ ಕಡೆ। ಯಾರಿಗ್ಹೇಳದೆ ಕಾಶಿಗ್ಹೊರಟ್ಹೋದರು ॥38॥

ನಾರಾಯಣ ಭಕ್ತ ಹೋದ ಕಾಶಿಗೆ ಅತ್ತ ಯಾರು ಅರಿಯರು ಅರುಣ ಉದಯದಲಿ॥ ಆ ಕುಷ್ಠಿಯ ತಂದು ಹಸೆಯ ಮೇಲೆ ಕುಳ್ಳಿರಿಸಿ। ಭಾಮೆಯನು ಹಸೆಗೆ ಬಾರೆಂದರಾಗ॥39॥ ಬಂದು ಕಂಡಳು ಆಗ ಬಿಳಿಮಯ್ಯನು ತನ್ನ ಗಂಡನಲ್ಲಾವೆಂದು ಮನದಲರಿತು। ಹಿಂದಕ್ಕೆ ಹೋಗಿ ಹೇಳಿದಳು ಒಂದು ವರುಷವು॥ ಗಂಡನಲ್ಲದ ವ್ರತವು ತನಗೆಂದಳು ॥40॥

ತಂದೆ ತಾಯನು ಕರೆದು ಹೇಳಿದಳು ನೀವ್ ಕೊಟ್ಟ। ಬಾಲಪ್ರಯದ ಗಂಡನಲ್ಲ ಇವನು । ಏನು ॥ ಕುಟಿಲವೋ ಕಾಣೆ ತಿಳಿಯಬಾರದಿಂದು॥ ಸಾಗಿಸಿ ಕಳುಹಿಸಿ ದಿಬ್ಬಣದವರನು ॥41॥ ತಂದೆಯನು ಕರೆದು ಹೇಳಿದಳು ಒಂದು ವರುಷವು ಅನ್ನ ಛತ್ರವನು ॥ ತಂದೆ ನೀ ಮಾಡಿಸೋ ಕೈವೀಳ್ಯವನು ಚೆಂದದಲಿ ನಾಕೊಟ್ಟು ಗುರುತು ಹೇಳುವೆನು। ಹಾಗೆಂದು ಕೈವೀಳ್ಯವನು ಕೊಡುತ್ತಿದ್ದಳು ॥42॥

ನಾಲ್ಕು ಕಡೆಯಲ್ಲಿ ದಾರಿಮಾರ್ಗದ ಒಳಗೆ। ಹೋಗಿ ಬರುವವರು ಅನ್ನವನುಣ್ಣುವ್ರದು ॥ ರಾಯರ ಮಗಳ ಕೈವೀಳ್ಯವನ ತಕ್ಕೊಂಡು। ಹೋಗೋದು ಎಂದು ನೇಮಿಸಿದರಾಗ ॥43॥ ಆಳು ಭಟರನು ಅಲ್ಲಲ್ಲಿಗಿರಿಸಿದಳಿದುದು। ಮೀರಿ ಹೋದರೇನು ತಡೆದು ನೀವು ॥ ಬ್ಯಾಗದಲಿ ಬಂದು ಸುದ್ದಿ ಹೇಳಿ ಎನುತಲೆ ಈ ಬಗೆಯಲಾರು ತಿಂಗಳು ಕಳೆದರು. ।44॥

ಭಾಗೀರಥಿಗ್ಹೋಗಿ ಬ್ಯಾಗ ಸ್ನಾನವ ಮಾಡಿ। ಆರೇಳು ತಿಂಗಳಿಗೆ ಬಂದವರು॥ ಕಾವಡಿಯ ಸಹಿತ ತಕ್ಕೊಂಡು ಮಂಡೋಪುರದ । ಊರಬಾಗಿಲಿಗೆ ಬಂದರು ಇಬ್ಬರು ॥45॥ ಕಾಣುತ್ತ ಚಾರರವರು ಬ್ಯಾಗ ಬಂದೇಳಿದರು। ಬಾ ಎಂದು ಕರೆದವರೆಲ್ಲರನು॥ ಬ್ಯಾಗದಲಿ ಮನ್ನಿಸಿ ಮನೆಗೆ ಕರೆತಂದವರ। ವಾರಿಜಾಮುಖಿ ನೋಡಿ ತಿಳಿದಳಾಗ ॥46॥

ತಂದೆಯನು ಕರೆದು ಹೇಳಿದಳು । ಅಂದು ಈತನಿಗೆ ಧಾರೆಯನೆರೆದಿರಿ ನಂಬಿಕೆಯು ಏನೆಂದು ಕೇಳಿದರೊಳಗಿಂದ ॥ ತಂದು ಬಿಚ್ಚಿದಳು ಕಲಶವ ಸಭೆಯಲ್ಲಿ ॥47॥ ತೆಗೆದು ನೋಡಿದರೆ ಆ ಸರ್ಪ ಕಂಠಮಾಲೆ। ಸರವಾಗಿ ಇರಲು ಅಲ್ಲಿದ್ದ ಜನರು ಹರಸಿ ಕೊರಳಿಗೆ ಹಾಕಿ ಸಂತೋಷದಲಿ। ಮುತ್ತೈದೆತನವನು ಪಡೆಯೆಂದರು ॥48॥

ನಿನ್ನ ಗುರುತೇನೆಂದು ಕೇಳಿದರೆ ಕಾಶಿಗೆ । ನನ್ನ ಮಾವನ ಕೂಡ ಹೋಗುತ್ತಿದ್ದೆ। ನಿಮ್ಮ ಬೀಗನು ತನ್ನ ಮಗನು ಕುಷ್ಠಿಯು । ಎಂದು ನಮ್ಮ ಕರೆತಂದು ಧಾರೆಯನೆರೆಸಿದ ॥49॥ ಲಡ್ಡಿಗೀತಿಂದ ಬಟ್ಟಲು ತಂದರೊಳ್ಗಿನಿಂದ ಮುದ್ರೆ ಉಂಗುರವು ತೋರಿಸಿ ಜನರಿಗೆ॥ ಪ್ರಜ್ವಲಿತವಾದ ಮುದ್ರೆಯ ಮ್ಯಾಲೆ । ಚಂದ್ರಶೇಖರನೆಂಬೋ ಹೆಸರು ಕಂಡರಾಗ ॥50॥

ಮಂಡೋರಾಯನು ತನ್ನ ಮಗಳ ತಕ್ಕೈಸಿದನು। ಇಂದು ತನ್ನ ಕುಲಕೆ ಕೀರ್ತಿಯನು ತಂದೆ ॥ ಗಂಡನೇಳಿದ ಮಾತು ಮೀರದೆ ಇರುವೆಯೆಂದು ಚಂದದಲಿ ಮಗಳ ಮುದ್ದಾಡುತ್ತಿದ್ದ ॥51॥ ಹೀಗೆ ಒಂದೆರೆಡೊರುಷ ಸ್ತ್ರೀಪುರುಷರೊಂದು । ಬಹಳ ಸಂತೋಷದಲಿ ಇರುತಿರ್ದರು॥ ತಾಯಿ ತಂದೆಯ ನೆನೆದು ಹೋಗಬೇಕೆನ್ನುತಲಿ। ಮಾವನ ಕೂಡೆ ಹೇಳಿದ ವಿನಯದಿ ॥52॥

ಸೋದರಮಾವ ನಮ್ಮೂರಿಗ್ಹೋಗೋಣೆನ್ನು । ತಾಯಿ ತಂದೆ ನೋಡಬೇಕೆಂದು ಆನೆ ಕುದುರೆ ಮಂದಿ ದಳಸಹಿತ ಅಳಿಯ ಕುಮಾರಿಯನೆ ಕಳುಹಿಸಿ ಚಿಂತಿಸುತಲಿದ್ದ ॥53॥ ದಾರಿ ಮಾರ್ಗದಲ್ಲಿ ಬರುವಾಗ ಶ್ರಾವಣ ಮಾಸ ಆಗ ಬಂದಿತು ತನ್ನ ಮನದಲರಿತು॥ ಹೇಳಿದಳು ಪತಿಯೊಡನೆ ನಗುತ ಸಂತೋಷದಲಿ । ಮಾಡಬೇಕಲ್ಲ ಗೌರೀವ್ರತವನು ॥54॥

ದಾರಿಲಿ ವ್ರತವನು ಮಾಡಬಾರದು ಕೇಳು ॥ ಊರಿಗ್ಹೋದಮ್ಯಾಲೆ ಮಾಡೆಂದರು॥ ಕೇಳು ಕಿರಿಮಯ್ಯ ಒಂದು ಘಳಿಗೆ ತಡವಿಲ್ಲ ಬಾಲ್ಯದಲಿ ಬಿಡದ ಈ ವ್ರತ ನಿಲ್ಲಿಸಲಿಲ್ಲ ॥55॥ ಗಂಗೆಯಾ ತೀರದಲಿ ಮಿಂದು ಮಡಿಯನುಟ್ಟು ಚಂದ್ರಶೇಖರನರಸಿಯು ಭಕ್ತಿಯಿಂದ ॥ ಗಂಧಾಕ್ಷತೆ ಪುಷ್ಪ ದೀಪ ಧೂಪಗಳಿಂದ ಮಂಗಳಾರತಿಯನೆತ್ತಿದರ್ ಹರುಷದಿ ॥56॥

ಹರನರಸಿ ಮಂಗಳಗೌರಿ ನೆಲಸಿದ ತಾವು। ಮಣಿಪುರವು ಎಂಬೋ ಪಟ್ಟಣವಾಯಿತು॥ ದೊರೆ ಮಕ್ಕಳುಂಡು ಕೈತೊಳೆದು ತಮ್ಮಯ್ಯನಪುರದ ಸಮೀಪಕೆ ಬಂದವರು ॥57॥ ಹರನ ವರದಲಿ ಕೊಟ್ಟ ತನಯನಾ ಮಾತುಳದ ಕೈಗೆ ಕೊಟ್ಟಾಗ ಮಗನು ಏನಾದನೋ ॥ ಎನುತ ತಾಯಿ–ತಂದೆ ಮರುಗುತ್ತಿದ್ದರೆ ನಿಮ್ಮ ಮಗ ಬಂದನು ಎಂದು ಹೇಳಿದರು ಬಂದು ॥58॥

ಹೇಳಿದ ಮಾತನು ಕೇಳಿ ಸಂತೋಷದಲಿ ರಾಣಿಯ ಬಳಿ ಹೇಳಿ ಕಳುಹಿಸಿದರೆ॥ ರಾಣಿವಾಸವ ಬಿಟ್ಟು ಸಂತೋಷದಲಿ ಸುತನ । ನೋಡಬೇಕೆಂಬೊ ತವಕದಲ್ಲಿದ್ದರು ॥59॥ ಶುಭವಾರ್ತೆ ಹೇಳಿದ ಚರರ ಮನ್ನಿಸಿ ಭೂಪ। ಉಡುಗೊರೆಯು ಆಭರಣ ತರಿಸಿಕೊಟ್ಟು ॥ ಕಲಶ ಕನ್ನಡಿಯ ತೋರಣ ರಚಿಸಿ ಪುರದೊಳಗೆ । ತನಯನ ಕಾಣಲುತ್ಸಾಹದಲ್ಹೊರಟ ॥60॥

ದೂರದಲಿ ತನಯನ ಕಾಣುತಲಿ ಸಂಭ್ರಮದಿ। ಏನು ಕಾರಣ ಹೇಗೆ ತನ್ನ ಮೇಲೆ॥ ಕಾಲವಾದ ಮಗನ ಬದುಕಿಸಿ ಕರೆತಂದು ಯಾರು ಸರಿಯಲ್ಲ ಪುಣ್ಯಕ್ಕೆ ಜಗದೊಳು ॥61॥ ಶುಭ ಲಗ್ನದಲಿ ಮಗನು ಪುರವ ಹೊಕ್ಕನು ಎಂಬೀ। ಪುರದ ಜನರೆಲ್ಲ ಸಂತೋಷದಿಂದ ಅರಮನೆಗೆ। ಬಂದು ತಾಯಿ ತಂದೆ ಚರಣಕ್ಕೆ ಪಳಿವಂಟರಾಗ ಸೊಸೆ ಮಗ ಸಹಿತಲಿ ॥62॥

ಪಳಿವಂಟೆ ಸೊಸೆ ಮಗನ ಬಿಗಿದಪ್ಪಿ ತಕ್ಕೈಸಿ। ಮಗಳೇ ನೀನ್ಯಾವ ವ್ರತವನು ಮಾಡಿದೆ। ಏನಂತ ಕೇಳಿದರೆ ನಾನೇನರಿಯೇ ಪುರುಷನ ಚರಣವೇ ಗತಿಯೆಂದು ಇರುತ್ತಿದ್ದೆನು ॥63॥ ಮಂಜುಳೆಯು ತಮ್ಮನ ಬಿಗಿದಪ್ಪಿ ತಕ್ಕೈಸಿ। ತಂದಿತ್ತೆ ಹೋದ ಮಗನನ್ನು ಬದುಕಿಸಿ॥ ಇಂದುನೀ ಧರೆಯೊಳಗೆ ಮಾಡಿದುಪಕಾರವನು ॥ ಎಂದಿಗಾದರೂ ನಿನ್ನ ಮರೆಯಬಹುದೇ ॥64॥

ಅಕ್ಕಯ್ಯ ನಿನ್ನ ಹೊಟ್ಟೆ ಪುಣ್ಯದಲ್ಲಿ ನಿನ್ನ ಪುತ್ರ ಬದುಕಿದನು ಕೇಳಮ್ಮ ತಾಯಿ। ಅಲ್ಪದಾಯುಷ್ಯ ಹೋಗಿ ಚಿರಂಜೀವಿ ಯಾಯ್ತಿವನ। ಮುತ್ತೈದೆತನ ಉಂಟಾಯಿತು ॥65॥ ಸೃಷ್ಟಿಗೀಶ್ವರನರಸಿ ಗೌರಿಯನೆ ಪೂಜಿಸಿ ಮುತ್ತೈದೆ ತನವನು ಪಡೆದಳವಳು ಮುತ್ತೈದೆತನವನು ಪುತ್ರಸಂತಾನವನು ಕೊಟ್ಟು ರಕ್ಷಿಸುವ ಮಂಗಳಗೌರಿಗೆ ॥66॥

## ಮಂಗಳ - ರಾಗ ನೋಟ್

ವರಗೌರಿ ಪಾಲಿಸು । ಧರೆಯೊಳು ಎಮ್ಮನು ॥ಪ॥ ಸಾರಿ ಬೇಡಿಕೊಂಬೆವೀಗ। ಭರದೊಳು । ನಿನ್ನ ॥ಅ–ಪ॥ ದುಷ್ಟನಾಶಿನೀ ಸೃಷ್ಟಿಪೋಷಣೀ ದೀನ ಪೋಷಕಳೆ। ಕ್ಷೋಣಿಯೊಳ್ ಕೃಷ್ಣೇಂದ್ರನನ್ನು । ಸಲಹು ಮಾತೆಯೆ ॥2॥ ಧರೆಯೊಳು ಕಲ್ಯಾಣ ಪುರಿಯೊಳು ವಾಸಿಪ। ವರನನು ಪೊರೆ ನೀ ಬೇಗ ಸಾರಸನೇತ್ರೆ॥

ಮಂಗಳಗೌರೀ ಹಾಡು ಸಂಪೂರ್ಣವು





# ಶ್ರೀ ವರಮಹಾಲಕ್ಷ್ಮೀ ವ್ರತ

## ಮೊದಲಮಾತು

ಶ್ರಾವಣಮಾಸದ ಶುಕ್ಲಪಕ್ಷದಲ್ಲಿ (ಹುಣ್ಣಿಮೆಯ ಮೊದಲು) ಬರುವ ಕೊನೆಯ ಶುಕ್ರವಾರವನ್ನು ವರಮಹಾಲಕ್ಷ್ಮೀ ವ್ರತವನ್ನಾಗಿ ನಮ್ಮ ಹಿರಿಯರು ಆಚರಿಸುತ್ತಾ ಬಂದಿದ್ದಾರೆ. ಭವಿಷ್ಯೋತ್ತರ ಪುರಾಣದ ಪೂಜಾಕಲ್ಪದಲ್ಲಿ ಹೇಳಲ್ಪಟ್ಟ ಪೂಜಾವಿಧಾನವನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಸೌಭಾಗ್ಯ, ಸಂಪತ್ತುಗಳ ಅಭಿವೃದ್ಧಿಗಾಗಿ ಲಕ್ಷ್ಮೀಪೂಜೆ ಮಾಡುವುದು ಪ್ರಾಚೀನ ಸಂಪ್ರದಾಯವಾಗಿದೆ. ಯಥಾಶಕ್ತಿ ಕಾಲಗತಿಗನುಗುಣವಾಗಿ ಸಂಪ್ರದಾಯವನ್ನು ಬಿಡದೆ ವ್ರತ ಪೂಜಾ ವಿಧಾನವನ್ನನುಸರಿಸಿ ಕಥಾಶ್ರವಣವನ್ನು ಆಸ್ತಿಕ ಮಹಾಶಯರು ಭಕ್ತಿಯಿಂದ ಆಚರಿಸಿದರೆ ಮಹಾಲಕ್ಷ್ಮಿಯ ಅನುಗ್ರಹವಾಗುವುದರಲ್ಲಿ ಸಂದೇಹವಿಲ್ಲ.

## ಪೂಜಾ ಸಿದ್ಧತೆಗಳು

ವರಮಹಾಲಕ್ಷ್ಮೀಪೂಜೆಗಾಗಿ ಈ ಸಿದ್ಧತೆಗಳನ್ನು ಮಾಡಿಕೊಳ್ಳಬೇಕು.

1. ಕಲಶಗಳು ಹಾಗೂ ಐದು ತೆಂಗಿನಕಾಯಿಗಳು
2. ಮಂಟಪಾಲಂಕಾರ ಸಾಮಗ್ರಿ–ಬಾಳೆಕಂಬ, ತೋರಣ ಇತ್ಯಾದಿ
3. ನೈವೇದ್ಯಕ್ಕಾಗಿ ಹಣ್ಣು (ಮುಖ್ಯವಾಗಿ ದಾಳಿಂಬೆ)
4. ಒಂಬತ್ತೆಳೆಯ ಹಸೀದಾರ
5. ಬಟ್ಟಡಿಕೆ, ಅರಿಶಿನಕೊಂಬು, ಪಂಚ ಪಲ್ಲವ ಹಾಗೂ ವೀಳೆದೆಲೆ
6. ವಾಯನದಾನಕ್ಕಾಗಿ ಎರಡು ತೆಂಗಿನಕಾಯಿ, ತಾಂಬೂಲ, ದಕ್ಷಿಣೆ, ಮುಚ್ಚಲು ಮುತ್ತುಗದ ಇಲ್ಲವೇ ಬಾಳೆಎಲೆ, ಮುತ್ತೈದೆಯರಿಗೆ ಬಳೆ, ಮಂಗಳದ್ರವ್ಯಗಳ ಬಾಗಿನ.

# ಶ್ರೀ ವರಮಹಾಲಕ್ಷ್ಮೀ ವ್ರತಕಲ್ಪ

## ಪೂರ್ವ ಪೂಜೆ

ಆಚಮ್ಯ|| ಕೇಶವಾಯ ಸ್ವಾಹಾ, ನಾರಾಯಣಾಯ ಸ್ವಾಹ|| (ಎರಡು ಸಲ ಆಚಮನ ಮಾಡಿ)

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ|
ಪ್ರಸನ್ನವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ||

'ಅಯಂ ಮುಹೂರ್ತಃ ಸುಮುಹೂರ್ತೋಸ್ತು ಇತಿ ಭವಂತೋ ಮಹಾಂತೋ ಅನುಗೃಹ್ಣಂತು' – ಎಂದು ವ್ರತಾಚರಣೆ ಮಾಡುವವರು ಹಿರಿಯರಲ್ಲಿ ಪ್ರಾರ್ಥಿಸಿ ಕೊಳ್ಳಬೇಕು.

'ಅಯಂ ಮುಹೂರ್ತಃ ಸುಮುಹೂರ್ತೋಽಸ್ತು' ಎಂದು ಹಿರಿಯರು ಹೇಳಿ ಅಕ್ಷತೆ ಹಾಕಿ ಆಶೀರ್ವದಿಸಬೇಕು.

(ಘಂಟಾನಾದ ಮಾಡಿ) ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಕ್ಷಸಾಂ| ಕುರ್ವೇ ಘಂಟಾರವಂ ತತ್ರ ದೇವತಾಹ್ವಾನ ಲಾಂಛನಂ || ಇತಿ ಘಂಟಾನಾದಂ ಕೃತ್ವಾ||

## ಪ್ರಾರ್ಥನಾ

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಂಘ್ರಿಯುಗ್ಮಂ ಸ್ಮರಾಮಿ|| ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ| ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ|| ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ| ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್| ಸ್ಮೃತೇ ಸಕಲ ಕಲ್ಯಾಣಭಾಜನಂ ಯತ್ರಜಾಯತೇ| ಪುರುಷಸ್ತಮಹಂ ನಿತ್ಯಂ ವ್ರಜಾಮಿ ಶರಣಂ ಹರಿಮ್||

ಸರ್ವದಾ ಸರ್ವ ಕಾರ್ಯೇಷು ನಾಸ್ತಿ ತೇಷಾಮ ಮಂಗಲಂ| ಯೇಷಾಂ ಹೃದಿಸ್ಥೋ ಭಗವಾನ್ ಮಂಗಳಾಯತನೋ ಹರಿಃ| ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ| ಯೇಷಾಮಿಂದೀವರಶ್ಯಾಮೋ ಹೃದಯಸ್ಥೋ ಜನಾರ್ದನಃ|| ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಂ| ಲೋಕಾಭಿರಾಮಂ ಶ್ರೀರಾಮಂ ಭೂಯೋ ಭೂಯೋ ನಮಾಮ್ಯಹಮ್||

## ಗಣಪತಿ ಪ್ರಾರ್ಥನಾ

ಸೂಚನೆ : ಬೆಳ್ಳಿಯ ಗಣಪತಿಯ ಪ್ರತಿಮೆ ಅಥವಾ ದೂರ್ವಾಗಣಪತಿಯನ್ನು (ಗರಿಕೆಯನ್ನು ಗೋಮಯದಲ್ಲಿ ಸಿಕ್ಕಿಸಿದ್ದು) ವ್ರತವು ನಿರ್ವಿಘ್ನವಾಗಿ ನೆರವೇರಲೆಂದು ಪೂಜಿಸಬೇಕು. ನೈವೇದ್ಯಕ್ಕಾಗಿ ಪ್ರತ್ಯೇಕ ಬೆಲ್ಲ, ಬಾಳೆಯ ಹಣ್ಣು ತಾಂಬೂಲಗಳನ್ನು ತೆಗೆದಿರಿಸಿಕೊಳ್ಳಬೇಕು.



# ಶ್ರೀ ವರಮಹಾಲಕ್ಷ್ಮೀ ವ್ರತ

## ಮೊದಲಮಾತು

ಶ್ರಾವಣಮಾಸದ ಶುಕ್ಲಪಕ್ಷದಲ್ಲಿ (ಹುಣ್ಣಿಮೆಯ ಮೊದಲು) ಬರುವ ಕೊನೆಯ ಶುಕ್ರವಾರವನ್ನು ವರಮಹಾಲಕ್ಷ್ಮೀ ವ್ರತವನ್ನಾಗಿ ನಮ್ಮ ಹಿರಿಯರು ಆಚರಿಸುತ್ತಾ ಬಂದಿದ್ದಾರೆ. ಭವಿಷ್ಯೋತ್ತರ ಪುರಾಣದ ಪೂಜಾಕಲ್ಪದಲ್ಲಿ ಹೇಳಲ್ಪಟ್ಟ ಪೂಜಾವಿಧಾನವನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಸೌಭಾಗ್ಯ, ಸಂಪತ್ತುಗಳ ಅಭಿವೃದ್ಧಿಗಾಗಿ ಲಕ್ಷ್ಮೀಪೂಜೆ ಮಾಡುವುದು ಪ್ರಾಚೀನ ಸಂಪ್ರದಾಯವಾಗಿದೆ. ಯಥಾಶಕ್ತಿ ಕಾಲಗತಿಗನುಗುಣವಾಗಿ ಸಂಪ್ರದಾಯವನ್ನು ಬಿಡದೆ ವ್ರತ ಪೂಜಾ ವಿಧಾನವನ್ನನುಸರಿಸಿ ಕಥಾಶ್ರವಣವನ್ನು ಆಸ್ತಿಕ ಮಹಾಶಯರು ಭಕ್ತಿಯಿಂದ ಆಚರಿಸಿದರೆ ಮಹಾಲಕ್ಷ್ಮೀಯ ಅನುಗ್ರಹವಾಗುವುದರಲ್ಲಿ ಸಂದೇಹವಿಲ್ಲ.

## ಪೂಜಾ ಸಿದ್ಧತೆಗಳು

ವರಮಹಾಲಕ್ಷ್ಮೀಪೂಜೆಗಾಗಿ ಈ ಸಿದ್ಧತೆಗಳನ್ನು ಮಾಡಿಕೊಳ್ಳಬೇಕು.

1. ಕಲಶಗಳು ಹಾಗೂ ಐದು ತೆಂಗಿನಕಾಯಿಗಳು
2. ಮಂಟಪಾಲಂಕಾರ ಸಾಮಗ್ರಿ–ಬಾಳೆಕಂಬ, ತೋರಣ ಇತ್ಯಾದಿ
3. ನೈವೇದ್ಯಕ್ಕಾಗಿ ಹಣ್ಣು (ಮುಖ್ಯವಾಗಿ ದಾಳಿಂಬೆ)
4. ಒಂಬತ್ತೆಳೆಯ ಹಸೀದಾರ
5. ಬಟ್ಟಡಿಕೆ, ಅರಿಶಿನಕೊಂಬು, ಪಂಚ ಪಲ್ಲವ ಹಾಗೂ ವೀಳೆದೆಲೆ
6. ವಾಯನದಾನಕ್ಕಾಗಿ ಎರಡು ತೆಂಗಿನಕಾಯಿ, ತಾಂಬೂಲ, ದಕ್ಷಿಣೆ, ಮುಚ್ಚಲು ಮುತ್ತುಗದ ಇಲ್ಲವೇ ಬಾಳೆಎಲೆ, ಮುತ್ತೈದೆಯರಿಗೆ ಬಳೆ, ಮಂಗಳದ್ರವ್ಯಗಳ ಬಾಗಿನ.

# ಶ್ರೀ ವರಮಹಾಲಕ್ಷ್ಮೀ ವ್ರತಕಲ್ಪ

## ಪೂರ್ವ ಪೂಜೆ

ಆಚಮ್ಯ|| ಕೇಶವಾಯ ಸ್ವಾಹಾ, ನಾರಾಯಣಾಯ ಸ್ವಾಹ|| (ಎರಡು ಸಲ ಆಚಮನ ಮಾಡಿ)

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ।
ಪ್ರಸನ್ನವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ||

'ಅಯಂ ಮುಹೂರ್ತಃ ಸುಮುಹೂರ್ತೋಸ್ತು ಇತಿ ಭವಂತೋ ಮಹಾಂತೋ ಅನುಗೃಹ್ಣಂತು' – ಎಂದು ವ್ರತಾಚರಣೆ ಮಾಡುವವರು ಹಿರಿಯರಲ್ಲಿ ಪ್ರಾರ್ಥಿಸಿ ಕೊಳ್ಳಬೇಕು.

'ಅಯಂ ಮುಹೂರ್ತಃ ಸುಮುಹೂರ್ತೋಽಸ್ತು' ಎಂದು ಹಿರಿಯರು ಹೇಳಿ ಅಕ್ಷತೆ ಹಾಕಿ ಆಶೀರ್ವದಿಸಬೇಕು.

(ಘಂಟಾನಾದ ಮಾಡಿ) ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಕ್ಷಸಾಂ। ಕುರ್ವೇ ಘಂಟಾರವಂ ತತ್ರ ದೇವತಾಹ್ವಾನ ಲಾಂಛನಂ || ಇತಿ ಘಂಟಾನಾದಂ ಕೃತ್ವಾ||

## ಪ್ರಾರ್ಥನಾ

ತದೇವ ಲಗ್ನಂ ಸುದಿನಂ ತದೇವ ತಾರಾಬಲಂ ಚಂದ್ರಬಲಂ ತದೇವ ವಿದ್ಯಾಬಲಂ ದೈವಬಲಂ ತದೇವ ಲಕ್ಷ್ಮೀಪತೇ ತೇಂಘ್ರಿಯುಗ್ಮಂ ಸ್ಮರಾಮಿ|| ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ। ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ|| ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ। ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್। ಸ್ಮೃತೇ ಸಕಲ ಕಲ್ಯಾಣಭಾಜನಂ ಯತ್ರಜಾಯತೇ। ಪುರುಷಸ್ತಮಹಂ ನಿತ್ಯಂ ವ್ರಜಾಮಿ ಶರಣಂ ಹರಿಮ್||

ಸರ್ವದಾ ಸರ್ವ ಕಾರ್ಯೇಷು ನಾಸ್ತಿತೇಷಾಮ ಮಂಗಲಂ। ಯೇಷಾಂ ಹೃದಿಸ್ಥೋ ಭಗವಾನ್ ಮಂಗಳಾಯತನೋ ಹರಿಃ। ಲಾಭಸ್ತೇಷಾಂ ಜಯಸ್ತೇಷಾಂ ಕುತಸ್ತೇಷಾಂ ಪರಾಭವಃ। ಯೇಷಾಮಿಂದೀವರಶ್ಯಾಮೋ ಹೃದಯಸ್ಥೋಜನಾರ್ದನಃ|| ಆಪದಾಮಪಹರ್ತಾರಂ ದಾತಾರಂ ಸರ್ವಸಂಪದಾಂ। ಲೋಕಾಭಿರಾಮಂ ಶ್ರೀರಾಮಂ ಭೂಯೋ ಭೂಯೋ ನಮಾಮ್ಯಹಮ್||

## ಗಣಪತಿ ಪ್ರಾರ್ಥನಾ

ಸೂಚನೆ : ಬೆಳ್ಳಿಯ ಗಣಪತಿಯ ಪ್ರತಿಮೆ ಅಥವಾ ದೂರ್ವಾಗಣಪತಿಯನ್ನು (ಗರಿಕೆಯನ್ನು ಗೋಮಯದಲ್ಲಿ ಸಿಕ್ಕಿಸಿದ್ದು) ವ್ರತವು ನಿರ್ವಿಘ್ನವಾಗಿ ನೆರವೇರಲೆಂದು ಪೂಜಿಸಬೇಕು. ನೈವೇದ್ಯಕ್ಕಾಗಿ ಪ್ರತ್ಯೇಕ ಬೆಲ್ಲ, ಬಾಳೆಯ ಹಣ್ಣು ತಾಂಬೂಲಗಳನ್ನು ತೆಗೆದಿರಿಸಿಕೊಳ್ಳಬೇಕು.

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ॥
ಧೂಮಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ।
ವಕ್ರತುಂಡಃ ಶೂರ್ಪಕರ್ಣೋ ಹೇರಂಬಃ ಸ್ಕಂದಪೂರ್ವಜಃ॥
ಷೋಡಶೈತಾನಿ ನಾಮಾನಿ ಯಃ ಪಠೇತ್ ಶೃಣುಯಾದಪಿ।
ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ॥
ಸಂಗ್ರಾಮೇ ಸರ್ವಕಾರ್ಯೇಷು ವಿಘ್ನ ಸ್ತಸ್ಯ ನ ಜಾಯತೇ।
ಅಭೀಪ್ಸಿತಾರ್ಥ ಸಿದ್ಧ್ಯರ್ಥಂ ಪೂಜಿತೋಯಸ್ಸುರೈರಪಿ॥
ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ।
ಓಂ ದೈವೀ ಗಾಯತ್ರೀ ಛಂದಃ। ಪ್ರಾಣಾಯಾಮೇ ವಿನಿಯೋಗಃ॥

ಓಂ ಭೂಃ। ಓಂ ಭುವಃ। ಓಂ ಸುವಃ। ಓಂ ಮಹಃ। ಓಂ ಜನಃ। ಓಂ ತಪಃ। ಓಗ್ಂ ಸತ್ಯಂ। ಓಂ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ। ಧಿಯೋ ಯೋ ನಃ ಪ್ರಚೋದಯಾತ್। ಓಮಾಪೋ ಜ್ಯೋತಿರಸೋ ಅಮೃತಂ ಬ್ರಹ್ಮ ಭೂರ್ಭುವಸ್ಸುರೋಮ್॥

## ಸಂಕಲ್ಪ

ಮಮ ಉಪಾತ್ತ ಸಮಸ್ತದುರಿತಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಶುಭೇ ಶೋಭನೇ ಮುಹೂರ್ತೇ, ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ, ಕಲಿಯುಗೇ, ಪ್ರಥಮಪಾದೇ, ಜಂಬೂದ್ವೀಪೇ, ದಂಡಕಾರಣ್ಯೇ, ಗೋದಾವರ್ಯಾಃ ದಕ್ಷಿಣೇತೀರೇ ಶಾಲೀವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಚಾಂದ್ರಮಾನೇನ ವ್ಯಾವಹಾರಿಕೆ ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೆ ...... ಸಂವತ್ಸರೇ ...... ಅಯನೇ ವರ್ಷಋತೌ ಶ್ರಾವಣಮಾಸೇ ಶುಕ್ಲಪಕ್ಷೇ.... ತಿಥೌಭಾರ್ಗವ ವಾಸರ ಯುಕ್ತಾಯಾಂ ಶುಭತಿಥೌ ಅಸ್ಮಾಕಂ ಸಹಕುಟುಂಬಾನಾಂ ಕ್ಷೇಮಸ್ಥೈರ್ಯ ಧೈರ್ಯ ವಿಜಯ ಆಯುರಾರೋಗ್ಯ ಸಿದ್ಧ್ಯರ್ಥಂ, ಮನೋವಾಂಛಾ ಸಿದ್ಧ್ಯರ್ಥಂ, ಸಮಸ್ತದುರಿತೋಪಶಾಂತ್ಯರ್ಥಂ, ಸಮಸ್ತ ಮಂಗಳಾ ವಾಪ್ತ್ಯರ್ಥಂ, ಧರ್ಮಾರ್ಥಕಾಮ ಮೋಕ್ಷಾದಿ ಚತುರ್ವಿಧ ಫಲ ಪುರುಷಾರ್ಥ ಸಿದ್ಧ್ಯರ್ಥಂ ಸತ್ಸಂತಾನ ಸೌಭಾಗ್ಯ ಫಲಾವಾಪ್ತ್ಯರ್ಥಂ ವರ್ಷೇ ವರ್ಷೇ ಪ್ರಯುಕ್ತಾಂ ವರಲಕ್ಷ್ಮೀಮುದ್ದಿಶ್ಯ ವರಲಕ್ಷ್ಮೀಪ್ರೀತ್ಯರ್ಥಂ ಭವಿಷ್ಯೋತ್ತರ ಪುರಾಣಕಲ್ಪೋಕ್ತ ಪ್ರಕಾರೇಣ ಯಾವಚ್ಛಕ್ತಿ ಧ್ಯಾನ ಆವಾಹನಾದಿ ಷೋಡಶೋಪಚಾರ ಪೂಜಾಂ ಕರಿಷ್ಯೇ॥

(ಮಂತ್ರಾಕ್ಷತೆ ನೀರನ್ನು ಅರ್ಘ್ಯ ಪಾತ್ರೆಗೆ ಬಿಡಿ)

ತದಂಗತ್ವೇನ ಕಲಶಪೂಜಾಂ ಕರಿಷ್ಯೇ॥

**ಕಲಶಪೂಜಾ**

(ಕಲಶವನ್ನು ಗಂಧ, ಅಕ್ಷತೆಗಳಿಂದ ಅಲಂಕರಿಸಿ, ಬಟ್ಟಡಿಕೆ, ಅರಿಶಿನ ಕೊಂಬು, ದಕ್ಷಿಣೆ, ಹೂಗಳನ್ನು ಅದರಲ್ಲಿ ಹಾಕಿ, ನೀರನ್ನು ತುಂಬಿಸಬೇಕು. ಅದರ ಮೇಲೆ ಬಲಹಸ್ತವನ್ನಿಟ್ಟು ಗಂಗಾದಿ ಸಕಲ ತೀರ್ಥಗಳನ್ನು ಹೀಗೆ ಆವಾಹಿಸಬೇಕು).

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಸ್ಸಮಾಶ್ರಿತಃ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ।
ಕುಕ್ಷೌತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ।
ಋಗ್ವೇದೋಽಥಯಜುರ್ವೇದಸ್ಸಾಮವೇದೋಹ್ಯಥರ್ವಣಃ।
ಅಂಗೈಶ್ಚ ಸಹಿತಾನಿತ್ಯಂ ಕಲಶಾಂಬು ಸಮಾಶ್ರಿತಾಃ॥
ಆಯಾಂತು ದೇವ ಪೂಜಾರ್ಥಂ ದುರಿತಕ್ಷಯ ಕಾರಕಾಃ।
ಗಂಗೇ ಚ ಯಮುನೇಚೈವ ಗೋದಾವರಿ ಸರಸ್ವತಿ।
ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು॥

ಮಂತ್ರ : ಆಪೋ ವಾ ಇದಗ್ಂ ಸರ್ವಂ। ವಿಶ್ವಾಭೂತಾನ್ಯಾಪಃ। ಪ್ರಾಣಾವಾ ಆಪಃ। ಪಶವ ಆಪೋನ್ನಮಾಪೋಽಮೃತಮಾಪಃ। ಸಮ್ರಾಡಾಪೋ ವಿರಾಡಾಪಸ್ಸ್ವರಾಡಾಪ-ಶ್ಛಂದಾಗ್ಂಸಿ ಆಪೋಜ್ಯೋತಿಗ್ಂಷಿ ಆಪೋಯಜೂಗ್ಂಷಿ ಆಪಸ್ಸತ್ಯಮಾಪಃ ಸರ್ವಾದೇವತಾ ಆಪೋ ಭೂರ್ಭುವಸ್ಸುವರಾಪ ಓಂ॥

(ಕಲಶೋದಕದಿಂದ ಪೂಜಾದ್ರವ್ಯಗಳನ್ನು ದೇವತಾ ಮಂಟಪವನ್ನು ತನ್ನನ್ನೂ ಪ್ರೋಕ್ಷಿಸಿಕೊಂಡು ಕೈಯಿಂದ ಎಲ್ಲಾ ಕಡೆ ಪ್ರೋಕ್ಷಿಸಬೇಕು).

**ಪೂಜಾಂಗತ್ವೇನ ಗಣಪತಿಪೂಜಾಂ ಕರಿಷ್ಯೇ॥**

ಗಣಾನಾಂತ್ವಾ ಗಣಪತಿಗ್ಂ ಹವಾಮಹೇ। ಕವಿಂ ಕವೀನಾಂ ಮುಪವಶ್ರವಸ್ತಮಂ ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಶ್ಶೃಣ್ವನ್ನೂತಿಭಿಸ್ಸೀದಸಾದನಮ್॥ ಮಹಾಗಣಪತಿಂ ಧ್ಯಾಯಾಮಿ ಆವಾಹಯಾಮಿ॥ ಆಸನಂ ಸಮರ್ಪಯಾಮಿ॥ ಅರ್ಘ್ಯಂ ಸಮರ್ಪಯಾಮಿ। ಪಾದ್ಯಂ- ಆಚಮನೀಯಂ- ಸ್ನಾನಂ- ವಸ್ತ್ರಂ- ಅಕ್ಷತಾನ್- ಯಜ್ಞೋಪವೀತಂ- ಗಂಧಾನ್ ಸಮರ್ಪಯಾಮಿ॥

**(ಗಣಪತಿಗೆ ಪೂಜಿಸಬೇಕು)**

ಸುಮುಖಾಯ ನಮಃ। ಏಕದಂತಾಯ ನಮಃ। ಕಪಿಲಾಯ ನಮಃ। ಗಜಕರ್ಣಕಾಯ ನಮಃ। ಲಂಬೋದರಾಯ ನಮಃ। ವಿಕಟಾಯ ನಮಃ। ವಿಘ್ನರಾಜಾಯ ನಮಃ। ಗಣಾಧಿಪಾಯ ನಮಃ। ಧೂಮಕೇತವೇ ನಮಃ। ಗಣಾಧ್ಯಕ್ಷಾಯ ನಮಃ। ಫಾಲಚಂದ್ರಾಯ ನಮಃ। ಗಜಾನನಾಯ ನಮಃ। ವಕ್ರತುಂಡಾಯ ನಮಃ। ಶೂರ್ಪಕರ್ಣಾಯ ನಮಃ। ಹೇರಂಭಾಯ ನಮಃ। ಸ್ಕಂದಪೂರ್ವಜಾಯ ನಮಃ। ಮಹಾಗಣಪತಯೇ ನಮಃ।

ನಾನಾ ವಿಧ ಪರಿಮಳ ಪುಷ್ಪಾಣಿ ಸಮರ್ಪಯಾಮಿ।
ಧೂಪ-ದೀಪ-ನೈವೇದ್ಯಾನ್ ಸಮರ್ಪಯಾಮಿ॥

ಓಂ ಭೂರ್ಭುವಃ ಸ್ವಃ ತತ್ಸವಿತುರ್ವರೇಣ್ಯಂ। ಭರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್। ದೇವಸವಿತಃ ಪ್ರಸುವ, ಸತ್ಯಂತ್ವರ್ತೇನ ಪರಿಶಿಂಚಾಮಿ॥

(ಬೆಲ್ಲ, ಖರ್ಜೂರ, ಬಾಳೆಹಣ್ಣನ್ನು ಗಣಪತಿಗೆ ನೈವೇದ್ಯ ಮಾಡಿ ತೀರ್ಥ ಪ್ರೋಕ್ಷಿಸಬೇಕು).

ಪ್ರಾಣಾಪಾನ ವ್ಯಾನೋದಾನ ಸಮಾನಾಭ್ಯಾಂ ನಮಃ। ಶ್ರೀಮನ್ ಮಹಾಗಣಪತಯೇ ನಮಃ ನೈವೇದ್ಯಂ ಸಮರ್ಪಯಾಮಿ॥ ಪಾನೀಯಂ ಸಮರ್ಪಯಾಮಿ॥ ತಾಂಬೂಲಂ ಸಮರ್ಪಯಾಮಿ॥ ನೀರಾಜನಂ ಸಮರ್ಪಯಾಮಿ॥

**(ಗಣಪತಿಗೆ ಕರ್ಪೂರದಾರತಿ ಮಾಡಬೇಕು)**

ವಕ್ರತುಂಡ ಮಹಾಕಾಯ ಕೋಟಿಸೂರ್ಯ ಸಮಪ್ರಭ। ನಿರ್ವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ॥ ಶ್ರೀ ಮಹಾಗಣಪತಯೇ ನಮಃ॥ ಮಂತ್ರಪುಷ್ಪಂ ಸಮರ್ಪಯಾಮಿ॥ ಸಮಸ್ತ ರಾಜೋಪಚಾರ ಪೂಜಾಸ್ಸಮರ್ಪಯಾಮಿ॥ ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ॥ (ಪ್ರದಕ್ಷಿಣೆ ನಮಸ್ಕಾರ ಮಾಡಬೇಕು)

ಯಸ್ಯಸ್ಮೃತ್ಯಾಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಂ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜಗತ್ಪತೇ । ಯತ್ಕೃತಂ
ತು ಮಯಾದೇವ ಪರಿಪೂರ್ಣಂ ತದಸ್ತು ಮೇ॥

ಅನಯಾ ಪೂಜಯ ಭಗವಾನ್ ಶ್ರೀಮಹಾಗಣಪತಿ ಸುಪ್ರಸನ್ನೋ
ವರದೋ ಭವತು॥ ಇಷ್ಟಕಾಮ್ಯಾರ್ಥ ಸಿದ್ಧಿರಸ್ತು॥

## ಪ್ರಾಣಪ್ರತಿಷ್ಠಾ ವಿಧಿ

ಶ್ರಾವರಮಹಾಲಕ್ಷ್ಮೀ ಪೂಜೆಗಾಗಿ ಸಿದ್ಧಪಡಿಸಿದ ಬೆಳ್ಳಿ, ಬಂಗಾರ ಇಲ್ಲವೇ ತಾಮ್ರದ ಕಲಶವನ್ನು ಗಂಧಾಕ್ಷತೆ, ಅರಿಶಿನ, ಕುಂಕುಮಗಳಿಂದ ಅಲಂಕರಿಸಿ ಅದರೊಳಗೆ ಪಂಚಪಲ್ಲವಗಳನ್ನು (ಆಲ, ಅಶ್ವತ್ಥ ಮಾವು, ಹಲಸು, ಹೊಂಬಾಳೆ) ಹಾಕಬೇಕು. ನಂತರ ಕಲಶದ ಮೇಲೆ ತೆಂಗಿನಕಾಯನ್ನು ಇರಿಸಬೇಕು. ಕೆಲವರು ಜೋಡಿ ಕಲಶಗಳನ್ನು ಇಡುತ್ತಾರೆ. ಕಲಶದ ಪಾತ್ರೆ ಆಭರಣ ಮುಖವಾಡಗಳನ್ನು ಹಾಕಿ ಅಲಂಕರಿಸಬಹುದು).

**(ಪ್ರಾಣಪ್ರತಿಷ್ಠೆಗಾಗಿ ಈ ವಿಧಾನವನ್ನು ಅನುಸರಿಸಬೇಕು).**

ಅಸ್ಯ ಶ್ರೀವರಮಹಾಲಕ್ಷ್ಮೀ ದೇವತಾ ಪ್ರಾಣಪ್ರತಿಷ್ಠಾ ಮಹಾ ಮಂತ್ರಸ್ಯ ಬ್ರಹ್ಮ ವಿಷ್ಣು ಮಹೇಶ್ವರಾ ಋಷಯಃ। ಋಗ್ಯಜುಸ್ಸಾಮಾಥರ್ವಾಣಿ ಛಂದಾಂಸಿ। ಪ್ರಾಣಶಕ್ತಿಃ ಪರದೇವತಾ।

ಹ್ರಾಂ ಬೀಜಂ। ಹ್ರೀಂ ಶಕ್ತಿಃ। ಹ್ರೂಂ ಕೀಲಕಂ। ಮಮ ವರಮಹಾಲಕ್ಷ್ಮೀ ಪ್ರಾಣಪ್ರತಿಷ್ಠಾ ಸಿದ್ಧ್ಯರ್ಥೇ ಜಪೇ ವಿನಿಯೋಗಃ॥

**ಕರನ್ಯಾಸ**

ಹ್ರಾಂ ಅಂಗುಷ್ಠಾಭ್ಯಾಂ ನಮಃ (ಹೆಬ್ಬೆರಳನ್ನು ಸವರಿ)
ಹ್ರೀಂ ತರ್ಜನೀಭ್ಯಾಂ ನಮಃ (ತೋರುಬೆರಳನ್ನು ಸವರಿ)
ಹ್ರೂಂ ಮಧ್ಯಮಾಭ್ಯಾಂ ನಮಃ (ನಡುಬೆರಳನ್ನು ಸವರಿ)
ಹ್ರೈಂ ಅನಾಮಿಕಾಭ್ಯಾಂ ನಮಃ (ಉಂಗುರದ ಬೆರಳನ್ನು ಸವರಿ)
ಹ್ರೌಂ ಕನಿಷ್ಠಿಕಾಭ್ಯಾಂ ನಮಃ (ಕಿರುಬೆರಳನ್ನು ಸ್ಪರ್ಶಿಸಿ)
ಹ್ರಃ ಕರತಲಕರಪೃಷ್ಠಾಭ್ಯಾಂ ನಮಃ (ಅಂಗೈ ಮುಂಗೈಗಳನ್ನು ಸವರಬೇಕು)

**ಅಂಗನ್ಯಾಸ**

ಹ್ರಾಂ ಹೃದಯಾಯ ನಮಃ (ಹೃದಯಭಾಗವನ್ನು ಸ್ಪರ್ಶಿಸಿ)
ಹ್ರೀಂ ಶಿರಸೇ ಸ್ವಾಹಾ (ಶಿರಸ್ಸನ್ನು ಸ್ಪರ್ಶಿಸಿ)
ಹ್ರೂಂ ಶಿಖಾಯೈ ವಷಟ್ (ಜುಟ್ಟಿನ ಭಾಗವನ್ನು ಸ್ಪರ್ಶಿಸಿ)
ಹ್ರೈಂ ಕವಚಾಯ ಹುಂ (ಹೆಗಲುಗಳನ್ನು ಸ್ಪರ್ಶಿಸಿ)
ಹ್ರೌಂ ನೇತ್ರತ್ರಯಾಯವೌಷಟ್ ಕಣ್ಣುಗಳು ಹಾಗೂ ಹುಬ್ಬಿನ ನಡುವೆ ಸ್ಪರ್ಶಿಸಿ)
ಹ್ರಃ ಅಸ್ತ್ರಾಯ ಫಟ್ (ಬಲಹಸ್ತವನ್ನು ತಲೆಯ ಸುತ್ತ ತಿರುಗಿಸಿ ಚಿಟಿಕೆ ಹಾರಿಸಿ)

ಭೂರ್ಭುವಸ್ಸುವರೋಂ ಇತಿ ದಿಗ್ಬಂಧಃ॥

**ಧ್ಯಾನಂ**

(ಕಲಶದ ಮೇಲೆ ಹೂ ಮಂತ್ರಾಕ್ಷತೆ ಇರಿಸಿ ಬಲಹಸ್ತವನ್ನು ಇಟ್ಟು ಘಂಟಾನಾದ ಮಾಡುತ್ತಾ ಪ್ರಾಣಶಕ್ತಿಯನ್ನು ಧ್ಯಾನಿಸಬೇಕು).

ರಕ್ತಾಂಬೋಧಿಸ್ತಪೋತೋಲ್ಲಸದರುಣ ಸರೋಜಾಧಿರೂಢಾ ಕರಾಬ್ಜೈಃಪಾಶಂ ಕೋದಂಡಮಿಕ್ಷೂದ್ಭವ ಮಣಿಗಣಮಪ್ಯಂಕುಶಂ ಪಂಚಬಾಣಾನ್॥ ಬಿಭ್ರಾಣಸೃಕ್ಕಪಾಲಂ ತ್ರಿನಯನ ಲಸಿತಾ ಪೀನವಕ್ಷೋರುಹಾಢ್ಯಾ ದೇವೀ ಬಾಲಾರ್ಕವರ್ಣಾ ಭವತು ಸುಖಕರೀ ಪ್ರಾಣಶಕ್ತಿಃ ಪರಾನಃ॥

ಹ್ರಾಂ–ಹ್ರೀಂ–ಕ್ರೋಂ–ಯ ರ ಲ ವ ಶ ಷ ಸ ಹೋವ್॥ ಓಂ (ವರಮಹಾಲಕ್ಷ್ಮೀ) ಪ್ರಾಣಃ ಮಮ ಪ್ರಾಣಃ (ವರಮಹಾಲಕ್ಷ್ಮೀ) ಜೀವಃಮಮಜೀವಃ ವಾಙ್ಮನಃ ಶ್ರೋತ್ರ ಜಿಹ್ವಾಘ್ರಾಣೈಃ ಉಚ್ಛ್ವಾಸ್ವರೂಪೇಣ ಬಹಿರಾಗತ್ಯ ಅಸ್ಮಿನ್ ಕಲಶೇ ಸುಖೇನ ಚಿರನ್ ತಿಷ್ಠಂತು ಸ್ವಾಹಾ॥

ಮಂತ್ರ : ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣ ಮಿಹೀನೋ ಧೇಹಿ ಭೋಗಮ್। ಜ್ಯೋಕ್ಷಶ್ಯೇಮ ಸೂರ್ಯಮುಚ್ಚರಂತ ಮನುಮತೇ ಮೃಡಯಾನಃ ಸ್ವಸ್ತಿ ಅಮೃತಂ ವೈ ಪ್ರಾಣಾ ಅಮೃತಮಾಪಃ ಪ್ರಾಣನೇವ ಯಥಾಸ್ಥಾನಮುಪಹ್ವಯತೋ।

ದೇವೀ ಸರ್ವಜಗನ್ನಾತೆ ಯಾವತ್ಪೂಜಾವಸಾನಕಂ।
ತಾವತ್ತ್ವಂ ಪ್ರೀತಿಭಾವೇನ ಬಿಂಬೇಸ್ಮಿನ್ ಸನ್ನಿಧಿಂಕುರು॥

ಆವಾಹಿತಾಭವ, ಸ್ಥಾಪಿತಾಭವ, ಸುಪ್ರಸನ್ನಾಭವ, ವರದಾಭವ, ಅವಕುಂಠಿತಾಭವ, ಸ್ಥಿರಾಸನಂ ಕುರು, ಪ್ರಸೀದ ಪ್ರಸೀದ ಪ್ರಸೀದ॥

ಮಂತ್ರ : ಆ ತ್ವಾ ವಹಂತು ಹರಯಸ್ಸಚೇತಸಶ್ಶ್ವೇತ್ಯೈರಶ್ವೈಸ್ಸಹ ಕೇತು ಮದ್ಭಿಃ ವಾತಾಜವೈರ್ಬಲವದ್ಭಿರ್ಮನೋಜವೈರಾಯಯಾಹಿ ಶೀಘ್ರಂ ಮಮ ಹವ್ಯಾಯ ಶರ್ವೋಮ್॥

(ಈ ಮಂತ್ರವನ್ನು ಉಚ್ಚರಿಸುತ್ತಾ ಮಂತ್ರಾಕ್ಷತೆ ಹೂಗಳನ್ನು ತೆಗೆದುಕೊಂಡು ಕಲಶದ ಮೇಲಿಟ್ಟು ಪ್ರಾಣಪ್ರತಿಷ್ಠೆ ಮಾಡಬೇಕು).

ಯತ್ಕಿಂಚಿನ್ನಿವೇದನಂ ಕುರ್ಯಾತ್।
ಓಂ ಭೂರ್ಭುವಃ ಸ್ವಃ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ
ಧೀಮಹಿ ಧಿಯೋ ಯೋನಃ ಪ್ರಚೋದಯಾತ್॥
ನೈವೇದ್ಯಂ ಸಮರ್ಪಯಾಮಿ॥

ಪ್ರಾಣಪ್ರತಿಷ್ಠೆ ಮುಗಿಯಿತು

# ಶ್ರೀ ವರಮಹಾಲಕ್ಷ್ಮೀ ಪೂಜಾ

**ಧ್ಯಾನಂ॥** **(ಕೈ ಜೋಡಿಸಿಕೊಂಡು)**

ಪದ್ಮಾಸನೇ ಪದ್ಮಕರೇ ಸರ್ವಲೋಕೈಕ ಪೂಜಿತೇ।
ನಾರಾಯಣಪ್ರಿಯೇ ದೇವಿ ಸುಪ್ರೀತಾ ಭವ ಸರ್ವದಾ॥
ಕ್ಷೀರೋದಾರ್ಣವ ಸಂಭೂತೇ ಕಮಲೇ ಕಮಲಾಲಯೇ।
ಸುಸ್ಥಿರಾ ಭವ ಮೇ ಗೇಹೇ ಸುರಾಸುರ ನಮಸ್ಕೃತೇ॥
ಶ್ರೀ ವರಲಕ್ಷ್ಮೀಂ ಧ್ಯಾಯಾಮಿ॥
**(ಮಂತ್ರಾಕ್ಷತೆ ಹೂವನ್ನು ಲಕ್ಷ್ಮೀ ಕಲಶಕ್ಕೆ ಅರ್ಪಿಸಿ)**

ಸರ್ವಮಂಗಲ ಮಾಂಗಲ್ಯೇ ವಿಷ್ಣುವಕ್ಷಃ ಸ್ಥಲಾಲಯೇ।
ಆವಾಹಯಾಮಿ ದೇವಿ ತ್ವಾಂ ಸುಪ್ರೀತಾ ಭವ ಸರ್ವದಾ॥
॥ವರಲಕ್ಷ್ಮೀಂ ಆವಾಹಯಾಮಿ॥
**(ಹೂ ಮಂತ್ರಾಕ್ಷತೆ ಅರ್ಪಿಸಿ)**

ಸೂರ್ಯಾಯುತ ನಿಭಸ್ಫೂರ್ತೇ ಸ್ಫುರದ್ರತ್ನ ವಿಭೂಷಿತಂ।
ಸಿಂಹಾಸನಮಿದಂ ದೇವಿ ಸ್ಥೀಯತಾಂ ಸುರಪೂಜಿತೇ॥
॥ರತ್ನ ಸಿಂಹಾಸನಂ ಸಮರ್ಪಯಾಮಿ॥
**(ಹೂ ಮಂತ್ರಾಕ್ಷತೆ ಅರ್ಪಿಸಿ)**

ಶುದ್ಧೋದಕಂ ಚ ಪಾತ್ರಸ್ಥಂ ಗಂಧಪುಷ್ಪಾದಿ ಮಿಶ್ರಿತಂ।
ಅರ್ಘ್ಯಂ ದಾಸ್ಯಾಮಿ ತೇ ದೇವಿ ಗೃಹಾಣ ಸುರಪೂಜಿತೇ॥
॥ಅರ್ಘ್ಯಂ ಸಮರ್ಪಯಾಮಿ॥
**(ಶುದ್ಧವಾದ ನೀರನ್ನು ದೇವರಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು)**
ಸುವಾಸಿತಂ ಜಲಂ ರಮ್ಯಂ ಸರ್ವತೀರ್ಥ ಸಮುದ್ಭವಂ।
ಪಾದ್ಯಂ ಗೃಹಾಣ ದೇವಿತ್ವಂ ಸರ್ವದೇವ ನಮಸ್ಕೃತೇ॥
॥ಪಾದ್ಯಂ ಸಮರ್ಪಯಾಮಿ॥
**(ಉದ್ಧರಣೆಯಿಂದ ನೀರನ್ನು ಅರ್ಘ್ಯ ಪಾತ್ರೆಗೆ ಹಾಕಿ)**

ಸುವರ್ಣಕಲಶಾನೀತಂ ಚಂದನಾಗರು ಸಂಯುತಂ।
ಗೃಹಾಣಾಚಮನಂ ದೇವಿ ಮಯಾದತ್ತಂ ಶುಭಪ್ರದೇ॥
॥ಆಚಮನೀಯಂ ಸಮರ್ಪಯಾಮಿ॥
**(ಉದ್ಧರಣೆಯಿಂದ ನೀರನ್ನು ಅರ್ಘ್ಯ ಪಾತ್ರೆಗೆ ಹಾಕಿ)**

ಸುರಾರ್ಚಿತಾಂಘ್ರಿ ಯುಗಲೇ ದುಕೂಲವಸನಪ್ರಿಯೇ।
ವಸ್ತ್ರಯುಗ್ಮಂ ಪ್ರದಾಸ್ಯಾಮಿ ಗೃಹಾಣ ಹರಿವಲ್ಲಭೇ॥
॥ವಸ್ತ್ರಯುಗ್ಮಂ ಸಮರ್ಪಯಾಮಿ॥

(ಗೆಜ್ಜೆ ವಸ್ತ್ರವನ್ನು ದೇವಿಗೆ ಅರ್ಪಿಸಿ)

ಕೇಯೂರ ಕಂಕಣೇ ದಿವ್ಯೇ ಹಾರನೂಪುರ ಮೇಖಲಾಃ।
ವಿಭೂಷಣಾನ್ಯ ಮಾಲ್ಯಾನಿ ಗೃಹಾಣ ಋಷಿಪೂಜಿತೇ॥
॥ಆಭರಣಾನಿ ಸಮರ್ಪಯಾಮಿ॥

(ಚಿನ್ನದ ಸರ ಇಲ್ಲವೇ ಹೂವನ್ನು ದೇವಿಗೆ ಅರ್ಪಿಸಿ)

ತಪ್ತ ಹೇಮಕೃತಂ ದೇವಿ ಗೃಹಾಣ ತ್ವಂ ಶುಭಪ್ರದೇ।
ಉಪವೀತಮಿದಂ ದೇವಿ ಗೃಹಾಣ ಹರಿವಲ್ಲಭೇ॥
॥ಯಜ್ಞೋಪವೀತಂ ಸಮರ್ಪಯಾಮಿ॥

(ಹಸೀದಾರವನ್ನೋ ಇಲ್ಲವೇ ಗೆಜ್ಜೆವಸ್ತ್ರವನ್ನೋ ಅರ್ಪಿಸಿ)

ಕರ್ಪೂರಾಗರು ಕಸ್ತೂರೀ ರೋಚನಾದಿಭಿರನ್ವಿತಂ।
ಗಂಧಂ ದಾಸ್ಯಾಮ್ಯಹಂ ದೇವಿ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್॥
॥ಗಂಧಾನ್ ಧಾರಯಾಮಿ॥

(ಗಂಧದಲ್ಲಿ ಹೂವನ್ನು ಅದ್ದಿ ದೇವಿಗೆ ಪ್ರೋಕ್ಷಿಸಿ)

ಅಕ್ಷತಾನ್ ಧವಳಾನ್ ದೇವಿ ಶಾಲೀಯಾನ್‌ಸ್ತಂಡುಲಾನ್ ಶುಭಾನ್।
ಹರಿದ್ರಾಕುಂಕುಮೋಪೇತಾನ್ ಗೃಹ್ಯತಾಮಬ್ಧಿಪುತ್ರಿಕೇ॥
॥ಅಕ್ಷತಾನ್ ಸಮರ್ಪಯಾಮಿ॥

ಮಲ್ಲಿಕಾಜಾಜಿ ಕುಸುಮೈಃ ಚಂಪಕೈರ್ಬಕುಲೈರಪಿ।
ಶತಪತ್ರೈ ಶ್ಚ ಕಲ್ಹಾರೈಃ ಪೂಜಯಾಮಿ ಹರಿಪ್ರಿಯೇ॥
ದಿವ್ಯ ಪರಿಮಳ ಪುಷ್ಪಾನ್ ಸಮರ್ಪಯಾಮಿ॥

(ಮಲ್ಲಿಗೆ, ಸಂಪಿಗೆ, ಸೇವಂತಿಗೆ ಮೊದಲಾದ ಸುಗಂಧ ಪುಷ್ಪಗಳನ್ನು ದೇವಿಗೆ ಅರ್ಪಿಸಬೇಕು)

**ಅಂಗಪೂಜಾ**

(ಪ್ರತಿಯೊಂದು ನಾಮೋಚ್ಚಾರಣೆಯ ನಂತರ ಬಿಡಿಹೂ, ಅಕ್ಷತೆ ಅರ್ಪಿಸಿ)

| | | |
|---|---|---|
| ಚಂಚಲಾಯೈ ನಮಃ | ಪಾದೌ | ಪೂಜಯಾಮಿ |
| ಚಪಲಾಯೈ ನಮಃ | ಜಾನುನೀ | ಪೂಜಯಾಮಿ |
| ಪೀತಾಂಬರಧರಾಯೈ ನಮಃ | ಊರೂ | ಪೂಜಯಾಮಿ |
| ಕಮಲವಾಸಿನ್ಯೈ ನಮಃ | ಕಟಿಂ | ಪೂಜಯಾಮಿ |





| | | |
|---|---|---|
| ಪದ್ಮಾಲಯಾಯೈ ನಮಃ | ನಾಭಿಂ | ಪೂಜಯಾಮಿ |
| ಮದನಮಾತರೇ ನಮಃ | ಸ್ತನೌ | ಪೂಜಯಾಮಿ |
| ಲಲಿತಾಯೈ ನಮಃ | ಭುಜದ್ವಯಂ | ಪೂಜಯಾಮಿ |
| ಕಂಬುಕಂಠ್ಯೈ ನಮಃ | ಕಂಠಂ | ಪೂಜಯಾಮಿ |
| ಸುಮುಖಾಯೈ ನಮಃ | ಮುಖಂ | ಪೂಜಯಾಮಿ |
| ಶ್ರಿಯೈ ನಮಃ | ಓಷ್ಠೌ | ಪೂಜಯಾಮಿ |
| ಸುನಾಸಿಕಾಯೈ ನಮಃ | ನಾಸಿಕಾಂ | ಪೂಜಯಾಮಿ |
| ಸುನೇತ್ರಾಯೈ ನಮಃ | ನೇತ್ರೇ | ಪೂಜಯಾಮಿ |
| ರಮಾಯೈ ನಮಃ | ಕರ್ಣೌ | ಪೂಜಯಾಮಿ |
| ಕಮಲಾಯೈ ನಮಃ | ಶಿರಃ | ಪೂಜಯಾಮಿ |

॥ಶ್ರೀ ವರಮಹಾಲಕ್ಷ್ಮ್ಯೈ ನಮಃ ಸರ್ವಾಣ್ಯಂಗಾನಿ ಪೂಜಯಾಮಿ॥

## ಲಕ್ಷ್ಮೀ ಅಷ್ಟೋತ್ತರ ಶತನಾಮಪೂಜಾ

ಓಂ ಪ್ರಕೃತ್ಯೈ ನಮಃ
ವಿಕೃತ್ಯೈ ನಮಃ
ವಿದ್ಯಾಯೈ ನಮಃ
ಸರ್ವಭೂತಹಿತಪ್ರದಾಯೈ ನಮಃ
ಶ್ರದ್ಧಾಯೈ ನಮಃ
ವಿಭೂತ್ಯೈ ನಮಃ
ಸುರಭ್ಯೈ ನಮಃ
ಪರಮಾತ್ಮಿಕಾಯೈ ನಮಃ
ವಾಚೇ ನಮಃ
ಪದ್ಮಾಲಯಾಯೈ ನಮಃ 10
ಪದ್ಮಾಯೈ ನಮಃ
ಶುಚಯೇ ನಮಃ
ಸ್ವಾಹಾಯೈ ನಮಃ
ಸ್ವಧಾಯೈ ನಮಃ
ಸುಧಾಯೈ ನಮಃ
ಧನ್ಯಾಯೈ ನಮಃ
ಹಿರಣ್ಮಯ್ಯೈ ನಮಃ
ಲಕ್ಷ್ಮ್ಯೈ ನಮಃ
ನಿತ್ಯಪುಷ್ಟಾಯೈ ನಮಃ
ವಿಭಾವರ್ಯೈ ನಮಃ 20
ಅದಿತ್ಯೈ ನಮಃ
ದಿತ್ಯೈ ನಮಃ
ದೀಪ್ತಾಯೈ ನಮಃ
ವಸುಧಾಯೈ ನಮಃ
ವಸುಧಾರಿಣ್ಯೈ ನಮಃ
ಕಮಲಾಯೈ ನಮಃ
ಕಾಂತಾಯೈ ನಮಃ
ಕಾಮಾಕ್ಷ್ಯೈ ನಮಃ
ಕ್ರೋಧಸಂಭವಾಯೈ ನಮಃ
ಅನುಗ್ರಹಪದಾಯೈ ನಮಃ 30
ಬುದ್ಧಯೇ ನಮಃ
ಅನಘಾಯೈ ನಮಃ
ಹರಿವಲ್ಲಭಾಯೈ ನಮಃ
ಅಶೋಕಾಯೈ ನಮಃ
ಅಮೃತಾಯೈ ನಮಃ
ದೀಪ್ತಾಯೈ ನಮಃ
ಲೋಕಶೋಕವಿನಾಶಿನ್ಯೈ ನಮಃ
ಧರ್ಮನಿಲಯಾಯೈ ನಮಃ





ಕರುಣಾಯೈ ನಮಃ
ಲೋಕಮಾತ್ರೇ ನಮಃ 40
ಪದ್ಮಪ್ರಿಯಾಯೈ ನಮಃ
ಪದ್ಮಾಕ್ಷ್ಯೈ ನಮಃ
ಪದ್ಮಸುಂದರ್ಯೈ ನಮಃ
ಪದ್ಮೋದ್ಭವಾಯೈ ನಮಃ
ಪದ್ಮಮುಖ್ಯೈ ನಮಃ
ಪದ್ಮನಾಭಪ್ರಿಯಾಯೈ ನಮಃ
ರಮಾಯೈ ನಮಃ
ಪದ್ಮಮಾಲಾಧರಾಯೈ ನಮಃ
ದೇವ್ಯೈ ನಮಃ
ಪದ್ಮಿನ್ಯೈ ನಮಃ 50
ಪದ್ಮಗಂಧಿನ್ಯೈ ನಮಃ
ಪುಣ್ಯಗಂಧಾಯೈ ನಮಃ
ಸುಪ್ರಸನ್ನಾಯೈ ನಮಃ
ಪ್ರಸಾದಾಭಿಮುಖ್ಯೈ ನಮಃ
ಪ್ರಭಾಯೈ ನಮಃ
ಚಂದ್ರವದನಾಯೈ ನಮಃ
ಚಂದ್ರಾಯೈ ನಮಃ
ಚಂದ್ರಸಹೋದರ್ಯೈ ನಮಃ
ಚತುರ್ಭುಜಾಯೈ ನಮಃ
ಚಂದ್ರರೂಪಾಯೈ ನಮಃ 60
ಇಂದಿರಾಯೈ ನಮಃ
ಇಂದುಶೀತಲಾಯೈ ನಮಃ
ಆಹ್ಲಾದಜನನ್ಯೈ ನಮಃ
ಪುಷ್ಟ್ಯೈ ನಮಃ
ಶಿವಾಯೈ ನಮಃ
ಶಿವಕರ್ಯೈ ನಮಃ
ಸತ್ಯೈ ನಮಃ
ವಿಮಲಾಯೈ ನಮಃ
ವಿಶ್ವಜನನ್ಯೈ ನಮಃ
ತುಷ್ಟ್ಯೈ ನಮಃ

ದಾರಿದ್ರ್ಯನಾಶಿನ್ಯೈ ನಮಃ 70
ಪ್ರೀತಪುಷ್ಕರಿಣ್ಯೈ ನಮಃ
ಶಾಂತಾಯೈ ನಮಃ
ಶುಕ್ಲಮಾಲ್ಯಾಂಬರಧರಾಯೈ ನಮಃ
ಶ್ರಿಯೈ ನಮಃ
ಭಾಸ್ಕರ್ಯೈ ನಮಃ
ಬಿಲ್ವನಿಲಯಾಯೈ ನಮಃ
ವರಾರೋಹಾಯೈ ನಮಃ
ಯಶಸ್ವಿನ್ಯೈ ನಮಃ
ವಸುಂಧರಾಯೈ ನಮಃ 80
ಉದಾರಾಂಗಾಯೈ ನಮಃ
ಹರಿಣ್ಯೈ ನಮಃ
ಹೇಮಮಾಲಿನ್ಯೈ ನಮಃ
ಧನಧಾನ್ಯಕರ್ಯೈ ನಮಃ
ಸಿದ್ಧಯೇ ನಮಃ
ಸ್ತ್ರೈಣಸೌಮ್ಯಾಯೈ ನಮಃ
ಶುಭಪ್ರದಾಯೈ ನಮಃ
ನೃಪವೇಶ್ಮಗತಾನಂದಾಯೈ ನಮಃ
ವರಲಕ್ಷ್ಮ್ಯೈ ನಮಃ
ವಸುಪ್ರದಾಯೈ ನಮಃ 90
ಶುಭಾಯೈ ನಮಃ
ಹಿರಣ್ಯಪ್ರಾಕಾರಾಯೈ ನಮಃ
ಸಮುದ್ರತನಯಾಯೈ ನಮಃ
ಜಯಾಯೈ ನಮಃ
ಮಂಗಲಾಯೈ ನಮಃ
ದೇವ್ಯೈ ನಮಃ
ವಿಷ್ಣುವಕ್ಷಃಸ್ಥಲಸ್ಥಿತಾಯೈ ನಮಃ
ವಿಷ್ಣುಪತ್ನ್ಯೈ ನಮಃ
ಪ್ರಸನ್ನಾಕ್ಷ್ಯೈ ನಮಃ 100
ನಾರಾಯಣಸಮಾಶ್ರಿತಾಯೈ ನಮಃ
ದಾರಿದ್ರ್ಯಧ್ವಂಸಿನ್ಯೈ ನಮಃ
ದೇವ್ಯೈ ನಮಃ

ಸರ್ವೋಪದ್ರವನಿವಾರಿಣ್ಯೈ ನಮಃ
ನವದುರ್ಗಾಯೈ ನಮಃ
ಮಹಾಕಾಳ್ಯೈ ನಮಃ
ಬ್ರಹ್ಮವಿಷ್ಣುಶಿವಾತ್ಮಿಕಾಯೈ ನಮಃ
ತ್ರಿಕಾಲಜ್ಞಾನಸಂಪನ್ನಾಯೈ ನಮಃ
ಭುವನೇಶ್ವರ್ಯೈ ನಮಃ
ಓಂ ಶ್ರೀ ವರಲಕ್ಷ್ಮೀ
ದೇವತಾಯೈ ನಮಃ 108

॥ಅಷ್ಟೋತ್ತರ ಶತನಾಮಪೂಜಾಂ ಸಮರ್ಪಯಾಮಿ॥

### ನಂತರ

ದಶಾಙ್ಗಂ ಗುಗ್ಗುಲೋಪೇತಂ ಸುಗಂಧಂ ಚ ಮನೋಹರಂ।
ಧೂಪಂ ದಾಸ್ಯಾಮಿ ದೇವೇಶಿ ವರಲಕ್ಷ್ಮೀ ಗೃಹಾಣ ತಮ್॥
॥ಶ್ರೀ ವರಲಕ್ಷ್ಮೀ ದೇವತಾಯೈ ನಮಃ ಧೂಪಮಾಘ್ರಾಪಯಾಮಿ॥

**(ಊದಿನಕಡ್ಡಿ ಹಾಲುಮಡ್ಡಿ ಬೆಳಗಬೇಕು)**

ಘೃತಾವರ್ತಿಸಂಯುಕ್ತಂ ಅಂಧಕಾರಂ ವಿನಾಶನಂ।
ದೀಪಂ ದಾಸ್ಯಾಮಿ ತೇ ದೇವಿ ಗೃಹಾಣಮುದಿತಾಭವ॥
॥ದೀಪಂ ದರ್ಶಯಾಮಿ॥

**(ದೀಪಾರತಿ ಮಾಡಬೇಕು)**

ನೈವೇದ್ಯಂ ಷಡ್ರಸೋಪೇತಂ ದಧಿಮಧ್ವಾಜ್ಯಸಂಯುತಂ।
ನಾನಾಭಕ್ಷ್ಯಫಲೋಪೇತಂ ಗೃಹಾಣ ಹರಿವಲ್ಲಭೇ॥
॥ಧೂಪದೀಪಾನಂತರಂ ಆಚಮನೀಯಂ ಸಮರ್ಪಯಾಮಿ॥

**(ಉದ್ಧರಣೆಯಿಂದ ನೀರನ್ನು ಹಾಕಿ)**

॥ಮಹಾನೈವೇದ್ಯಂ ಸಮರ್ಪಯಾಮಿ॥

**(ನೈವೇದ್ಯವನ್ನು ದೇವೀ ಕಲಶದ ಮುಂದೆ ಬಲಭಾಗದಲ್ಲಿರಿಸಿ ತೀರ್ಥವನ್ನು ಪ್ರೋಕ್ಷಿಸಬೇಕು. ಗಾಯತ್ರೀ ಮಂತ್ರದಿಂದ ನೈವೇದ್ಯ ಮಾಡಬೇಕು)**

ಘನಸಾರ ಸುಗಂಧೇನ ಮಿಶ್ರಿತಂ ಪುಷ್ಪವಾಸಿತಂ ।
ಪಾನೀಯಂ ಗೃಹ್ಯತಾಂ ದೇವಿ ಶೀತಲಂ ಸುಮನೋಹರಮ್ ॥
॥ಶ್ರೀ ವರಲಕ್ಷ್ಮ್ಯೈ ನಮಃ ಪಾನೀಯಂ ಸಮರ್ಪಯಾಮಿ॥

**(ಶುದ್ಧೋದಕವನ್ನು ಉದ್ಧರಣೆಯಿಂದ ದೇವರಿಗೆ ತೋರಿಸಿ ಪ್ರೋಕ್ಷಿಸಿ)**

ಪೂಗೀಫಲ ಸಮಾಯುಕ್ತಂ ನಾಗವಲ್ಲೀ ದಲೈರ್ಯುತಂ।
ಕರ್ಪೂರ ಚೂರ್ಣ ಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ॥
॥ತಾಂಬೂಲಂ ಸಮರ್ಪಯಾಮಿ॥

**(ತಾಂಬೂಲವನ್ನು ಅರ್ಪಿಸಬೇಕು)**

ನೀರಾಜನಂ ಸಮಾನೀತಂ ಕರ್ಪೂರೇಣ ಸಮನ್ವಿತಂ।
ತುಭ್ಯಂ ದಾಸ್ಯಾಮ್ಯಹಂ ದೇವಿ ಗೃಹ್ಯತಾಂ ಹರಿವಲ್ಲಭೇ।
॥ನೀರಾಜನಂ ದರ್ಶಯಾಮಿ॥

(ಮಹಾಮಂಗಳಾರತಿಯನ್ನು ಮಾಡಬೇಕು)

॥ನೀರಾಜನಾನಂತರಂ ಆಚಮನೀಯಂ ಸಮರ್ಪಯಾಮಿ॥

(ಉದ್ಧರಣೆಯಿಂದ ನೀರನ್ನು ದೇವರಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕಿ)
(ಕೈ ಮುಗಿದು)

ಪದ್ಮಾಸನೇ ಪದ್ಮಕರೇ ಸರ್ವಲೋಕೈಕಪೂಜಿತೇ।
ನಾರಾಯಣಪ್ರಿಯೇ ದೇವಿ ಸುಪ್ರೀತಾಭವ ಸರ್ವದಾ॥
॥ಮಂತ್ರಪುಷ್ಪಂ ಸಮರ್ಪಯಾಮಿ॥ (ಮಂತ್ರಾಕ್ಷತೆ, ಹೂ ಏರಿಸಿ)

ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ।
ತಾನಿ ತಾನಿ ಪ್ರಣಶ್ಯಂತಿ ಪ್ರದಕ್ಷಿಣ ಪದೇ ಪದೇ॥

ಶ್ರೀ ವರಲಕ್ಷ್ಮಿ ದೇವತಾಯೈ ನಮಃ
ಪ್ರದಕ್ಷಿಣ ನಮಸ್ಕಾರನ್ ಸಮರ್ಪಯಾಮಿ

**(ಪ್ರದಕ್ಷಿಣ ನಮಸ್ಕಾರ ಮಾಡಬೇಕು)**

## ದೋರಗ್ರಂಥಿ ಪೂಜಾ

(ಒಂಬತ್ತೆಳೆಯ ಹಸೀದಾರವನ್ನು ಅರಿಶಿನದ ನೀರಿನಲ್ಲಿ ನೆನೆಸಿ ವೀಳೆದೆಲೆಯಲ್ಲಿ ಇರಿಸಿ ದೇವರ ಮುಂದಿಟ್ಟು ಪೂಜಿಸಬೇಕು)

| | |
|---|---|
| ಕಮಲಾಯೈ ನಮಃ | ಪ್ರಥಮಗ್ರಂಥಿಂ ಪೂಜಯಾಮಿ |
| ರಮಾಯೈ ನಮಃ | ದ್ವಿತೀಯಗ್ರಂಥಿಂ ಪೂಜಯಾಮಿ |
| ಲೋಕಮಾತರೇ ನಮಃ | ತೃತೀಯಗ್ರಂಥಿಂ ಪೂಜಯಾಮಿ |
| ವಿಶ್ವಜನನ್ಯೈ ನಮಃ | ಚತುರ್ಥಗ್ರಂಥಿಂ ಪೂಜಯಾಮಿ |
| ಮಹಾಲಕ್ಷ್ಮ್ಯೈ ನಮಃ | ಪಂಚಮಗ್ರಂಥಿಂ ಪೂಜಯಾಮಿ |
| ಕ್ಷೀರಾಬ್ಧಿತನಯಾಯೈ ನಮಃ | ಷಷ್ಠಗ್ರಂಥಿಂ ಪೂಜಯಾಮಿ |
| ವಿಶ್ವಸಾಕ್ಷಿಣ್ಯೈ ನಮಃ | ಸಪ್ತಮಗ್ರಂಥಿಂ ಪೂಜಯಾಮಿ |
| ಚಂದ್ರಸೋದರ್ಯೈ ನಮಃ | ಅಷ್ಟಮಗ್ರಂಥಿಂ ಪೂಜಯಾಮಿ |
| ಹರಿವಲ್ಲಭಾಯೈ ನಮಃ | ನವಮಗ್ರಂಥಿಂ ಪೂಜಯಾಮಿ |

(ಹೀಗೆ ಅರಿಶಿನ, ಕುಂಕುಮ, ಹೂಗಳಿಂದ ಪೂಜಿಸಿದ ದಾರವನ್ನು ಕಟ್ಟಿಕೊಳ್ಳಲು ಈ ರೀತಿ ಹೇಳಬೇಕು)

ಬಧ್ನಾಮಿ ದಕ್ಷಿಣೇ ಹಸ್ತೇ ನವಸೂತ್ರಂ ಶುಭಪ್ರದಂ
ಪುತ್ರಪೌತ್ರಾಭಿ ವೃದ್ಧಿಂ ಚ ಸೌಭಾಗ್ಯಂ ದೇಹಿ ಮೇ ರಮೇ

(ದಾರವನ್ನು ಹಿರಿಯ ಮುತ್ತೈದೆಯರಿಗೆ ಕೊಟ್ಟು ತಾವೇ ಧರಿಸಿಕೊಳ್ಳಬೇಕು. ನಂತರ ವಾಯನದಾನ (ಬಾಗಿನ) ವನ್ನು ಕೊಡಬೇಕು).

## ವಾಯನ ದಾನ

(ಹಸೀಮೊರದಲ್ಲಿ ಅಕ್ಕಿ, ತೆಂಗಿನಕಾಯಿ, ತಾಂಬೂಲಗಳನ್ನು ಇರಿಸಿ ಎಲೆಯಿಂದ ಮುಚ್ಚಿ ದಕ್ಷಿಣೆಯೊಂದಿಗೆ ದಾನ ಕೊಡಬೇಕು.)

ಏವಂ ಸಂಪೂಜ್ಯ ಕಲ್ಯಾಣೀಂ ವರಲಕ್ಷ್ಮೀ ಸ್ವಶಕ್ತಿತಃ
ದಾತವ್ಯಂ ದ್ವಾದಶಪೂಪಂ ವಾಯನಂ ಹಿ ದ್ವಿಜಾತಯೇ॥

(ತನ್ನ ಶಕ್ತ್ಯನುಸಾರವಾಗಿ ತಾಂಬೂಲದೊಡನೆ ಹನ್ನೆರಡು ಅಪೂಪ (ಗಾರಿಗೆ) ದಾನಮಾಡುವ ಕ್ರಮವಿದೆ.)

## ವಾಯನದಾನ ಮಂತ್ರ

ಇಂದಿರಾ ಪ್ರತಿಗೃಹ್ಣಾತು ಇಂದಿರಾ ವೈ ದದಾತಿ ಚ ।
ಇಂದಿರಾ ತಾರಕೋಭಾಭ್ಯಾಂ ಇಂದಿರಾಯೈ ನಮೋನಮಃ ॥

ಎಂದು ಹೇಳಿ ಹಿರಿಯರಿಗೆ ನಮಸ್ಕರಿಸಿ ದಾನ ನೀಡಬೇಕು.

॥ಇತಿ ಪೂಜಾವಿಧಿಃ ಸಮಾಪ್ತಾ॥

॥ಇಲ್ಲಿಗೆ ವರಮಹಾಲಕ್ಷ್ಮೀ ಪೂಜಾವಿಧಿ ಮುಗಿಯಿತು॥





## ಭವಿಷ್ಯೋತ್ತರ ಪುರಾಣೋಕ್ತ

# ವರಮಹಾಲಕ್ಷ್ಮೀ ವ್ರತ ಕಥಾ

ದಿವ್ಯರಮಣೀಯವೂ ಪವಿತ್ರವೂ ಆದ ಕೈಲಾಸ ಪರ್ವತದ ಶಿಖರದಲ್ಲಿ ಪಾರ್ವತಿಯೊಡನೆ ಆಸೀನನಾದ ಮಹಾದೇವನನ್ನು ನಾರದ, ಪರಾಶರ, ಅಗಸ್ತ್ಯವಾಲ್ಮೀಕಿಗಳೇ ಮೊದಲಾದ ಮಹಾನ್ ತಪಸ್ವಿಗಳು ದರ್ಶನ ಮಾಡಿ ಧನ್ಯರಾದೆವೆಂದು ಕೊಂಡರು. ಮಂದಾರ, ಪಾರಿಜಾತ, ಚಂಪಕವೇ ಮೊದಲಾದ ಸುಗಂಧಭರಿತ ಪುಷ್ಪಗಳನ್ನು ನೀಡುವ ಎತ್ತರವಾದ ವೃಕ್ಷಗಳಿಂದಲೂ, ಕುಬೇರ ವರುಣಾದಿ ಅಷ್ಟದಿಕ್ಪಾಲಕರಿಂದ ರಕ್ಷಿಸಲ್ಪಟ್ಟ ದಿವ್ಯಕ್ಷೇತ್ರವೂ ಆಗಿರುವ ಇಂತಹ ಕೈಲಾಸ ಶಿಖರದಲ್ಲಿ ಪಾರ್ವತಿಯು ಪತಿಯನ್ನು ಪ್ರಶ್ನಿಸಿದಳು : 'ಹೇ ಸ್ವಾಮಿ ! ಸಕಲ ಲೋಕಗಳ ಹಿತಚಿಂತಕನೂ, ರಕ್ಷಕನೂ ಆಗಿರುವ ನೀವು ನಮಗೆ ರಹಸ್ಯವೂ ಮಂಗಳಕರವೂ ಆದ ವ್ರತವೊಂದನ್ನು ತಿಳಿಸಿ ಎನ್ನಲು;

ಸದಾಶಿವನು ಹೀಗೆ ಹೇಳಿದನು : 'ವ್ರತಗಳಲ್ಲೆಲ್ಲಾ ಶ್ರೇಷ್ಠವಾದ ವ್ರತವೆನಿಸಿ, ಸಕಲ ಸಂಪತ್ತು ಸೌಭಾಗ್ಯಗಳನ್ನು ಶೀಘ್ರದಲ್ಲಿಯೇ ದಯಪಾಲಿಸುವ ವರಲಕ್ಷ್ಮೀ ವ್ರತ ಒಂದಿದೆ. ಶ್ರಾವಣಮಾಸದ ಶುಕ್ಲಪಕ್ಷದಲ್ಲಿ ಕೊನೆಯ ಶುಕ್ರವಾರದಂದು ಈ ವ್ರತವನ್ನು ಆಚರಿಸಬೇಕು. ಸೌಭಾಗ್ಯ, ಮಂಗಳಕಾರ್ಯಗಳನ್ನು ಬಯಸುವ ಉತ್ತಮ ಸ್ತ್ರೀಯರು ಇದನ್ನು ಆಚರಿಸಿದರೆ ನಿಶ್ಚಿತ ಫಲ ದೊರೆಯುತ್ತದೆ.

ಪಾರ್ವತಿಯು ಪತಿಯ ಮಾತಿಗೆ ಸ್ವಾಮಿ? ಈ ವ್ರತ ವಿಧಿ ವಿಧಾನಗಳೇನು? ಹೇಗೆ ಆಚರಿಸಿದರೆ ದೇವಿಯು ಪ್ರಸನ್ನಳಾಗುತ್ತಾಳೆ? ಇದನ್ನು ಕೃಪೆಯಿಟ್ಟು ತಿಳಿಸುವಂಥವರಾಗಿ ಎಂದು ಪ್ರಶ್ನಿಸಿದಳು.

ಶಿವನು ಪ್ರಸನ್ನಚಿತ್ತನಾಗಿ ಹೇಳಿದನು : 'ದೇವೀ ಪವಿತ್ರವಾದ ವರಲಕ್ಷ್ಮೀ ವ್ರತದ ಪ್ರಭಾವ ಮಹಿಮೆಗಳನ್ನು ದೃಷ್ಟಾಂತದ ಮೂಲಕ ಹೇಳುತ್ತೇನೆ ಕೇಳು.'

ಸಂಪದ್ಭರಿತವೂ ಸಮೃದ್ಧವೂ ಆದ ಕುಂಡಿನವೆಂಬ ಪಟ್ಟಣದಲ್ಲಿ ಚಾರುಮತಿ ಎಂಬ ಬ್ರಾಹ್ಮಣ ಸ್ತ್ರೀಯೊಬ್ಬಳು ಪತಿವ್ರತೆಯೂ ಸಕಲ ಶಾಸ್ತ್ರಜ್ಞಳೂ ಆಗಿದ್ದಳು. ಮಧುರ ಭಾಷಿಣಿಯೂ, ಹಿರಿಯರಲ್ಲಿ ಗೌರವವುಳ್ಳವಳೂ ಆದ ಆಕೆ ನಿರ್ಮಲವಾದ ಮನಸ್ಸುಳ್ಳವಳಾಗಿದ್ದಳು.

ಒಂದು ದಿನ ಆಕೆಗೆ ದಿವ್ಯ ಸ್ವಪ್ನವಾಯಿತು. ಮಹಾಲಕ್ಷ್ಮಿಯು ಕನಸಿನಲ್ಲಿ ಆಕೆಗೆ ದರ್ಶನನೀಡಿ 'ಎಲೈ ಪತಿವ್ರತೆಯೇ ! ನಿನ್ನನ್ನು ಹರಸಲು ನಾನು ಬಂದಿರುವೆ. ಪತಿಭಕ್ತಿಪರಾಯಣೆಯೂ, ಅತ್ತೆ ಮಾವಂದಿರ ಶುಶ್ರೂಷೆಯಲ್ಲಿ ನಿರತಳೂ ಆದ ನಿನ್ನ ಸದಾಚಾರಕ್ಕೆ ಮೆಚ್ಚಿದ್ದೇನೆ. ಶ್ರಾವಣಮಾಸದಲ್ಲಿ ಹುಣ್ಣಿಮೆಗೆ ಮೊದಲು ಬರುವ

ಶುಭಕರವಾದ ಶುಕ್ರವಾರದಂದು ನನ್ನನ್ನು ವಿಶೇಷವಾಗಿ ಪೂಜಿಸು. ನಿನ್ನ ಇಷ್ಟಾರ್ಥಗಳು ನಿಶ್ಚಯವಾಗಿಯೂ ನೆರವೇರುತ್ತದೆ' ಎಂದು ಹೇಳಿದಳು. ಚಾರುಮತಿಯು ಹೇ ಮಾತೇ! ಜಗನ್ಮಾತೆಯೂ ಪುಣ್ಯ ಸ್ವರೂಪಳೂ ಆದ ನೀನು ಭಕ್ತರಿಗೆ ಎಂದೂ ಒಳ್ಳೆಯದನ್ನೇ ಮಾಡುತ್ತಿರುವೆ. ವಿಷ್ಣುವಿನ ವಕ್ಷಸ್ಥಲದಲ್ಲಿ ಸದಾ ವಾಸಿಸುವ ನೀನು ಮೂರು ಲೋಕಗಳಲ್ಲಿಯೂ ಸ್ತುತಿಸಲ್ಪಟ್ಟವಳಾಗಿರುವೆ. ನಿನ್ನ ಕರುಣಾಕಟಾಕ್ಷಕ್ಕೆ ಪಾತ್ರರಾದವರೇ ಧನ್ಯರು. ಅವರೇ ಮಾನ್ಯರು. ಸ್ತೋತ್ರಮಾಡಲು ಯೋಗ್ಯರು. ಅವರಿಗೆ ಸಕಲ ಸೌಭಾಗ್ಯಗಳೂ, ಪುತ್ರ ಪೌತ್ರಾದಿ ಸೌಖ್ಯವೂ, ಪರಮಜ್ಞಾನವೂ ಲಭಿಸುತ್ತವೆ. ಹೇ ಜಗಜ್ಜನನಿ, ಹರಿಪ್ರಿಯೆ ! ನನ್ನ ಪೂರ್ವಜನ್ಮ ಸುಕೃತದಿಂದಲೇ ನಿನ್ನ ದರ್ಶನ ಭಾಗ್ಯವು ಇಂದು ನನಗಾಯಿತು ಎಂದು ಭಕ್ತಿಯಿಂದ ಸ್ತೋತ್ರಮಾಡಿದಳು. ವರಮಹಾ ಲಕ್ಷ್ಮೀದೇವಿಯು ಆಕೆಗೆ ಮಂಗಳಕರವಾದ ವರಗಳನ್ನು ಕೊಟ್ಟು ಅಂತರ್ಧಾನಳಾದಳು.

ಸ್ವಪ್ನದಿಂದ ಎಚ್ಚೆತ್ತ ಚಾರುಮತಿಯು ಆನಂದಪೂರಿತಳಾದಳು. ಮತ್ತೆ ನಿದ್ರಿಸದೆ ಸೂರ್ಯೋದಯಕ್ಕೆ ಮುಂಚೆಯೇ ಎದ್ದು ಸ್ನಾನವನ್ನು ಮುಗಿಸಿ ತನ್ನ ಸ್ವಪ್ನವೃತ್ತಾಂತವನ್ನು ಬಂಧುಗಳೊಡನೆ ಸಂತೋಷದಿಂದ ಹೇಳಿಕೊಂಡಳು. ಅವರೆಲ್ಲರೂ ಅದನ್ನು ಕೇಳಿ 'ಚಾರುಮತಿಯೇ ನಿನ್ನ ಸ್ವಪ್ನ ತುಂಬಾ ಶುಭ್ರವಾದುದು. ಆ ಶುಭದಿನದಂದು ನಾವೆಲ್ಲರೂ ಭಕ್ತಿಯಿಂದ ಮಹಾಲಕ್ಷ್ಮೀ ವ್ರತವನ್ನು ಆಚರಿಸೋಣ' ಎಂದರು. ಶ್ರಾವಣ ಶುದ್ಧ ಶುಕ್ರವಾರವು ಎಂದು ಬರುವುದೋ ಎಂಬ ಕಾತುರದಿಂದ ನಿರೀಕ್ಷಿಸಿದರು. ಆ ಶುಭ ದಿನವು ಬಂದಿತು. ಆಗ ಸ್ತ್ರೀಯರೆಲ್ಲರೂ ಶುಭ್ರಸ್ನಾತರಾಗಿ ಅತ್ಯುತ್ಸಾಹದಿಂದ ನಿರ್ಮಲ ಮನಸ್ಸುಳ್ಳವರಾಗಿ ಸೌಭಾಗ್ಯದಾಯಕ ವರಮಹಾಲಕ್ಷ್ಮೀವ್ರತ ಪೂಜೆಗೆ ಸಿದ್ಧತೆಗಳನ್ನು ಮಾಡಿಕೊಳ್ಳಲಾರಂಭಿಸಿದರು. ಪೂರ್ಣಕಲಶದಲ್ಲಿ ಆಲದಬಳ್ಳಿ ಹೊಸ ಅಕ್ಕಿಗಳನ್ನು ತುಂಬಿ ವರಲಕ್ಷ್ಮಿಯನ್ನು ಆವಾಹಿಸಿ ಶ್ರದ್ಧಾ ಭಕ್ತಿಗಳಿಂದ :

ಪದ್ಮಾಸನೇ ಪದ್ಮಕರೇ ಸರ್ವಲೋಕೈಕ ಪೂಜಿತೇ
ನಾರಾಯಣಪ್ರಿಯೇ ದೇವಿ ಸುಪ್ರೀತಾ ಭವ ಸರ್ವದಾ

ಎಂದು ಪ್ರಾರ್ಥಿಸಿದರು. ಕಲ್ಪೋಕ್ತವಾಗಿ ಷೋಡಶೋಪಚಾರಗಳಿಂದ ವರಲಕ್ಷ್ಮಿಯನ್ನು ಪೂಜಿಸಿದರು. ಧ್ಯಾನಾವಾಹನಾದಿ ಪೂಜೆಗಳ ನಂತರ ಒಂಬತ್ತು ಗ್ರಂಥಿಗಳಿರುವ ಪವಿತ್ರವಾದ ದಾರವನ್ನು ಪೂಜಿಸಿದರು. ತುಪ್ಪದಿಂದ ಮಾಡಿದ ಭಕ್ಷ್ಯಗಳನ್ನು ಲಕ್ಷ್ಮೀದೇವಿಗೆ ನಿವೇದಿಸಿ ಮಹಾ ನೀರಾಜನ, ಆರತಿಗಳನ್ನು ಮಾಡಿದರು. ದಾರವನ್ನು ತಮ್ಮ ಬಲತೋಳಿಗೆ ಭಕ್ತಿ ಶ್ರದ್ಧೆಗಳಿಂದ ಕಟ್ಟಿಕೊಂಡರು. ಪೂಜೆಯನಂತರ ವೇದಪಾರಂಗತನೂ, ನಿಷ್ಠನೂ ಆದ ಬ್ರಾಹ್ಮಣನಿಗೆ ಹನ್ನೆರಡು ಭಕ್ಷ್ಯಗಳನ್ನು ದಕ್ಷಿಣೆ, ಫಲತಾಂಬೂಲಗಳೊಂದಿಗೆ ಬಾಗಿನವನ್ನಾಗಿ ಕೊಟ್ಟರು. ನಂತರ ತಾವು ದೇವಿಯ ಸನ್ನಿಧಿ ಯಲ್ಲಿ ಪ್ರಸಾದವನ್ನು ಭುಂಜಿಸಿದರು.

ಈ ಮಂಗಳಕರವಾದ ವ್ರತಾಚರಣೆಯಿಂದ ಚಾರುಮತಿ ಮುಂತಾದ ಪತಿವ್ರತಾ ಸ್ತ್ರೀಯರು ಧನ, ಧಾನ್ಯ, ಆಭರಣಗಳ ಸಂಪತ್ತನ್ನು ಹೊಂದಿ ಅಷ್ಟೈಶ್ವರ್ಯ ಸಂಪನ್ನರಾದರು. ಸದಾಕಾಲ ಅತಿಥಿ, ಅಭ್ಯಾಗತರು ಹಾಗೂ ಬಂಧು ಬಾಂಧವರನ್ನು ಸಂಮಾನಿಸುತ್ತಾ ಸುಖ ಹೊಂದಿದರು.

ಹೀಗೆ ವ್ರತಕಥೆಯನ್ನು ನಿರೂಪಿಸಿದ ಭಗವಾನ್ ಶಂಕರನು ದೇವಿ! ಅಂದಿನಿಂದ ಈ ವ್ರತವು ವರಮಹಾಲಕ್ಷ್ಮೀವ್ರತವೆಂದು ಲೋಕದಲ್ಲಿ ಪ್ರಖ್ಯಾತವಾಯಿತು. ಇದು ವ್ರತಗಳಲ್ಲೆಲ್ಲಾ ಬಹಳ ಉತ್ತಮವೂ ಫಲಪ್ರದವೂ ಆಗಿದೆ. ಯಾರು ಈ ವ್ರತವನ್ನು ಆಚರಿಸಿ, ಕಥೆಯನ್ನು ಕೇಳುವರೋ, ಹೇಳುವರೋ ಅವರಿಗೆ ಮಹಾಲಕ್ಷ್ಮಿಯ ದಿವ್ಯಾನುಗ್ರಹವುಂಟಾಗಿ ಸಕಲ ಕಾರ್ಯಗಳೂ ಸಿದ್ಧಿಸುತ್ತವೆ ಎಂಬಲ್ಲಿಗೆ ಭವಿಷ್ಯೋತ್ತರ ಪುರಾಣದಲ್ಲಿ ಪಾರ್ವತೀ ಪರಮೇಶ್ವರ ಸಂವಾದರೂಪದ ವರಮಹಾಲಕ್ಷ್ಮೀ ವ್ರತಕಥೆಯು ಸಂಪೂರ್ಣವಾಯಿತು.



# ಶ್ರೀ ಮಹಾಲಕ್ಷ್ಮೀ ಅಷ್ಟಕಮ್

ನಮಸ್ತೇಸು ಮಹಾಮಾಯೇ ಶ್ರೀಪೀಠ ಸುರಪೂಜಿತೇ।
ಶಂಖ ಚಕ್ರ ಗದಾಹಸ್ತೇ ಮಹಾಲಕ್ಷ್ಮೀ ನಮೋಸ್ತುತೇ ॥1॥

ನಮಸ್ತೇ ಗರುಡಾರೂಢೇ ಕೋಲಾಸುರ ಭಯಂಕರಿ।
ಸರ್ವಪಾಪಹರೇ ದೇವೀ ಮಹಾಲಕ್ಷ್ಮೀ ನಮೋಸ್ತುತೇ ॥2॥

ಸರ್ವಜ್ಞೇ ಸರ್ವವರದೇ ಸರ್ವದುಷ್ಟ ಭಯಂಕರಿ।
ಸರ್ವದುಃಖಹರೇ ದೇವೀ ಮಹಾಲಕ್ಷ್ಮೀ ನಮೋಸ್ತುತೇ ॥3॥

ಸಿದ್ಧಿ ಬುದ್ಧಿ ಪ್ರದೇ ದೇವೀ ಭುಕ್ತಿ ಮುಕ್ತಿ ಪ್ರದಾಯಿನಿ।
ಮಂತ್ರ ಮೂರ್ತೇ ಸದಾದೇವೀ ಮಹಾಲಕ್ಷ್ಮೀ ನಮೋಸ್ತುತೇ ॥4॥

ಆದ್ಯಂತ ರಹಿತೇ ದೇವೀ ಆದಿಶಕ್ತಿ ಮಹೇಶ್ವರಿ।
ಯೋಗಜ್ಞೇ ಯೋಗಸಂಭೂತೇ ಮಹಾಲಕ್ಷ್ಮೀ ನಮೋಸ್ತುತೇ ॥5॥

ಸ್ಥೂಲ ಸೂಕ್ಷ್ಮ ಮಹಾರೌದ್ರೇ ಮಹಾಶಕ್ತೇ ಮಹೋದರೇ।
ಮಹಾಪಾಪಹರೇ ದೇವೀ ಮಹಾಲಕ್ಷ್ಮೀ ನಮೋಸ್ತುತೇ ॥6॥

ಪದ್ಮಾಸನಸ್ಥಿತೇ ದೇವೀ ಪರಬ್ರಹ್ಮಸ್ವರೂಪಿಣೀ।
ಪರಮೇಶಿ ಜಗನ್ಮಾತರ್ಮಹಾಲಕ್ಷ್ಮೀ ನಮೋಸ್ತುತೇ ॥7॥

ಶ್ವೇತಾಂಬರಧರೇ ದೇವೀನಾನಾಲಂಕಾರ ಭೂಷಿತೇ।
ಜಗತ್‌ಸ್ಥಿತೇ ಜಗನ್ಮಾತರ್ಮಹಾಲಕ್ಷ್ಮೀ ನಮೋಸ್ತುತೇ ॥8॥

ಮಹಾಲಕ್ಷ್ಮ್ಯಷ್ಟಕಂ ಸ್ತೋತ್ರಂ ಯಃ ಪಠೇದ್ಭಕ್ತಿ ಮಾನ್ನರಃ।
ಸರ್ವಸಿದ್ಧಮವಾಪ್ನೋತಿ ರಾಜ್ಯಂ ಪ್ರಾಪ್ನೋತಿ ಸರ್ವದಾ ॥9॥

ಏಕಕಾಲೇ ಪಠೇನ್ನಿತ್ಯಂ ಮಹಾಪಾಪ ವಿನಾಶನಂ।
ದ್ವಿಕಾಲಂ ಯಃ ಪಠೇನ್ನಿತ್ಯಂ ಧನಧಾನ್ಯಸಮನ್ವಿತಂ ॥10॥

ತ್ರಿಕಾಲಂ ಯಃ ಪಠೇನಿತ್ಯಂ ಮಹಾಶತ್ರು ವಿನಾಶನಂ।
ಮಹಾಲಕ್ಷ್ಮೀ ಭವೇನ್ನಿತ್ಯಂ ಪ್ರಸನ್ನಾ ವರದಾಶುಭಂ ॥11॥





# ಶ್ರೀ ಮಹಾಲಕ್ಷ್ಮೀ ಹಾಡು

(ಪುರಂದರದಾಸರು ರಚಿಸಿರುವ)

ಭಾಗ್ಯದಲಕ್ಷ್ಮೀ ಬಾರಮ್ಮಾ ನಮ್ಮಮ್ಮಾ ನೀ ಸೌ–
ಭಾಗ್ಯದ ಲಕ್ಷ್ಮೀ ಬಾರಮ್ಮಾ
ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ
ಗೆಜ್ಜೆ ಕಾಲ್ಗಳ ಧ್ವನಿಯ ಮಾಡುತ
ಸಜ್ಜನ ಸಾಧು ಪೂಜೆಯ ವೇಳೆಗೆ
ಮಜ್ಜಿಗೆಯೊಳಗಿನ ಬೆಣ್ಣೆಯಂತೆ

ಕನಕವೃಷ್ಟಿಯ ಕರೆಯುತ ಬಾರೆ
ಮನಕೆ ಮತಿಯ ಸಿದ್ಧಿಯ ತೋರೆ
ದಿನಕರಕೋಟಿ ತೇಜದಿ ಹೊಳೆಯುತ
ಜನಕರಾಯನ ಕುಮಾರಿ ಬೇಗ

ಸಂಖ್ಯೆಯಿಲ್ಲದಾ ಭಾಗ್ಯವ ಕೊಟ್ಟು
ಕಂಕಣಕ್ಕೆಯ ತಿರುವುತ ಬಾರೆ
ಕುಂಕುಮಾಂಕಿತೇ ಪಂಕಜಲೋಚನೆ
ವೇಂಕಟರಮಣನ ಬಿಂಕದ ರಾಣೀ

ಅತ್ತಿತ್ತಗಲದೆ ಭಕ್ತರ ಮನೆಯಲಿ
ನಿತ್ಯಮಹೋತ್ಸವ ನಿತ್ಯ ಸುಮಂಗಲ
ಸತ್ಯವ ತೋರುವ ಸಾಧುಸಜ್ಜನರ
ಚಿತ್ತದಿ ಹೊಳೆಯುವ ಪುತ್ಥಳಿಗೊಂಬೆ

ಸಕ್ಕರೆ ತುಪ್ಪದ ಕಾಲುವೆ ಹರಿಸಿ
ಶುಕ್ರವಾರದ ಪೂಜೆಯ ವೇಳೆಗೆ
ಅಕ್ಕರೆಯುಳ್ಳ ಅಳಗಿರಿರಂಗನ
ಚೊಕ್ಕ ಪುರಂದರ ವಿಠಲನ ರಾಣಿ





# ಕೇದಾರೇಶ್ವರ ವ್ರತ

## (ಆಶ್ವೀಜ ಬಹುಳ ಅಮಾವಾಸ್ಯೆಯ ದಿನ ಆಚರಿಸಬೇಕು)

**ಕೇದಾರೇಶ್ವರ ವ್ರತಕ್ಕೆ ಸಿದ್ಧತೆಗಳು :**

1. ಎರಡು ಕಲಶ – ತೆಂಗಿನ ಕಾಯಿ
2. ಪೀಠಕ್ಕಾಗಿ ಅಕ್ಕಿಯನ್ನು ಹರಡಿ.
3. ಪೂಜೆಯ ಸಿದ್ಧತೆಯೆಲ್ಲ ವಿನಾಯಕ ವ್ರತದಂತೆ.
4. ಹತ್ತೊಂಬತ್ತು ಎಳೆಯ ದಾರವನ್ನು ತೆಗೆದಿರಿಸಿಕೊಳ್ಳಿ.
5. ವಾಯನದಾನಕ್ಕಾಗಿ ಸಾಮಗ್ರಿ.

ಆಚಮ್ಯ – (ಆಚಮನವನ್ನು ಮಾಡುವುದು) ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಕ್ಷಸಾಮ್। ಕುರ್ವೇ ಘಂಟಾರವಂ ತತ್ರ ದೇವತಾಹ್ವಾನ ಲಾಂಛನಮ್॥ ಇತಿ ಘಂಟಾನಾದಂ ಕೃತ್ವಾ॥ (ಘಂಟೆಯನ್ನು ಬಾರಿಸುವುದು)

**ಶ್ಲೋಕ॥ ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ।**
**ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ॥**
**ಶ್ರೀಮನ್ ಮಹಾಗಣಾಧಿಪತಯೇ ನಮಃ॥**

ದೇವೀ ಗಾಯತ್ರೀ ಛಂದಃ ಪ್ರಾಣಾಯಾಮೇ ವಿನಿಯೋಗಂ ಓಂ ಭೂಃ :– ರೋಮ್.... ಮಮ ಉಪಾತ್ತ... ಪ್ರೀತ್ಯರ್ಥಂ ಶುಭೇ... ಮಧ್ಯೇ... ನಾಮ ಸಂವತ್ಸರೇ, ದಕ್ಷಿಣಾಯನೇ, ಶರಧೃತೌ, ಆಶ್ವಯುಜ ಮಾಸೇ, ಕೃಷ್ಣಪಕ್ಷೇ, ಅಮಾಯಾಂ ಶುಭತಿಥೌ.... ಯುಕ್ತಾಯಾಂ ಅಸ್ಯಾ ಶುಭತಿಥೌ, ಅಸ್ಮಾಕಂ ಸಹ ಕುಟುಂಬಾನಾಂ ಕ್ಷೇಮಸ್ಥೈರ್ಯ ವಿಜಯಾಯುರಾರೋಗ್ಯೈಶ್ವರ್ಯಾಭಿವೃದ್ಧ್ಯರ್ಥಂ ಧರ್ಮಾರ್ಥ ಕಾಮಮೋಕ್ಷ ಚತುರ್ವಿಧ ಫಲ ಪುರುಷಾರ್ಥ ಸಿದ್ಧ್ಯರ್ಥಂ ಪುತ್ರಪೌತ್ರಾಭಿ ವೃದ್ಧ್ಯರ್ಥಂ ವರ್ಷೇ ವರ್ಷೇ ಕರ್ತವ್ಯ ಏತದ್ವರ್ಷ ಪ್ರಯುಕ್ತಂ ಕೇದಾರೇಶ್ವರ ದೇವತಾಮುದ್ದಿಶ್ಯ ಕೇದಾರೇಶ್ವರ ದೇವತಾ ಪ್ರೀತ್ಯರ್ಥಂ ಭವಿಷ್ಯೋತ್ತರ ಪುರಾಣೋಕ್ತ ಕಲ್ಪೋಕ್ತ ಪ್ರಕಾರೇಣ ಯಾವಚ್ಛಕ್ತಿ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾಂ ಕರಿಷ್ಯೇ॥

**ಕಲಶ ಪೂಜೆ**

ಕಲಶಂ ಗಂಧಾಕ್ಷತ ಪತ್ರಪುಷ್ಪೈರಭ್ಯರ್ಚ್ಯ (ಕಲಶಕ್ಕೆ ಮೂರು ಕಡೆಗಳಲ್ಲಿ ಗಂಧವನ್ನಿಟ್ಟು ಅಕ್ಷತೆಯನ್ನು ಗಂಧದ ಬೊಟ್ಟಿನ ಮೇಲೆ ಒತ್ತಿ ಕಲಶದಲ್ಲಿ ಪುಷ್ಪವನ್ನು ಹಾಕಿ ಕೈಯನ್ನು ಹಿಡಿದುಕೊಳ್ಳುವುದು.)

ಶ್ಲೋಕ।। ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಾಃ। ಮೂಲೇ ತತ್ರಸ್ಥಿತೋ ಬ್ರಹ್ಮಾಮಧ್ಯೇ ಮಾತೃಗಣಾಸ್ಮೃತಾಃ।। ಕುಕ್ಷೌತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ। ಋಗ್ವೇದೋಥಯಜುರ್ವೇದ ಸಾಮವೇದ್ಯೋಹ್ಯಥರ್ವಣಃ ಅಂಗೈಶ್ಚ-ಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾಃ। ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ। ಗಂಗೇ ಚ ಯಮುನೇಚೈವ ಗೋದಾವರೀ ಸರಸ್ವತೀ। ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು।।

ಮಂತ್ರಃ – ಆಪೋವಾ ಇದಗ್ಂ ಸರ್ವಂ ವಿಶ್ವಾಭೂತಾನಾಪಃ ಪ್ರಾಣಾವಾ ಆಪಃ ಪಶವ ಆಪೋನ್ನಮಾಪೋಮೃತಮಾಪಸ್ಸಮ್ರಾಡಾಪೋ ವಿರಾಡಾಪಸ್ವರಾಡಾಪಶ್ಛಂದಾಗ್ ಸ್ಯಾಪೋ ಜ್ಯೋತಿಗ್ಂಷ್ಯಾಪೋ ಯಜುಗುಷ್ಯಾಪಸ್ಸತ್ಯಮಾನಸ್ಸರ್ವ ದೇವತಾ ಆಪೋ ಭೂರ್ಭುವಸ್ಸುರಾಪ ಓಂ।।

ಕಲಶೋದಕೇನ ಪೂಜಾದ್ರವ್ಯಾಣಿ ಸಂಪ್ರೋಕ್ಷ್ಯದೇವಮಾತ್ಮಾನಂಚಪ್ರೋಕ್ಷಯೇತ್ (ಕಲಶದಲ್ಲಿರುವ ನೀರನ್ನು ತೆಗೆದುಕೊಂಡು ದೇವರಮೇಲೆಯೂ, ಪೂಜಾ ದ್ರವ್ಯಗಳ ಮೇಲೆಯೂ, ತನ್ನ ಮೇಲೂ ಪ್ರೋಕ್ಷಣೆಯನ್ನು ಮಾಡಿಕೊಳ್ಳಬೇಕು.)

**ಗಣಾಧಿಪತಿ ಪೂಜಾ**

ಗಣಾನಾಂತ್ವಾ ಗಣಪತಿಗ್ಂಹವಾಮಹೇ ಕವಿಂ ಕವೀನಾಮುಪಶ್ರವಸ್ತಮಂ ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಶೃಣ್ವನ್ನೂ ತಿಭಿಸ್ಸೀದಸಾಧನಂ।।

**- ಮಹಾಗಣಪತಿಂ ಧ್ಯಾಯಾಮಿ -**

ಮಹಾಗಣಾಧಿಪತಯೇ ನಮಃ – ಆಸನಂ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಪಾದ್ಯಂ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಆಚಮನೀಯಂ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಔಪಚಾರಿಕಸ್ನಾನಂ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಸ್ನಾನಾನಂತರಂ ಆಚಮನೀಯಂಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ವಸ್ತ್ರಾರ್ಥಂ ಅಕ್ಷತಾನ್ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಯಜ್ಞೋಪವೀತಾರ್ಥಂ ಅಕ್ಷತಾನ್ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಗಂಧಾನ್ ಧಾರಯಾಮಿ

ಗಂಧಸ್ಯೋಪರಿ ಅಲಂಕಾರಾರ್ಥಂ ಅಕ್ಷತಾನ್ ಸಮರ್ಪಯಾಮಿ। ಪುಷ್ಪಂ ಪೂಜಯಾಮಿ॥ ಓಂ ಸುಮುಖಾಯ ನಮಃ, ಏಕದಂತಾಯ ನಮಃ, ಕಪಿಲಾಯ ನಮಃ, ಗಜಕರ್ಣಕಾಯ ನಮಃ, ಲಂಭೋದರಾಯ ನಮಃ, ವಿಕಟಾಯ ನಮಃ, ವಿಘ್ನರಾಜಾಯ ನಮಃ, ಕುಮಾರಗುರವೇ ನಮಃ, ಈಶ್ವರಪುತ್ರಾಯ ನಮಃ, ಸರ್ವಸಿದ್ಧಿಪ್ರದಾಯಕಾಯ ನಮಃ, ಮಹಾಗಣಾಧಿಪತಯೇ ನಮಃ. ನಾನಾವಿಧ ಪರಿಮಳ ಪತ್ರಪುಷ್ಪಾಣಿ ಸಮರ್ಪಯಾಮಿ, ಧೂಪಾರ್ಥಂ ಅಕ್ಷತಾನ್ ಸಮರ್ಪಯಾಮಿ, ಶ್ರೀಮನ್ ಮಹಾಗಣಾಧಿಪತಯೇ ನಮಃ, ದೀಪಾರ್ಥಂ ಅಕ್ಷತಾನ್ ಸಮರ್ಪಯಾಮಿ, ಓಂ ಭೂರ್ಭುವಸ್ಸುವಃ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯತ್ ದೇವಸವಿತಃ ಪ್ರಸುವ, ಸತ್ಯಂತ್ವರ್ತೇನಪರಿಷಿಂಚಾಮಿ, ಅಮೃತಮಸ್ತು ಅಮೃತೋಪಸ್ತರಣಮಸೀ ಸ್ವಾಹಾ, ಓಂ ಪ್ರಾಣಾಯ ಸ್ವಾಹಾ, ಓಂ ಅಪಾನಾಯ ಸ್ವಾಹಾ, ಓಂ ವ್ಯಾನಾಯ ಸ್ವಾಹಾ, ಉದಾನಾಯ ಸ್ವಾಹಾ, ಬ್ರಹ್ಮಣೇ ಸ್ವಾಹಾ, ಬ್ರಹ್ಮಣಿಮ, ಆತ್ಮಾಮೃತತ್ವಾಯ... ಮಹಾಗಣಾಧಿಪತಯೇ ನಮಃ ನಿವೇದನಂ ಸಮರ್ಪಯಾಮಿ, ಮಹಾಗಣಾಧಿಪತಯೇ ನಮಃ ಮಧ್ಯೆ ಮಧ್ಯೇ ಪಾನೀಯಂ ಸಮರ್ಪಯಾಮಿ, ಮಹಾಗಣಾಧಿಪತಯೇ ನಮಃ ತಾಂಬೂಲಂ ಸಮರ್ಪಯಾಮಿ, ಮಹಾಗಣಾಧಿಪತಯೇ ನಮಃ ನೀರಾಜನಂ ಸಮರ್ಪಯಾಮಿ, ನೀರಾಜನಾನಂತರಂ ಆಚಮನೀಯಂ ಸಮರ್ಪಯಾಮಿ॥

ವಕ್ರತುಂಡಮಹಾಕಾಯ ಕೋಟಿಸೂರ್ಯ ಸಮಪ್ರಭ। ಅವಿಘ್ನಂ ಕುರುಮೇ ದೇವ ಸರ್ವಕಾರ್ಯೇಷು ಸರ್ವದಾ॥ ಮಹಾಗಣಾಧಿಪತಯೇ ನಮಃ – ಮಂತ್ರಪುಷ್ಪಂ ಸಮರ್ಪಯಾಮಿ, ಆತ್ಮಪ್ರದಕ್ಷಿಣ ನಮಸ್ಕಾರಂ ಸಮರ್ಪಯಾಮಿ, ಸರ್ವೋಪಚಾರ ಪೂಜಾಂ ಸಮರ್ಪಯಾಮಿ॥ ಯಸ್ಯಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾ ಕ್ರಿಯಾದಿಷು। ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಂ। ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಗಣಾಧಿಪ॥ ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತುತೇ॥ ಅನಯಾ ಷೋಡಶೋಪಚಾರಪೂಜಯಾಭಗವಾನ್ ಸರ್ವಾತ್ಮಕಃ ಶ್ರೀ ಮಹಾಗಣಾಧಿಪತಿಃ ಸುಪ್ರಸನ್ನೋ ವರದೋ ಭವತು (ಎಂದು ಹೇಳಿ ಹೂವು ಅಕ್ಷತೆಯನ್ನು ತೆಗೆದುಕೊಂಡು ನೀರು ಹಾಕಿ ಬಿಡತಕ್ಕದ್ದು)

ಗಣಾಧಿಪತಿ ಪ್ರಸಾದಂ ಶಿರಸಾಗೃಹ್ಣಾಮಿ (ಎಂದು ಹೂವು ಅಕ್ಷತೆಗಳನ್ನು ಶಿರದಲ್ಲಿ ಧರಿಸತಕ್ಕದ್ದು.)

## ಪ್ರಾಣಪ್ರತಿಷ್ಠೆ :

ಅಸ್ಯಶ್ರೀ ಕೇದಾರೇಶ್ವರ ಪ್ರಾಣಪ್ರತಿಷ್ಠಾಪನ ಮಹಾಮಂತ್ರಸ್ಯ ಬ್ರಹ್ಮಾವಿಷ್ಣು ಮಹೇಶ್ವರಾಋಷಯಃ। ಋಗ್ಯಜುಸ್ಸಾಮಾಥರ್ವಾಣಿ ಛಂದಾಂಸಿ। ಪ್ರಾಣಶಕ್ತಿಃ, ಪರಾದೇವತಾ, ಹ್ರಾಂ ಬೀಜಂ, ಹ್ರೀಂ ಶಕ್ತಿಃ, ಹ್ರೂಂ ಕೀಲಕಂ, ಮಮ ಕೇದಾರೇಶ್ವರ ಪ್ರಾಣಪ್ರತಿಷ್ಠಾ ಸಿದ್ಧ್ಯರ್ಥೇ ಜಪೇವಿನಿಯೋಗಃ॥

| ಕರನ್ಯಾಸ | ಅಂಗನ್ಯಾಸ |
|---|---|
| ಹ್ರಾಂ ಅಂಗುಷ್ಠಾ ಭ್ಯಾಂನಮಃ | ಹ್ರಾಂ ಹೃದಯಾಯನಮಃ |
| ಹ್ರೀಂ ತರ್ಜನೀಭ್ಯಾಂನಮಃ | ಹ್ರೀಂ ಶಿರಸೇಸ್ವಾಹಾ |
| ಹ್ರೂಂ ಮಧ್ಯಮಾಭ್ಯಾಂನಮಃ | ಹ್ರೂ ಶಿಖಾಯೈವೌಷಟ್ |
| ಹ್ರೇಂ ಅನಾಮಿಕಾಭ್ಯಾಂನಮಃ | ಹ್ರೌಂ ನೇತ್ರತ್ರಯಾಯ ವೌಷಟ್ |
| ಹ್ರಃ ಕರತಲಕರಪೃಷ್ಠಾಭ್ಯಾಂನಮಃ | ಹ್ರಃ ಅಸ್ತ್ರಾಯಫಟ್ |
| | ಭೂರ್ಭುವಸ್ಸುವರೋಮಿತಿ ದಿಗ್ಬಂಧಃ |

## ಧ್ಯಾನಂ

ಶ್ಲೋಕ|| ರಕ್ತಾಂಬೋಧಿಸ್ಥಪೋತೋಲಿಸದರುಣ ಸರೋಜಾಧಿರೂಢಾಂ| ಕರಾಬ್ಜೈಃ ಪಾಶಂ ಕೋದಂಡಮಿಕ್ಷೋದ್ಭವ ಮಣಿಗಣಮಪ್ಯಂಕುಶಂ ಪಂಚಬಾಣಾನ್ ಭಿಭ್ರಾಣಾಸೃಕ್ಕಪಾಲಂ ತ್ರಿನಯನಲಸಿತಾ ಪೀನವಕ್ಷೋರುಹಾಢ್ಯಾ|| ದೇವೀ ಬಾಲಾರ್ಕ ವರ್ಣಾಭವತು ಸುಖಕರೀ ಪ್ರಾಣಶಕ್ತಿಃ ಪರಾನಃ||

ಹ್ರಾಂ, ಹ್ರೀಂ, ಹ್ರೂಂ, ಕ್ರೋಂ, ಯ, ರ, ಲ, ವ, ಶ, ಷ, ಸ, ಹೋಂ, ಓಂ ವರಸಿದ್ಧಿವಿನಾಯಕ ಪ್ರಾಣಃ ಮಮ ಪ್ರಾಣಃ (ವರಸಿದ್ಧಿ ವಿನಾಯಕಜೀವಃ) ಮಮಜೀವಃ ವಾಂಗ್ಮನಃ, ಶ್ರೋತ್ರ, ಜಿಹ್ವಾಘ್ರಾಣೈಃ ಉಚ್ಛ್ವಾಸನಿಃಶ್ವಾಸ ರೂಪೇಣ ಬಹಿರಾಗತ್ಯ ಅಸ್ಮಿನ್ ಬಿಂಬೇ| (ಅಸ್ಮಿನ್ ಕಲಶೇ, ಅಸ್ಯಾಂ ಪ್ರತಿಮಾಯಾಂ) ಸುಖೇನ ಚಿರಂ ತಿಷ್ಠಂತು ಸ್ವಾಹಾ||

ಮಂತ್ರಃ – ಅಸುನೀತೇ ಪುನರಸ್ಮಾಸುಚಕ್ಷುಃ ಪುನಃ ಪ್ರಾಣಮಿಹಃನೋ ದೇಹಿ ಭೋಗಂ ಜ್ಯೋಕ್ಪಶ್ಯೇಮ ಸೂರ್ಯಮುಚ್ಚರಂತಂ ಮನುಮತೇ ಮೃಡಯಾನ ಸ್ವಸ್ತಿ|| ಅಮೃತಂ ವೈ ಪ್ರಾಣಾ ಅಮೃತಮಾಪಃ ಪ್ರಾಣಾನೇವ ಯಥಾಸ್ಥಾನ ಮುಪಹ್ವಯೇತ್||

**ಶ್ಲೋಕ|| ಸ್ವಾಮಿನ್ ಸರ್ವಜಗನ್ನಾಥ ಯಾವತ್ಪೂಜಾವಸಾನಕಂ|**
**ತಾವತ್ತ್ವಂ ಪ್ರೀತಿಭಾವೇನ ಬಿಂಬೇಸ್ಮಿನ್ ಸನ್ನಿಧಿಂಕುರು||**

ಆವಾಹಿತೋಭವ, ಸ್ಥಾಪಿತೋಭವ, ಸುಪ್ರಸನ್ನೋಭವ, ವರದೋಭವ, ಅವಕುಂಠಿತೋಭವ, ಮಮ ಸರ್ವಾಭೀಷ್ಟಫಲಪ್ರದೋಭವ||

ಮಂತ್ರಃ – ಆತ್ವಾವಹಂತು ಹರಯಸ್ವಚೇತಶ್ಶ್ವೇತ್ತೈರಶ್ವೈ ಸ್ಸಹಕೇತುಮದ್ಭಿಃ ವಾತಾಜವೈರ್ಬಲವದ್ಭಿರ್ಮನೋಜವೈರಾಯಾಹಿ ಶೀಘ್ರಂ ಮಮ ಹವ್ಯಾಯಶರ್ವೋಂ|| (ಈ ಮಂತ್ರವನ್ನು ಹೇಳಿ ಹೂವು ಅಕ್ಷತೆಯನ್ನು ಕೇದಾರೇಶ್ವರಸ್ವಾಮಿ ಪ್ರತಿಮೆಯ ಮೇಲಿಟ್ಟು ಕರವನ್ನು ಸಿಂಬದ ಮೇಲಿಡಬೇಕು.)

ಯತ್ಕಿಂಚಿನ್ನಿ ವೇದನಂ ಕುರ್ಯಾತ್||

ಇತಿ ಪ್ರಾಣಪ್ರತಿಷ್ಠಾಪನ ವಿಧಿಃ ಸಂಪೂರ್ಣಂ

# ಕೇದಾರೇಶ್ವರ ಪೂಜೆ

ಅಥ ಧ್ಯಾನಂ - ಶ್ಲೋಕ|| ಶೂಲಂ ಡಮರುಗಂ ಚೈವ ದಧಾನಂ ಹಸ್ತಯುಗ್ಮಕೇ||
ಕೇದಾರದೇವಮೀಶಾನಂ ಧ್ಯಾಯೇತ್ತ್ರಿಪುರಘಾತಿನಂ||
ಕೇದಾರೇಶ್ವರ ಧ್ಯಾಯಾಮಿ

(ಶೂಲ ಡಮರುಗಗಳನ್ನು ಎರಡು ಕೈಗಳಲ್ಲಿಯೂ ಧರಿಸಿರತಕ್ಕ ಕೇದಾರೇಶ್ವರನಾದ, ತ್ರಿಪುರಸಂಹಾರಿಯಾದ ಈಶ್ವರನನ್ನು ಧ್ಯಾನಿಸುತ್ತೇನೆಂದು ಅರ್ಥವು)

ಶ್ಲೋಕ|| ಕೈಲಾಸಶಿಖರೇ ರಮ್ಯೇ ಪಾರ್ವತ್ಯಾಸಹಿತ ಪ್ರಭೋ|
ಆಗಚ್ಛ ದೇವದೇವೇಶ ಮದ್ಭಕ್ತ್ಯಾ ಚಂದ್ರಶೇಖರ||
ಕೇದಾರೇಶ್ವರಮಾವಾಹಯಾಮಿ

ಶ್ಲೋಕ|| ಸುರಾಸುರ ಶಿರೋರತ್ನ ಪ್ರದೀಪಿತ ಪದಾಂಬುಜ|
ಕೇದಾರದೇವಮದ್ದತ್ತಮಾಸನಂ ಪ್ರತಿಗೃಹ್ಯತಾಂ||
ಕೇದಾರೇಶ್ವರಾಯ ನಮಃ– ಆಸನಂ ಸಮರ್ಪಯಾಮಿ

ಶ್ಲೋಕ|| ಗಂಗಾಧರ ನಮಸ್ತೇಸ್ತು ತ್ರಿಲೋಚನ ವೃಷಧ್ವಜ|
ಮೌಕ್ತಿಕಾಸನಸಂಸ್ಥಾಯ ಕೇದಾರಾಯ ನಮೋನಮಃ||
ಕೇದಾರೇಶ್ವರಾಯ ನಮಃ – ಪಾದ್ಯಂ ಸಮರ್ಪಯಾಮಿ

ಶ್ಲೋಕ|| ಅರ್ಘ್ಯಂ ಗೃಹಾಣ ಭಗವನ್ ಭಕ್ತ್ಯಾದತ್ತಂ ಮಹೇಶ್ವರ|
ಪ್ರಯಚ್ಛಮೇ ಮನಸ್ತುಷ್ಟಿಂ ಭಕ್ತಾನಾಮಿಷ್ಟದಾಯಕ||
ಕೇದಾರೇಶ್ವರಾಯ ನಮಃ – ಅರ್ಘ್ಯಂ ಸಮರ್ಪಯಾಮಿ

ಶ್ಲೋಕ|| ಮುನಿಭಿರ್ನಾರದ ಪ್ರಖ್ಯೈ ರ್ನಿ ತ್ಯಮಾಖ್ಯಾತ ವೈಭವ|
ಕೇದಾರದೇವ ಭಗವನ್ ಗೃಹಾಣಾಚಮನಂ ವಿಭೋ||
ಕೇದಾರೇಶ್ವರಾಯ ನಮಃ – ಆಚಮನೀಯಂ ಸಮರ್ಪಯಾಮಿ

ಶ್ಲೋಕ|| ಕೇದಾರದೇವ ಭಗವನ್ ಸರ್ವಲೋಕೇಶ್ವರ ಪ್ರಭೋ|
ಮಧುಪರ್ಕಂ ಪ್ರದಾಸ್ಯಾಮಿ ಗೃಹಾಣತ್ವಂ ಶುಭಂಕರ||
ಕೇದಾರೇಶ್ವರಾಯ ನಮಃ – ಮಧುಪರ್ಕಂ ಸಮರ್ಪಯಾಮಿ

ಶ್ಲೋಕ|| ಸ್ನಾನಂ ಪಂಚಾಮೃತೈರ್ದೇವ ಶ್ರುತಶುದ್ಧೋದಕೈರಪಿ
ಗೃಹಾಣ ಗೌರೀರಮಣತ್ವದ್ಭಕ್ತೇನಮಯಾರ್ಪಿತಂ|
ಕೇದಾರೇಶ್ವರಾಯನಮಃ – ಪಂಚಾಮೃತಸ್ನಾನಂ ಸಮರ್ಪಯಾಮಿ

ಶ್ಲೋಕ॥ ನದೀಜಲಂ ಸಮಾಯುಕ್ತಂ ಮಯಾದತ್ತಕ ಮನುತ್ತಮಂ।
ಸ್ನಾನಂ ಸ್ವೀಕುರು ದೇವೇಶ ಸದಾಶಿವ ನಮೋಸ್ತುತೇ॥
ಕೇದಾರೇಶ್ವರಾಯ ನಮಃ – ಸ್ನಾನಂ ಸಮರ್ಪಯಾಮಿ

ಶ್ಲೋಕ॥ ವಸ್ತ್ರಯುಗ್ಮಂ ಸದಾಶುಭ್ರಂ ಮನೋಹರಮಿದಂ ಶುಭಂ
ದದಾಮಿ ದೇವದೇವೇಶ ಭಕ್ತ್ಯೇದಂ ಪ್ರತಿಗೃಹ್ಯತಾಂ॥
ಕೇದಾರೇಶ್ವರಾಯ ನಮಃ – ವಸ್ತ್ರಯುಗ್ಮಂ ಸಮರ್ಪಯಾಮಿ

ಶ್ಲೋಕ॥ ಸ್ವರ್ಣಯಜ್ಞೋಪವೀತಂ ಚ ಕಾಂಚನಂ ಚೋತ್ತರೀಯಕಂ।
ರುದ್ರಾಕ್ಷಮಾಲಾಯುಕ್ತಂ ಚ ದದಾಮಿ ಸ್ವೀಕುರು ಪ್ರಭೋ॥
ಕೇದಾರೇಶ್ವರಾಯನಮಃ ಯಜ್ಞೋಪವೀತೋತ್ತರೀಯೇ
ಸಮರ್ಪಯಾಮಿ

ಶ್ಲೋಕ॥ ಸಮಸ್ತಗಂಧದ್ರವ್ಯಾಣಾಂ ದೇವತ್ವಮಸಿ ಜನ್ಮಭೂಃ।
ಭಕ್ತ್ಯಾಸಮರ್ಪಿತಂ ಪ್ರೀತ್ಯಾ ಮಯಾ ಗಂಧಾದಿ ಗೃಹ್ಯತಾಂ॥
ಕೇದಾರೇಶ್ವರಾಯ ನಮಃ – ಗಂಧಾನ್ ಧಾರಯಾಮಿ

ಶ್ಲೋಕ॥ ಅಕ್ಷತೋಸಿಸ್ವಭಾವೇನ ಭಕ್ತ್ಯಾನಾಮಕ್ಷತಂ ಪದಂ।
ದದಾಸಿನಾಥಮದ್ದತ್ತೈರಕ್ಷತೈಃ ಪ್ರೀಯತಾಂಭವಾನ್॥
ಕೇದಾರೇಶ್ವರಾಯ ನಮಃ – ಅಕ್ಷತಾನ್ ಸಮರ್ಪಯಾಮಿ

ಶ್ಲೋಕ॥ ಕಲ್ಪವೃಕ್ಷಪ್ರಸೂನೈಸ್ತ್ವಂ ಪೂರ್ವೈರಭ್ಯರ್ಚಿತ ಸುರೈಃ।
ಕುಂಕುಮೈಃಪಾರ್ಥಿವೈರೇಭಿರಿದಾನೀಮರ್ಚ್ಯತೇಮಯಾ॥
ಕೇದಾರೇಶ್ವರಾಯನಮಃ – ಪುಷ್ಪಾಣಿ ಸಮರ್ಪಯಾಮಿ
ತತಃ ಇಂದ್ರಾದಿ ಲೋಕಪಾಲ ಪೂಜಾಂ ಕುರ್ಯಾತ್

ಶಿವಸ್ಯ ದಕ್ಷಿಣಭಾಗೇ (ಎಡಭಾಗ) ಬ್ರಹ್ಮಣೇ ನಮಃ ಉತ್ತರಭಾಗೇ (ಬಲಭಾಗ) ವಿಷ್ಣವೇ ನಮಃ ಮಧ್ಯೇ ಕೇದಾರೇಶ್ವರಾಯ ನಮಃ॥

## ಅಥ ಅಂಗಪೂಜಾ

| | | |
|---|---|---|
| ಓಂ ಮಹೇಶ್ವರಾಯ ನಮಃ | ಪಾದೌ ಪೂಜಾಯಮಿ | (ಪಾದಗಳು) |
| ಓಂ ಈಶ್ವರಾಯ ನಮಃ | ಜಂಘೇ ಪೂಜಾಯಾಮಿ | (ಹಿಂಭಾಗ) |
| ಓಂ ಕಾಮರೂಪಾಯ ನಮಃ | ಜಾನುನೀ ಪೂಜಾಯಾಮಿ | (ಮೊಣಕಾಲು) |
| ಓಂ ಹರಾಯ ನಮಃ | ಊರೂನ್ ಪೂಜಾಯಾಮಿ | (ತೊಡೆ) |
| ಓಂ ತ್ರಿಪುರಾಂತಕಾಯನಮಃ | ಗುಹ್ಯಂ ಪೂಜಯಾಮಿ | (ನಡುವಿನ ಭಾಗ) |
| ಓಂ ಭವಾಯ ನಮಃ | ಕಟಿಂ ಪೂಜಯಾಮಿ | (ನಡು) |

| | | |
|---|---|---|
| ಓಂ ಗಂಗಾಧರಾಯ ನಮಃ | ನಾಭಿಂ ಪೂಜಯಾಮಿ | (ಹೊಕ್ಕಳು) |
| ಓಂ ಮಹಾದೇವಾಯ ನಮಃ | ಉದರಂ ಪೂಜಯಾಮಿ | (ಹೊಟ್ಟೆ) |
| ಓಂ ಪಶುಪತಯೇ ನಮಃ | ಹೃದಯಂ ಪೂಜಯಾಮಿ | (ಎದೆ) |
| ಓಂ ಪಿನಾಕಿನೇ ನಮಃ | ಹಸ್ತಾನ್ ಪೂಜಯಾಮಿ | (ಕೈಗಳು) |
| ಓಂ ಶಿವಾಯ ನಮಃ | ಭುಜೌ ಪೂಜಯಾಮಿ | (ಭುಜಗಳು) |
| ಓಂ ಶಿತಿಕಂಠಾಯ ನಮಃ | ಕಂಠಂ ಪೂಜಯಾಮಿ | (ಕಂಠ) |
| ಓಂ ವಿರೂಪಾಕ್ಷಾಯ ನಮಃ | ಮುಖಂ ಪೂಜಯಾಮಿ | (ಮುಖ) |
| ಓಂ ತ್ರಿನೇತ್ರಾಯ ನಮಃ | ನೇತ್ರಾನ್ ಪೂಜಯಾಮಿ | (ಕಣ್ಣುಗಳು) |
| ಓಂ ರುದ್ರಾಯ ನಮಃ | ಲಲಾಟಂ ಪೂಜಯಾಮಿ | (ಹಣೆ) |
| ಓಂ ಶರ್ವಾಯ ನಮಃ | ಶಿರಃ ಪೂಜಯಾಮಿ | (ತಲೆ) |
| ಓಂ ಚಂದ್ರಮೌಳಯೇ ನಮಃ | ಮೌಳಿಂ ಪೂಜಯಾಮಿ | (ಮೌಳಿ) |
| ಓಂ ಪಶುಪತಯೇ ನಮಃ | ಸರ್ವಾಂಗಾನಿ ಪೂಜಯಾಮಿ | (ಎಲ್ಲಾ ಅಂಗಗಳು) |

## ಅಥ ಶಿವಾಷ್ಟೋತ್ತರ ಶತನಾಮಾವಳಿಃ

ಓಂ ಶಿವಾಯ ನಮಃ
ಮಹೇಶ್ವರಾಯ ನಮಃ
ಶಂಭವೇ ನಮಃ
ಪಿನಾಕಿನೇ ನಮಃ
ಶಶಿಶೇಖರಾಯನಮಃ
ವಾಮದೇವಾಯ ನಮಃ
ವಿರೂಪಾಕ್ಷಾಯ ನಮಃ
ಕಪರ್ದಿನೇ ನಮಃ
ನೀಲಲೋಹಿತಾಯ ನಮಃ
ಶಂಕರಾಯ ನಮಃ 10
ಶೂಲಪಾಣಯೇ ನಮಃ
ಖಟ್ವಾಂಗಿನೇ ನಮಃ
ವಿಷ್ಣುವಲ್ಲಭಾಯ ನಮಃ
ಶಿಪಿವಿಷ್ಟಾಯ ನಮಃ
ಅಂಬಿಕಾನಾಥಾಯ ನಮಃ
ಶ್ರೀಕಂಠಾಯನಮಃ
ಭಕ್ತವತ್ಸಲಾಯ ನಮಃ
ಭವಾಯ ನಮಃ
ಶರ್ವಾಯ ನಮಃ
ತ್ರಿಲೋಕೇಶಾಯ ನಮಃ 20
ಶಿತಿಕಂಠಾಯ ನಮಃ
ಶಿವಪ್ರಿಯಾಯ ನಮಃ
ಉಗ್ರಾಯ ನಮಃ
ಕಪರ್ದಿನೇ ನಮಃ
ಕಾಮಾರಯೇನಮಃ
ಅಂಧಕಾಸುರಸೂದನಾಯ ನಮಃ
ಗಂಗಾಧರಾಯ ನಮಃ
ಲಲಾಟಾಕ್ಷಾಯ ನಮಃ
ಕಾಲಕಾಲಾಯ ನಮಃ
ಕೃಪಾನಿಧಯೇ ನಮಃ 30
ಭೀಮಾಯ ನಮಃ
ಪರಶುಹಸ್ತಾಯ ನಮಃ
ಮೃಗಪಾಣಯೇ ನಮಃ
ಜಟಾಧರಾಯ ನಮಃ
ಕೈಲಾಸವಾಸಿನೇ ನಮಃ
ಕವಚಿನೇ ನಮಃ

ಕಠೋರಾಯ ನಮಃ
ತ್ರಿಪುರಾಂತಕಾಯನಮಃ
ವೃಷಾಂಕಾಯ ನಮಃ
ವೃಷಭಾರೂಢಾಯ ನಮಃ 40
ಭಸ್ಮೋದ್ಧೂಳಿತವಿಗ್ರಹಾಯ ನಮಃ
ಸಾಮಪ್ರಿಯಾಯ ನಮಃ
ಸ್ವರಮಯಾಯ ನಮಃ
ತ್ರಯೀಮೂರ್ತಯೇ ನಮಃ
ಅನೀಶ್ವರಾಯ ನಮಃ
ಸರ್ವಜ್ಞಾಯ ನಮಃ
ಪರಮಾತ್ಮನೇ ನಮಃ
ಸೋಮಸೂರ್ಯಾಗ್ನಿಲೋಚನಾಯನಮಃ
ಹವಿಷೇ ನಮಃ
ಯಜ್ಞಮಯಾಯ ನಮಃ 50
ಸೋಮಾಯ ನಮಃ
ಪಂಚವಕ್ತ್ರಾಯ ನಮಃ
ಸದಾಶಿವಾಯ ನಮಃ
ವಿಶ್ವೇಶ್ವರಾಯ ನಮಃ
ವೀರಭದ್ರಾಯ ನಮಃ
ಗಣನಾಥಾಯ ನಮಃ
ಪ್ರಜಾಪತಯೇ ನಮಃ
ಹಿರಣ್ಯರೇತಸೇ ನಮಃ
ದುರ್ಧರ್ಷಾಯ ನಮಃ
ಗಿರೀಶಾಯ ನಮಃ 60
ಗಿರಿಶಾಯ ನಮಃ
ಅನಘಾಯ ನಮಃ
ಭುಜಂಗಭೂಷಣಾಯ ನಮಃ
ಭರ್ಗಾಯ ನಮಃ
ಗಿರಿಧನ್ವಿನೇ ನಮಃ
ಗಿರಿಪ್ರಿಯಾಯ ನಮಃ
ಕೃತ್ತಿವಾಸಸೇ ನಮಃ
ಪುರಾರಾತಯೇ ನಮಃ

ಭಗವತೇ ನಮಃ
ಪ್ರಮಥಾಧಿಪಾಯ ನಮಃ 70
ಮೃತ್ಯುಂಜಯಾಯ ನಮಃ
ಸೂಕ್ಷ್ಮತನವೇ ನಮಃ
ಜಗತ್ವ್ಯಾಪಿನೇ ನಮಃ
ಜಗದ್ಗುರವೇ ನಮಃ
ವ್ಯೋಮಕೇಶಾಯ ನಮಃ
ಮಹಾಸೇನಜನಕಾಯ ನಮಃ
ಚಾರುವಿಕ್ರಮಾಯ ನಮಃ
ರುದ್ರಾಯ ನಮಃ
ಭೂತಪತಯೇ ನಮಃ
ಸ್ಥಾಣವೇನಮಃ 80
ಅಹಿರ್ಬುಧ್ನ್ಯಾಯ ನಮಃ
ದಿಗಂಬರಾಯ ನಮಃ
ಅಷ್ಟಮೂರ್ತಯೇ ನಮಃ
ಅನೇಕಾತ್ಮನೇ ನಮಃ
ಸಾತ್ತ್ವಿಕಾಯ ನಮಃ
ಶುದ್ಧವಿಗ್ರಹಾಯ ನಮಃ
ಶಾಶ್ವತಾಯ ನಮಃ
ಖಂಡಪರಶವೇ ನಮಃ
ಅಜಾಯ ನಮಃ
ಪಾಶವಿಮೋಚಕಾಯ ನಮಃ 90
ಮೃಡಾಯ ನಮಃ
ಪಶುಪತಯೇ ನಮಃ
ದೇವಾಯ ನಮಃ
ಮಹಾದೇವಾಯ ನಮಃ
ಅವ್ಯಯಾಯ ನಮಃ
ಹರಯೇ ನಮಃ
ಪೂಷದಂತಭಿದೇ ನಮಃ
ಅವ್ಯಗ್ರಾಯ ನಮಃ
ದಕ್ಷಾಧ್ವರಹರಾಯ ನಮಃ
ಹರಾಯ ನಮಃ 100

| | |
|---|---|
| ಭಗನೇತ್ರಭಿದೇ ನಮಃ | ಅಪವರ್ಗಪ್ರದಾಯ ನಮಃ |
| ಅವ್ಯಕ್ತ[illegible]ಸು ನಮಃ | ಅನಂತಾಯನಮಃ |
| ಸಹಸ್ರಾಕ್ಷಾಯ ನಮಃ | ತಾರಕಾಯ ನಮಃ |
| ಸಹಸ್ರಪದೇ ನಮಃ | ಪರಮೇಶ್ವರಾಯ ನಮಃ 108 |

ಶ್ರೀ ಕೇದಾರೇಶ್ವರಾಯನಮಃ ನಾನಾವಿಧ ಪರಿಮಳ ಪುತ್ರಪುಷ್ಪಾಣಿ ಸಮರ್ಪಯಾಮಿ

## ಅಥ ದೋರಗ್ರಂಥಿ ಪೂಜಾ

| | | | |
|---|---|---|---|
| ಶಿವಾಯ ನಮಃ | ಪ್ರಥಮ | ಗ್ರಂಥಿಂ | ಪೂಜಯಾಮಿ |
| ಶಾಂತಾಯ ನಮಃ | ದ್ವಿತೀಯ | ಗ್ರಂಥಿಂ | ಪೂಜಯಾಮಿ |
| ಮಹಾದೇವಾಯ ನಮಃ | ತೃತೀಯ | ಗ್ರಂಥಿಂ | ಪೂಜಯಾಮಿ |
| ವೃಷಧ್ವಜಾಯ ನಮಃ | ಚತುರ್ಥ | ಗ್ರಂಥಿಂ | ಪೂಜಯಾಮಿ |
| ಗೌರೀಶಾಯ ನಮಃ | ಪಂಚಮ | ಗ್ರಂಥಿಂ | ಪೂಜಯಾಮಿ |
| ರುದ್ರಾಯ ನಮಃ | ಷಷ್ಠಿ | ಗ್ರಂಥಿಂ | ಪೂಜಯಾಮಿ |
| ಪಶುಪತಯೇ ನಮಃ | ಸಪ್ತಮ | ಗ್ರಂಥಿಂ | ಪೂಜಯಾಮಿ |
| ಭೀಮಾಯ ನಮಃ | ಅಷ್ಟಮ | ಗ್ರಂಥಿಂ | ಪೂಜಯಾಮಿ |
| ತ್ರ್ಯಂಬಕಾಯ ನಮಃ | ನವಮ | ಗ್ರಂಥಿಂ | ಪೂಜಯಾಮಿ |
| ನೀಲಲೋಹಿತಾಯ ನಮಃ | ದಶಮ | ಗ್ರಂಥಿಂ | ಪೂಜಯಾಮಿ |
| ಹರಾಯ ನಮಃ | ಏಕಾದಶ | ಗ್ರಂಥಿಂ | ಪೂಜಯಾಮಿ |
| ಭರ್ಗಾಯನಮಃ | ದ್ವಾದಶ | ಗ್ರಂಥಿಂ | ಪೂಜಯಾಮಿ |
| ಶಂಭವೇ ನಮಃ | ತ್ರಯೋದಶ | ಗ್ರಂಥಿಂ | ಪೂಜಯಾಮಿ |
| ಶರ್ವಾಯ ನಮಃ | ಚತುರ್ದಶ | ಗ್ರಂಥಿಂ | ಪೂಜಯಾಮಿ |
| ಸದಾಶಿವಾಯ ನಮಃ | ಪಂಚದಶ | ಗ್ರಂಥಿಂ | ಪೂಜಯಾಮಿ |
| ಈಶ್ವರಾಯ ನಮಃ | ಷೋಡಶ | ಗ್ರಂಥಿಂ | ಪೂಜಯಾಮಿ |
| ಉಗ್ರಾಯ ನಮಃ | ಸಪ್ತದಶ | ಗ್ರಂಥಿಂ | ಪೂಜಯಾಮಿ |
| ಶ್ರೀಕಂಠಾರಾಯನಮಃ | ಅಷ್ಟಾದಶ | ಗ್ರಂಥಿಂ | ಪೂಜಯಾಮಿ |
| ನೀಲಕಂಠಾಯನಮಃ | ಏಕೋನವಿಂಶತಿ | ಗ್ರಂಥಿಂ | ಪೂಜಯಾಮಿ |

ಕೇದಾರೇಶ್ವರಾಯ ನಮಃ – ದೋರಗ್ರಂಥಿ ಪೂಜಾಂ ಸಮರ್ಪಯಾಮಿ

ಶ್ಲೋಕ॥ ದಶಾಂಗಧೂಪಮುಖ್ಯಶ್ಚ ಹ್ಯಂಗಾರವಿನಿರೇಶಿತಃ
ದೂಪಃ ಸುಗಂದ್ಯೈರ್ಯುತ್ಪನ್ನಃ ತ್ವಾಂ ಪ್ರೀಣಾಯತು ಶಂಕರ ॥
ಕೇದಾರೇಶ್ವರಾಯ ನಮಃ – ಧೂಪಮಾಘ್ರಾಪಯಾಮಿ

ಶ್ಲೋಕ॥ ಯೋಗೀನಾಂಹೃದಯೇಷ್ವೇವ ಜ್ಞಾನದೀಪಾಂಕುರೋಹ್ಯಸಿ
ಬಾಹ್ಯದೀಪೋಮಯಾದತ್ತಃ ಗೃಹ್ಯತಾಂ ಭಕ್ತ ಗೌರವಾತ್
ಕೇದಾರೇಶ್ವರಾಯ ನಮಃ – ದೀಪಂ ಸಮರ್ಪಯಾಮಿ

ಶ್ಲೋಕ॥ ತ್ರೈಲೋಕ್ಯಮಪಿ ನೈವೇದ್ಯಂನತೇತೃಪ್ತಿಸ್ತಥಾಬಹಿಃ।
ನೈವೇದ್ಯಂ ಭಕ್ತವಾತ್ಸಲ್ಯಾದ್ಗೃಹ್ಯತಾಂತ್ರ್ಯಂಬಕತ್ವಯಾ।
ಕೇದಾರೇಶ್ವರಾಯ ನಮಃ – ಮಹಾನೈವೇದ್ಯಂ ಸಮರ್ಪಯಾಮಿ

ಶ್ಲೋಕ॥ ನಿತ್ಯಾನಂದಸ್ವರೂಪಸ್ತ್ವಂ ಯೋಗಿಹೃತ್ಕಮಲೇಸ್ಥಿತಃ।
ಗೌರೀಶಭಕ್ತ್ಯಾಮದ್ದತ್ತಂ ತಾಂಬೂಲಂ ಪ್ರತಿಗೃಹ್ಯತಾಂ॥
ಕೇದಾರೇಶ್ವರಾಯ ನಮಃ – ತಾಂಬೂಲಂ ಸಮರ್ಪಯಾಮಿ

ಶ್ಲೋಕ॥ ಅರ್ಘ್ಯಂ ಗೃಹಾಣ ಭಗವನ್ ಭಕ್ತ್ಯಾದತ್ತಂ ಮಹೇಶ್ವರ।
ಪ್ರಯಚ್ಛಮೇ ಮನಸ್ತುಷ್ಟಿಂ ಭಕ್ತಾನಾಮಿಷ್ಟದಾಯಕ॥
ಕೇದಾರೇಶ್ವರಾಯ ನಮಃ – ಅರ್ಘ್ಯಂ ಸಮರ್ಪಯಾಮಿ

ಶ್ಲೋಕ॥ ದೇವೇಶ ಚಂದ್ರಸಂಕಾಂಶಂ ಜ್ಯೋತಿಃ ಸೂರ್ಯಮಿವೋದಿತಂ
ಭಕ್ತ್ಯಾದಾಸ್ಯಾಮಿ ಕರ್ಪೂರನೀರಾಜನಂಮಿದಂ ಶಿವ॥
ಕೇದಾರೇಶ್ವರಾಯ ನಮಃ ನೀರಾಜನಂ ದರ್ಶಯಾಮಿ

ಶ್ಲೋಕ॥ ಭೂತೇಶಭುವನಾಧೀಶ ಸರ್ವದೇವಾದಿ ಪೂಜಿತ।
ಪ್ರದಕ್ಷಿಣಂ ಕರೋಮಿತ್ವಾಂ ವ್ರತಂ ಮೇ ಸಫಲಂ ಕುರು॥
ಕೇದಾರೇಶ್ವರಾಯ ನಮಃ – ಪ್ರದಕ್ಷಿಣಂ ಸಮರ್ಪಯಾಮಿ

ಶ್ಲೋಕ॥ ಹರ ಶಂಭೋ ಮಹಾದೇವ ವಿಶ್ವೇಶಾಮರವಲ್ಲಭ।
ಶಿವಶಂಕರ ಸರ್ವಾತ್ಮನ್ ನೀಲಕಂಠ ನಮೋಸ್ತುತೇ॥
ಕೇದಾರೇಶ್ವರಾಯ ನಮಃ – ನಮಸ್ಕಾರಾನ್ ಸಮರ್ಪಯಾಮಿ

ಶ್ಲೋಕ॥ ಅಭೀಷ್ಟಸಿದ್ಧಿಂ ಕುರುಮೇ ಶಿವಾವ್ಯಯ ಮಹೇಶ್ವರ।
ಭಕ್ತಾನಾಮಿಷ್ಟದಾನಾರ್ಥಂ ಮೂರ್ತೀಕೃತ ಕಳೇಬರ॥
ಕೇದಾರದೇವದೇವೇಶ ಭಗವನ್ನಂಬಿಕಾಪತೇ।
ಏಕವಿಂಶದ್ಗುಣೋಪೇತಸ್ಮಿನ್‌ಸೂತ್ರಂ ಗೃಹ್ಣಾಮ್ಯಹಂ ಪ್ರಭೋ॥

ಶ್ಲೋಕ॥ ಆಯುಶ್ಚ ವಿದ್ಯಾಂ ಚ ತಥಾ ಸುಖಂ ಚ ಸೌಭಾಗ್ಯವೃದ್ಧಿಂ ಕುರು ದೇವ ದೇವ। ಸಂಸಾರ ಘೋರಾಂಬುನಿಧೌನಿಮಗ್ನಂಮಾಂರಕ್ಷ ಕೇದಾರ ನಮೋ ನಮಸ್ತೇ॥

**(ಈ ಶ್ಲೋಕವನ್ನು ಹೇಳಿ ಕೈಗೆ ದಾರವನ್ನು ಕಟ್ಟಿಕೊಳ್ಳಬೇಕು)**

### ವಾಯನದಾನ ಮಂತ್ರ:

ಕೇದಾರಃ ಪ್ರತಿಗೃಹ್ಣಾತು ಕೇದಾರೋವೈದದಾತಿ ಚ। ಕೇದಾರಸ್ತಾರಕೋಬಾಭ್ಯಾಂ ಕೇದಾರಾಯ ನಮೋ ನಮಃ॥

ಶ್ಲೋಕ॥ ಕೇದಾರಪ್ರತಿಮಾಯಸ್ಮಾದ್ರಾಜ್ಯಸೌಭಾಗ್ಯವರ್ಧಿನೀ॥
ತಸ್ಮಾದಸ್ಯಾಃ ಪ್ರದಾನೇನಮಮಾಸ್ತು ಶ್ರೀರಚಂಚಲಾ॥

ಯಸ್ಯಸ್ಮೃತ್ಯಾಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು। ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ। ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಮಹೇಶ್ವರ। ಯತ್ಕೃತಂತು ಮಯಾದೇವ ಪರಿಪೂರ್ಣಂ ತದುಸ್ತುಮೇ॥ ಕಲ್ಪೋಕ್ತವಿಧಾನೇನ ಕೃತಯಾ ಅನಯಾ ಪೂಜಯಾ ಶ್ರೀಕೇದಾರೇಶ್ವರಃ ಸುಪ್ರೀತಃ ಸುಪ್ರಸನ್ನೋ ವರದೋ ಭವತು ಮಮ ಇಷ್ಟಕಾಮ್ಯಾರ್ಥ ಸಿದ್ಧಿರಸ್ತು॥

**ಕೇದಾರೇಶ್ವರ ವ್ರತಕಲ್ಪವು ಸಂಪೂರ್ಣಂ**

# ಕೇದಾರೇಶ್ವರ ವ್ರತಕಥಾರ್ಥವು

ಸೂತಪುರಾಣಿಕರು ಶಾನಕಾದಿ ಮಹಾಮುನಿಗಳನ್ನು ನೋಡಿ, ಓ ಋಷಿವರ್ಯರೇ! ಪ್ರಪಂಚವೆಲ್ಲವೂ ಯಾರ ಅನುಗ್ರಹದಿಂದ ಸೃಷ್ಟಿಸಲ್ಪಡುವುದೋ ಅಂತಹ ಭಗವಂತನಾದ ಪಾರ್ವತೀಪ್ರಿಯನನ್ನು ನಮಸ್ಕರಿಸಿ, ಸಕಲ ಸಂಪತ್ತುಗಳನ್ನೂ ಕೊಡತಕ್ಕಂಥಾ, ಆದಿಯಲ್ಲಿ ಅನೇಕ ಋಷಿಗಳಿಂದ ಆಚರಿಸಲ್ಪಟ್ಟಿರತಕ್ಕಂಥ ಕೇದಾರ ವ್ರತದ ಮಹಿಮೆಯನ್ನು ಪ್ರಪಂಚದ ಕ್ಷೇಮಕ್ಕಾಗಿ ಹೇಳುತ್ತೇನೆ ಕೇಳಿ. ಆದಿಯಲ್ಲಿ ಪಾರ್ವತೀದೇವಿಯು ಈ ವ್ರತವನ್ನು ಆಚರಿಸಿ ಸಕಲ ಇಷ್ಟಾರ್ಥಗಳನ್ನು ಪಡೆದಳು. ವ್ರತವನ್ನು ಆಚರಿಸತಕ್ಕವರಿಗೂ, ವ್ರತ ಮಹಿಮೆಯನ್ನು ಕೇಳತಕ್ಕವರಿಗೂ ಆಯುರಾರೋಗ್ಯ ಸಂಪತ್ತುಗಳೂ, ಇಷ್ಟಾರ್ಥಸಿದ್ಧಿಯೂ ಉಂಟಾಗುತ್ತದೆ. ಉತ್ತಮೋತ್ತಮವಾದ ಈ ವ್ರತವನ್ನು ಯಾರು ಇಪ್ಪತ್ತೊಂದು ಸಲ ಮಾಡುವರೋ ಅಂತಹವರು ಇಹಲೋಕದಲ್ಲಿ ಸಕಲ ಸಂಪತ್ತುಗಳನ್ನು ಅನುಭವಿಸಿ ಪರದಲ್ಲಿ ಶಿವಸನ್ನಿಧಿಯನ್ನು ಸೇರುವರು. ಆದುದರಿಂದ ಈ ವ್ರತವನ್ನು ಬ್ರಹ್ಮ ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣದವರೂ ಆಚರಿಸಬಹುದು. ವ್ರತಕಥಾ ಕ್ರಮವು ಹೇಗೆಂದರೆ :– ಭೂಲೋಕದಲ್ಲಿ ಈಶಾನ್ಯ ಮೂಲೆಯಲ್ಲಿ ಕೈಲಾಸಪರ್ವತವೆಂಬ ಒಂದು ಪರ್ವತವುಂಟು. ಆ ಪರ್ವತದಲ್ಲಿ ಶರತ್ಕಾಲ ಮೇಘಗಳೋ ಎಂಬಂತೆ ಕಪ್ಪಾಗಿರುವ ಪರ್ವತಮಧ್ಯದಲ್ಲಿ ಮಿಂಚಿನಂತೆ ಥಳಥಳಿಸುವ ಬೆಳ್ಳಗೆ ಹೊಳೆಯುವ ಶಿಖರಗಳು ಪ್ರಕಾಶಮಾನವಾಗಿದ್ದವು. ಸಾಲ, ತಮಾಲ, ಹಿಂತಾಲ, ವಕುಲ, ಅಶೋಕ, ಕರಕ, ನಿಂಬ, ಚಂದನ, ದೇವದಾರು, ಪನಸಾಮ್ರ, ಪೂಗ, ಪುನ್ನಾಗ, ಚಂಪಕ, ಪ್ರಮುಖ ನಾನಾವಿಧ ಪುಷ್ಪಫಲಭರಿತವಾದ ವೃಕ್ಷಗಳಿಂದಲೂ ಅನೇಕ ವಿಧವಾದ ಮೃಗಗಳ ಶಬ್ದದಿಂದಲೂ,

ಅನೇಕ ಬಗೆಗಳಾದ ನದಿಗಳಿಂದಲೂ ಆ ಪರ್ವತವು ಶೋಭಾಯಮಾನವಾಗಿದ್ದಿತು. ಯೋಗಿಗಳೆಲ್ಲರೂ ಆ ಪರ್ವತದಲ್ಲಿ ವಾಸಿಸುತ್ತಿದ್ದರು. ಯಕ್ಷ, ಕಿನ್ನರ, ಗಂಧರ್ವ, ಸಿದ್ಧ ಚಾರಣ, ವಿದ್ಯಾಧರರೆಲ್ಲರೂ ಅಲ್ಲಿಯೇ ವಾಸವಾಗಿದ್ದರು. ರಮ್ಯವಾದ ಆ ಪರ್ವತದಲ್ಲಿ ಸರ್ವವ್ಯಾಪಿಯಾದ ಪರಶಿವನು ಪ್ರಮಥಗಣಗಳು ಸುತ್ತಲೂ ಸ್ತುತಿಸುತ್ತಿರಲಾಗಿ ಪಾರ್ವತೀ ಸಮೇತನಾಗಿ ದೇವತೆಗಳಿಗೆಲ್ಲಾ ದರ್ಶನವನ್ನು ಕೊಟ್ಟನು. ಅಲ್ಲಿ ಅಗ್ನಿ, ಸೂರ್ಯ, ವಾಯು, ಚಂದ್ರಾದಿ ಸಕಲ ದೇವತೆಗಳೂ, ವಸಿಷ್ಠರೇ ಮೊದಲಾದ ಸಕಲ ಋಷಿಗಳೂ, ಬ್ರಾಹ್ಮೀ ಮೊದಲಾದ ಅಷ್ಟ ಸಿದ್ಧಿಗಳೂ, ರಂಭೆ, ತಿಲೋತ್ತಮೆ, ಮೇನಕ ಮೊದಲಾದ ದೇವಕಾಂತೆಯರೂ, ಚಂಡಿಕಾ ಮೊದಲಾದ ಸಪ್ತಮಾತೃಕೆಗಳೂ, ವಿನಾಯಕ, ಕುಮಾರಸ್ವಾಮಿ ಮೊದಲಾದ ಪ್ರಮಥಗಣಗಳೂ ಸಮೀಪದಲ್ಲಿಯೇ ಇದ್ದರು. ಆಗ ಆ ಸಭೆಯಲ್ಲಿ ಪರಮೇಶ್ವರನಾಣತಿಯಂತೆ ನಾರದ ತುಂಬುರರು ಗಾನವನ್ನು ಮಾಡಿದರು. ಆ ಮಹಾ ಋಷಿಗಳು ಸಕಲ ಶ್ರಾವ್ಯವಾಗಿ ಗಾನವನ್ನು ಮಾಡುತ್ತಿರಲಾಗಿ ಅವರ ಗಾನಕ್ಕೆ ತಕ್ಕಂತೆ ತಾಳವನ್ನು ಹಾಕುತ್ತಾ ರಂಭಾದಿ ದೇವತಾ ಸ್ತ್ರೀಯರು ನಾಟ್ಯಗಳನ್ನು ಮಾಡುತ್ತಿದ್ದರು.

ಅವರಲ್ಲಿ ಅತ್ಯಂತ ಸುಂದರಿಯಾದ ರಂಭೆಯು ಮನೋಹರವಾಗಿ ನಾಟ್ಯವನ್ನು ಮಾಡಿ ಈಶ್ವರನಿಗೆ ಅತ್ಯಂತ ಸಂತೋಷವನ್ನುಂಟು ಮಾಡಿದಳು. ಆಗ ಭೃಂಗಿರಿಟಿ ಎಂಬ ಪ್ರಮಥನು ಈಶ್ವರನಾಜ್ಞಾತಿಯನ್ನು ಪಡೆದು ಎಲ್ಲರೂ ಪಕಪಕನೆ ನಗುವಂತೆ ಹಾಸ್ಯವನ್ನು ಮಾಡಿದನು. ಈ ಪ್ರಕಾರವಾಗಿ ಮಾಡಿದ ಹಾಸ್ಯದಿಂದ ದೇವಾದಿದೇವತೆಗಳೆಲ್ಲರೂ ಸಂತೋಷಭರಿತರಾಗಿರಲು ಪರಶಿವನು ಆನಂದದಿಂದ ಎಲೈ! ಭೃಂಗಿರಿಟ, ನಿನ್ನ ಹಾಸ್ಯವಿದ್ಯೆಯಿಂದ ನನಗೆ ಅತ್ಯಂತ ಸಂತೋಷವಾಯಿತು ಎಂದು ಬಹಳವಾಗಿ ಆದರಿಸಿದನು. ಆಗ ಭೃಂಗಿರಿಟಿಯು ಪಾರ್ವತೀದೇವಿಯನ್ನು ಬಿಟ್ಟು ಪರಮೇಶ್ವರನಿಗೆ ಪ್ರದಕ್ಷಿಣೆ ನಮಸ್ಕಾರವನ್ನು ಮಾಡಿದನು. ಇದನ್ನು ನೋಡಿ ಪಾರ್ವತಿಯು ಕಾಂತನೊಡನೆ ಆರ್ಯಾ! ಇದೇನು ಈ ಭೃಂಗಿರಿಟಿಯು ನನ್ನನ್ನು ಬಿಟ್ಟು ನಿನಗೊಬ್ಬನಿಗೆ ಪ್ರದಕ್ಷಿಣೆಯನ್ನು ಮಾಡಿ ನಮಸ್ಕರಿಸಲು ಕಾರಣವೇನೆಂದು ಕೇಳಲು, ಶಿವನು ಓ ಪಾರ್ವತಿ! ಬ್ರಹ್ಮವನ್ನರಿತ ಋಷಿಗಳು ನಿನಗೆ ನಮಸ್ಕಾರವನ್ನು ಮಾಡುವುದಿಲ್ಲ. ಅವನಿಗೆ ನಿನ್ನಿಂದ ಯಾವ ಕಾರ್ಯವೂ ಇರುವುದಿಲ್ಲವೆಂದು ಹೇಳಿದನು. ಈ ರೀತಿಯಾಗಿ ಪತಿಯು ಹೇಳಿದ ವಾಕ್ಯವನ್ನು ಕೇಳುತ್ತಲೇ ಅತ್ಯಂತ ಕೋಪೋದ್ರಿಕ್ತಳಾದ ಪಾರ್ವತಿಯು ತನ್ನ ಸ್ಥಳವನ್ನು ಸರ್ರನೆ ಬಿಟ್ಟು ಮೇಲಕ್ಕೆದ್ದು ತನ್ನ ಶಕ್ತಿಯನ್ನು ಆಕರ್ಷಿಸಿ ಸಭೆಯಲ್ಲಿದ್ದ ದೇವತೆಗಳೂ ಮಹಾಮುನಿಗಳೂ ಎಷ್ಟು ಬಗೆಯಾಗಿ ಪ್ರಾರ್ಥಿಸಿದರೂ ಶಾಂತಳಾಗದೆ ಸಭೆಯಿಂದ ಹೊರಟುಹೋದಳು. ಭಾರ್ಯಾವಿಯೋಗದಿಂದ ಈಶ್ವರನು ಬಹಳವಾಗಿ ವ್ಯಥೆಯನ್ನು ಹೊಂದಿದನು. ಪತಿಯ ಸಾನ್ನಿಧ್ಯವನ್ನು ಬಿಟ್ಟು ಗಿರಿಜೆಯು ಸಹಾ ಪತಿವಿಯೋಗದಿಂದುಂಟಾದ ವ್ಯಸನದಿಂದ ಬೇಯುತ್ತಾ ಅರಣ್ಯಗಳನ್ನು ದಾಟಿ ಪ್ರಸಿದ್ಧವಾದ ಗೌತಮ ಮುನಿಯ ಆಶ್ರಮವನ್ನು ಸೇರಿ ಅಲ್ಲಿ ಮಹಾಮುನಿಯು ಇಲ್ಲದಿರಲು ಒಳಗೆ ಕುಳಿತುಬಿಟ್ಟಳು. ಗೌತಮನು ತನ್ನ ಯಾಗ ಕಾರ್ಯಗಳಿಗೆ ಬೇಕಾಗುವ ಸಮಿದ್ದರ್ಭೆಗಳಿಗಾಗಿ ಅರಣ್ಯಕ್ಕೆ ಹೋಗಿದ್ದು ಅವುಗಳನ್ನೆಲ್ಲಾ

ತೆಗೆದುಕೊಂಡು ಬಂದು ತನ್ನ ಆಶ್ರಮದ ಕಾಂತಿಯನ್ನು ನೋಡಿ ಕುತೂಹಲದಿಂದ ಒಳಗೆ ಪ್ರವೇಶಿಸಿ ಇದೇನು ಆಶ್ಚರ್ಯವಾಗಿದೆಯಲ್ಲಾ, ನನ್ನ ಆಶ್ರಮ ಇಷ್ಟು ಶೋಭಾಯಮಾನವಾಗಿರಲು ಕಾರಣವೇನು? ಎಂದು ಅಲ್ಲಲ್ಲಿ ನೋಡುತ್ತಾ ಪರಶಿವನಾರ್ಧಾಂಗಿಯನ್ನು ಕಂಡು ಭಕ್ತಿಯುತನಾಗಿ ಆಕೆಗೆ ಅತಿಥಿ ಸತ್ಕಾರವನ್ನು ಯಥಾವಿಧಿಯಾಗಿ ಮಾಡಿ ಆಕೆಯು ತನ್ನ ಆಶ್ರಮಕ್ಕೆ ಬರಲು ಕಾರಣವನ್ನು ವಿಚಾರಿಸಿದನು. ಆಕೆಯು ತನ್ನ ಆಗಮನದ ಉದ್ದಿಶ್ಯವನ್ನೆಲ್ಲಾ ಸಮಗ್ರವಾಗಿ ತಿಳಿಸಿ ಋಷಿವರ್ಯನನ್ನು ಕುಳಿತುಕೊಳ್ಳುವಂತೆ ಹೇಳಿ ಓ! ಮುನಿಪುಂಗವಾ, ಸಮಸ್ತ ದೇವಋಷಿಗಳೂ ಪೂಜಿಸತಕ್ಕ ಈಶ್ವರನ ಅರ್ಧ ದೇಹವು ನನಗೆ ಹೇಗೆ ಲಭಿಸುವುದೋ ಅಂತಹ ವ್ರತವೊಂದನ್ನು ದಯವಿಟ್ಟು ತಿಳಿಸುವನಾಗೆಂದು ಕೇಳಲು, ಗೌತಮನು ಸಮಸ್ತ ಶಾಸ್ತ್ರ ಪುರಾಣಗಳನ್ನೂ ಪರಿಶೀಲಿಸಿ ಸಕಲ ವಿಧಗಳಾದ ಇಷ್ಟಾರ್ಥಗಳನ್ನು ಕೊಡುವ ಕೇದಾರೇಶ್ವರ ವ್ರತವನ್ನು ಆಚರಿಸಬೇಕೆಂದು ಹೇಳಿದನು. ಆಗ ಪಾರ್ವತಿಯು ಗೌತಮನ ಮಾತನ್ನು ಕೇಳಿದೊಡನೆಯೇ ಆನಂದದಿಂದ ಓ ಮಹನೀಯನೇ! ಆ ವ್ರತವನ್ನು ಮಾಡತಕ್ಕ ವಿಧಿಯು ಹೇಗೆ? ಎಂಬುದಾಗಿ ಕೇಳಲು, ಗೌತಮನು ಓ ಪಾರ್ವತಿದೇವಿಯೇ! ಆಶ್ವಯುಜ ಶುದ್ಧ ಅಷ್ಟಮೀ ದಿನ ಮನುಷ್ಯನು ಪರಿಶುದ್ಧನಾಗಿ ಬಿಳಿಯ ಬಣ್ಣದ ಪಟ್ಟು ಅಥವಾ ನೂಲಿನ ದಾರವನ್ನು ಕೈಗೆ ಕಂಕಣವಾಗಿ ಕಟ್ಟಿಕೊಳ್ಳಬೇಕು. ಆ ದಿನ ರಾತ್ರಿ ಉಪವಾಸವನ್ನು ಮಾಡಬೇಕು. ಆ ದಿನ ಮೊದಲುಗೊಂಡು ಅಮಾವಾಸ್ಯೆಯವರೆಗೂ ಕೇದಾರೇಶ್ವರನನ್ನು ಪೂಜಿಸಬೇಕು.

ಆ ವ್ರತದ ವಿಧಾನವು ಹೇಗೆಂದರೆ :- ಪ್ರತಿದಿನವೂ ಪ್ರಾತಃಕಾಲದಲ್ಲಿ ಎದ್ದು ಪರಿಶುದ್ಧರಾಗಿ ಮನೆಯ ಒಂದು ಪ್ರದೇಶದಲ್ಲಿ ಧಾನ್ಯರಾಶಿಯನ್ನು ಮಾಡಿ ಆ ರಾಶಿಯ ಮೇಲೆ ಒಂದು ಕುಂಭವನ್ನಿಟ್ಟು ಅದಕ್ಕೆ ಹತ್ತಿಯ ನೂಲಿನಿಂದ ಇಪ್ಪತ್ತೊಂದು ದಾರಗಳಾಗಿ ಸುತ್ತಿ ಅದರ ಮೇಲೆ ಬಿಳಿಯದಾದ ವಸ್ತ್ರವನ್ನಾಗಲಿ ಅಥವಾ ಯಾವುದಾದರೂ ವಸ್ತ್ರಗಳನ್ನಾಗಲಿ ಸುತ್ತಿ ನವರತ್ನಗಳಿಂದಲೂ, ಬಂಗಾರದಿಂದಲೂ ಆ ಕಲಶವನ್ನು ಅಲಂಕಾರ ಮಾಡಿ ಕಲಶದೊಳಗೆ ಸ್ವಲ್ಪ ಬಂಗಾರವನ್ನು ಹಾಕಿ ಗಂಧ ಪುಷ್ಪಾಕ್ಷತೆಗಳಿಂದ ಪೂಜಿಸಬೇಕು. ನಂತರ ಇಪ್ಪತ್ತೊಂದು ಮಂದಿ ಬ್ರಾಹ್ಮಣರನ್ನು ಕರೆಯಿಸಿ ಅವರ ಪಾದಗಳನ್ನು ತೊಳೆದು ಮಣೆಗಳ ಮೇಲೆ ಕುಳ್ಳಿರಿಸಿ ಆದಿಯಲ್ಲಿ ಪುರೋಹಿತನಿಗೆ ಪೂಜೆಯನ್ನು ಮಾಡಿ ನಂತರ ಆ ಇಪ್ಪತ್ತೊಂದು ಮಂದಿ ಬ್ರಾಹ್ಮಣರಿಗೂ ಪೂಜೆಯನ್ನು ಮಾಡಬೇಕು. ನಂತರ ತಾನು ಇಟ್ಟಿರುವ ಕಲಶದಲ್ಲಿ ಕೇದಾರೇಶ್ವರನನ್ನು ಆವಾಹನೆ ಮಾಡಿ ಚಂದನ ಅಗರು ಕಸ್ತೂರಿ ಕುಂಕುಮ ಮೊದಲಾದವುಗಳಿಂದಲೂ, ಗಂಧಪುಷ್ಪ ಅಕ್ಷತೆಗಳಿಂದಲೂ, ನಾನಾವಿಧವಾದ ವಸ್ತ್ರಗಳಿಂದಲೂ ಪೂಜಿಸಿ ಧೂಪದೀಪಗಳನ್ನು ಅರ್ಪಿಸಿ ಗೋಧಿ ಹಿಟ್ಟಿನಿಂದ ಮಾಡಲ್ಪಟ್ಟ ತುಪ್ಪದಲ್ಲಿ ಬೆಂದ ಇಪ್ಪತ್ತೊಂದು ಕಜ್ಜಾಯಗಳನ್ನೂ, ಅತಿರಸಗಳನ್ನೂ, ಪಾಯಸವನ್ನೂ, ಹಾಲು, ಮೊಸರು, ತುಪ್ಪ, ಜೇನು ಮೊದಲಾದವುಗಳಿಂದ ತುಂಬಿದ ಸಕಲ ವಿಧವಾದ ಶಾಕಗಳಿಂದಲೂ, ಅನೇಕ ವಿಧವಾದ

ಹಣ್ಣುಗಳನ್ನು ಸ್ವಾಮಿಗೆ ನಿವೇದನವನ್ನು ಮಾಡಿ ತಾಂಬೂಲ ನೀರಾಜನಗಳನ್ನು ಸಮರ್ಪಿಸಿ ಕೇದಾರನಾಥನನ್ನು ಅನೇಕ ಬಗೆಗಳಲ್ಲಿ ಸ್ತೋತ್ರವನ್ನು ಮಾಡಿ ಪೂಜೆಯಾದ ನಂತರ ಬ್ರಾಹ್ಮಣರಿಗೆ ಭೂರಿ ದಕ್ಷಿಣ ತಾಂಬೂಲಗಳನ್ನು ಕೊಟ್ಟು ಸಂತೋಷಪಡಿಸಬೇಕು. ಆಗ ಪರಮೇಶ್ವರನು ದೇವತೆಗಳೆಲ್ಲರನ್ನೊಡಗೂಡಿ ಪ್ರತ್ಯಕ್ಷನಾಗಿ ನಿನಗೆ ತನ್ನ ದೇಹದಲ್ಲಿ ಅರ್ಧಾಂಗವನ್ನು ಕೊಡುವೆನೆಂದು ಹೇಳಿದನು.

ಆಗ ಪಾರ್ವತಿಯು ಗೌತಮನು ಹೇಳಿದಂತೆ ವ್ರತವನ್ನು ಬಹಳ ಭಕ್ತಿಯಿಂದ ಮಾಡಿದಳು. ಶಿವನು ದೇವತೆಗಳೆಲ್ಲರನ್ನೊಡಗೂಡಿ ಪ್ರತ್ಯಕ್ಷನಾಗಿ ತನ್ನ ಶರೀರದಲ್ಲಿ ಅರ್ಧಾಂಗವನ್ನು ಸತಿಯಾದ ಪಾರ್ವತಿದೇವಿಗೆ ಕೊಟ್ಟವನಾದನು. ಆಗ ಪಾರ್ವತಿಯು ಅತ್ಯಂತ ಸಂತೋಷಯುತಳಾಗಿ ಪ್ರಪಂಚಕ್ಕೆಲ್ಲಾ ಒಳಿತು ಮಾಡಬೇಕೆಂಬ ಉದ್ದಿಶ್ಯದಿಂದ ಈಶ್ವರನನ್ನು ಸಂತೋಷಗೊಳಿಸಿ ಕೇದಾರೇಶ್ವರನ ಅನುಗ್ರಹದಿಂದ ಪ್ರಪಂಚದಲ್ಲಿ ಜನಗಳ ಕಾಮ್ಯಗಳು ಸಿದ್ಧಿಸುವಂತೆ ವರವನ್ನು ಕೇಳಿದಳು. ಅದಕ್ಕಾಗಿ ಶಿವನು ಅತ್ಯಂತ ಸಂತೋಷದಿಂದ ವರವನ್ನು ಕೊಟ್ಟು, ದೇವತೆಗಳೊಡನೆಯೂ, ಪತ್ನಿಯಾದ ಪಾರ್ವತಿಯೊಡನೆಯೂ ಅಂತರ್ಧಾನನಾದನು. ಆಗ ಶಿವಭಕ್ತನಾದ ಚಿತ್ರಾಂಗದನೆಂಬ ಗಂಧರ್ವನು ಭೂಲೋಕದಲ್ಲಿ ಈ ವ್ರತವನ್ನು ಪ್ರಚಾರಕ್ಕೆ ತರಬೇಕೆಂಬ ಉದ್ದಿಶ್ಯಯುತನಾಗಿ ನಂದಿಕೇಶ್ವರನ ಅನುಗ್ರಹ ಹೊಂದಿ ಉಜ್ಜಯಿನಿ ಪಟ್ಟಣಕ್ಕೆ ಬಂದು ಆ ದೇಶದೊಡೆಯನನ್ನು ಕಂಡು ಎಲೈ ರಾಜನೇ! ನೀನು ಕೇದಾರವ್ರತವನ್ನು ಮಾಡಿದರೆ ಸಕಲವಾದ ಇಷ್ಟಾರ್ಥಗಳೂ ಸಿದ್ಧಿಸುವುದೆಂದು ಹೇಳಲು, ವಜ್ರದಂತನು ಆ ವ್ರತವನ್ನಾಚರಿಸಿ ದೇಶಗಳಿಗೆಲ್ಲಾ ಪ್ರಭುವಾದನು. ಆ ಪಟ್ಟಣದಲ್ಲಿಯೇ ಪುಣ್ಯವತೀ, ಭಾಗ್ಯವತೀ ಎಂಬ ಇಬ್ಬರು ವೈಶ್ಯ ಕನ್ಯೆಯರಿದ್ದರು. ಅವರು ಕೇದಾರ ವ್ರತವನ್ನು ಮಾಡಬೇಕೆಂಬ ಉದ್ದಿಶ್ಯಯುತವಾಗಿ ತಮ್ಮ ಜನಕನಲ್ಲಿಗೆ ಬಂದು ಸಂಕಲ್ಪವನ್ನು ತಿಳಿಸಲು, ತಂದೆಯು ಅಮ್ಮಾ! ನಿತ್ಯ ದರಿದ್ರನಾದ ನಾನು ವ್ರತಾಚರಣೆಗಾಗಿ ಯಾವ ಸಹಾಯವನ್ನೂ ಮಾಡಲಾರೆನೆಂದು ಹೇಳಲು ಆ ಇಬ್ಬರು ಪುತ್ರಿಯರೂ ನಿನ್ನಿಂದ ನಮಗೆ ಯಾವ ವಿಧವಾದ ಸಹಾಯ ಬೇಡ. ವ್ರತಕ್ಕೆ ಅನುಮತಿಯನ್ನು ಕೊಡಬೇಕೆಂದು ಪ್ರಾರ್ಥಿಸಿ ಆತನಾಜ್ಞೆಯನ್ನು ಹೊಂದಿ ನದೀ ತೀರದಲ್ಲಿದ್ದ ಒಂದು ಆಲದ ಮರದ ಬಳಿಗೆ ಬಂದು ಆಲದ ನಾರಿನಿಂದಲೇ ಕಂಕಣಗಳನ್ನು ಮಾಡಿಕೊಂಡು ಭಕ್ತಿಪೂರ್ವಕವಾಗಿ ಕೇದಾರೇಶ್ವರನನ್ನು ಪೂಜಿಸಲು, ಭಗವಂತನಾದ ಶಿವನು ಇವರ ಭಕ್ತಿಗೆ ಮೆಚ್ಚಿ ಕೂಡಲೇ ಪ್ರತ್ಯಕ್ಷನಾಗಿ ಅವರಿಗೆ ಒಳ್ಳೆಯ ರೂಪವನ್ನು ಕೊಟ್ಟು ಸಕಲವಾದ ಇಷ್ಟಾರ್ಥಗಳೂ ಸಿದ್ಧಿಸುವಂತೆ ಅನುಗ್ರಹಿಸಿ ಅಂತರ್ಧಾನನಾದನು. ಆ ಇಬ್ಬರು ಅಕ್ಕತಂಗಿಯರಲ್ಲಿ ದೊಡ್ಡವಳಾದ ಪುಣ್ಯವತಿಯು ಉಜ್ಜಯಿನೀ ದೇಶದ ರಾಜನರಸಿಯಾದಳು. ಕಿರಿಯವಳಾದ ಭಾಗ್ಯವತಿಯು ಚೋಳದೇಶದ ಭೂಪಾಲನರಸಿಯಾದಳು. ಈ ರೀತಿಯಾಗಿ ವೈಶ್ಯಕನ್ಯೆಯರು ರಾಜಭಾರ್ಯೆಯರಾಗಿ ಕೇದಾರೇಶ್ವರನನುಗ್ರಹದಿಂದ ಸಕಲ ಭೋಗಗಳನ್ನು ಪಡೆದರು. ಹೀಗಿರುವಲ್ಲಿ ಕಿರಿಯವಳಾದ ಭಾಗ್ಯವತಿಯು ಐಶ್ವರ್ಯಮದದಿಂದ ಮೈಮರೆತು ತಾನು

ಆಚರಿಸುತ್ತಿದ್ದ ಕೇದಾರೇಶ್ವರ ವ್ರತವನ್ನು ಬಿಟ್ಟುಬಿಟ್ಟಳು. ಕೂಡಲೇ ಪ್ರಭುವಾದ ಈಕೆಯ ಪತಿಯು ಯಾವುದೋ ಒಂದು ನೆಪದಿಂದ ಭಾಗ್ಯವತಿಯನ್ನು, ಆಕೆಯ ಪುತ್ರನನ್ನು ತನ್ನ ದೇಶದಿಂದ ಓಡಿಸಿಬಿಟ್ಟನು. ರಾಜ್ಯಭ್ರಷ್ಟಳಾಗಿ ಪತಿಯಿಂದ ದೂಷಿತಳಾದ ಭಾಗ್ಯವತಿಯು ಪುತ್ರನೊಡನೆ ಅರಣ್ಯಗಳನ್ನು ಸುತ್ತುತ್ತಾ ಬಳಲಿದವಳಾಗಿ ಒಂದು ಪುರವನ್ನು ಸೇರಿ ಆ ಪುರದಲ್ಲಿ ಬೆಸ್ತರವನ ಮನೆಯಲ್ಲಿಳಿದು ಮಗನನ್ನು ಕುರಿತು ಮಗೂ! ನನ್ನ ಸೋದರಿಯು ಉಜ್ಜಯಿನಿ ಪುರದಲ್ಲಿ ರಾಜಭಾರ್ಯೆಯಾಗಿರುತ್ತಾಳೆ. ಆಕೆಗೆ ನಮ್ಮ ದುರ್ದೆಶೆಗಳನ್ನೆಲ್ಲಾ ತಿಳಿಸಿ ಆಹಾರಕ್ಕೆ ಅನುಕೂಲವಾಗುವಂತೆ ಸ್ವಲ್ಪ ದ್ರವ್ಯವನ್ನಾದರೂ ತೆಗೆದುಕೊಂಡು ಬಾ ಎಂದು ಹೇಳಲು ಅವನು ಹಾಗೆಯೇ ಉಜ್ಜಯಿನಿಗೆ ಹೋಗಿ ತನ್ನ ದೊಡ್ಡಮ್ಮನನ್ನು ಕಂಡು ತಮ್ಮ ದುರ್ದೆಶೆಗಳನ್ನೆಲ್ಲಾ ತಿಳಿಸಲು ಆಕೆಯು ಕನಿಕರಗೊಂಡವಳಾಗಿ ಒಂದೆರಡು ದಿನ ಅವನಿಗೆ ಬೇಕಾದ ಉಪಚಾರಗಳನ್ನು ಮಾಡಿ ಬೇಕಾದಷ್ಟು ದ್ರವ್ಯವನ್ನು ಕೊಟ್ಟು ಕಳುಹಿಸಿದಳು. ಮಧ್ಯಮಾರ್ಗಕ್ಕೆ ಬರುವಲ್ಲಿ ಕೇದಾರೇಶ್ವರನು ಚೋರನ ರೂಪದಲ್ಲಿ ಬಂದು ಆ ದ್ರವ್ಯವನ್ನಪಹರಿಸಿದನು. ಆ ಬಾಲಕನು ಅತ್ಯಂತ ಖೇದದಿಂದ ಮತ್ತೆ ದೊಡ್ಡತಾಯಿಯ ಬಳಿಗೆ ಬಂದು ನಡೆದ ಸಂಗತಿಯನ್ನೆಲ್ಲಾ ತಿಳಿಸಿ ಮತ್ತೆ ಸ್ವಲ್ಪ ದ್ರವ್ಯವನ್ನು ತೆಗೆದುಕೊಂಡು ಬರುತ್ತಿರಲು, ಹಿಂದಿನಂತೆಯೇ ಕೇದಾರೇಶ್ವರನು ದ್ರವ್ಯವನ್ನಪಹರಿಸಿ, ನನ್ನ ವ್ರತವನ್ನು ಯಾರು ಆಚರಿಸುವುದಿಲ್ಲವೋ ಅವರಿಗೆ ಈ ದ್ರವ್ಯವು ಸಲ್ಲಲಾರದೆಂದು ಹೇಳಿ ಅಂತರ್ಧಾನನಾದನು. ಬಾಲಕನು ಅತ್ಯಂತ ದುಃಖದಿಂದ ಮೂಲರನೆಯಸಲವೂ ದೊಡ್ಡಮ್ಮನಲ್ಲಿಗೆ ಬಂದು ನಡೆದ ಸಮಾಚಾರವನ್ನೆಲ್ಲಾ ತಿಳಿಸಲು ಆಕೆಯು ಆ ಬಾಲಕನಿಂದ ಕೇದಾರೇಶ್ವರ ವ್ರತವನ್ನು ಮಾಡಿಸಿ ಮತ್ತೆ ದ್ರವ್ಯವನ್ನು ಕೊಟ್ಟುಕಳುಹಿಸಿದಳು. ಮಧ್ಯಮಾರ್ಗದಲ್ಲಿ ಬರುತ್ತಲೇ ಆ ಹುಡುಗನು ತಾನು ಮೊದಲು ಕಳೆದುಕೊಂಡಿದ್ದ ದ್ರವ್ಯವೆಲ್ಲವೂ ದಾರಿಯಲ್ಲಿಯೇ ಬಿದ್ದಿರಲು ಅದನ್ನು ತೆಗೆದುಕೊಂಡು ತನ್ನ ತಾಯಿ ಇರುವ ಬಳಿಗೆ ಬಂದು ಸಮಾಚಾರವನ್ನೆಲ್ಲಾ ತಿಳಿಸಿ ಆಕೆಯಿಂದಲೂ ಈ ವ್ರತವನ್ನು ಮಾಡಿಸಿದನು.

ಆಗ ಚೋಳರಾಜನು ತನ್ನ ಭಾರ್ಯೆಯನ್ನು ಹುಡುಕುತ್ತಾ ಬಂದು ಮಗನನ್ನು ನೋಡಿ ಆನಂದದಿಂದ ತನ್ನ ದೇಶಕ್ಕೆ ಕರೆದುಕೊಂಡು ಹೋಗಿ ಸುಖವಾಗಿ ಸಲಹುತ್ತಿದ್ದನು. ಆ ದಿನ ಮೊದಲು ಚೋಳರಾಜನು ತನ್ನ ಭಾರ್ಯೆಯೊಡನೆ ಈ ವ್ರತವನ್ನು ಆಚರಿಸುತ್ತಿದ್ದನು. ಆದಿಯಲ್ಲಿ ಗೌತಮನಿಂದ ಹೇಳಲ್ಪಟ್ಟ ಈ ವ್ರತವನ್ನು ಕಲಿಯುಗದಲ್ಲಿ ಯಾರು ಆಚರಿಸುವರೋ, ಯಾರು ಭಕ್ತಿಯಿಂದ ಈ ಕಥೆಯನ್ನು ಓದಿ ಬರೆಯುವರೋ, ಯಾರು ಕೇಳುವರೋ ಅವರಿಗೆಲ್ಲಾ ಪರಶಿವನು ಸಕಲ ಇಷ್ಟಾರ್ಥಗಳನ್ನು ಕೊಡುವನು.

ಇತಿ ಶ್ರೀಸ್ಕಾಂದಪುರಾಣೋಕ್ತ ಪ್ರಕಾರೇಣ ಕೇದಾರವ್ರತಕಥಾ ಸಂಪೂರ್ಣಂ



# ಜ್ಯೋತಿರ್ಭೀಮೇಶ್ವರ ವ್ರತ

**(ಜ್ಯೋತಿಸ್ತಂಭವ್ರತ, ಪತಿಸಂಜೀವಿನೀ ವ್ರತ, ಭೀಮನ ಅಮಾವಾಸ್ಯೆ ವ್ರತ)**

**ಅವಶ್ಯಕ ಸಾಮಗ್ರಿಗಳು :**

ಕಲಶ, ದೀಪಸ್ತಂಭ, ಒಂಭತ್ತು ಗಂಟಿನ ಹೊಸದಾರ, ಪರಿಮಳ ಮತ್ತು ಮಂಗಳ ದ್ರವ್ಯಗಳು, ಕೆಮ್ಮಣ್ಣು ಸುಣ್ಣ ಪತ್ರ, ಪುಷ್ಪಾಕ್ಷತೆಗಳು, ಜೇಡಿಮಣ್ಣಿನ ಗೊಂಬೆ, ಅರಿಶಿನ ಬೇರು, ನೈವೇದ್ಯಕ್ಕೆ ಫಲ ತಾಂಬೂಲ, ಕಡುಬು, ವಾಯನಕ್ಕೆ ತೆಂಗಿನಕಾಯಿ, ಪಂಚಪಾತ್ರೆ, ಉದ್ಧರಣೆ, ಅರ್ಘ್ಯಪಾತ್ರೆ, ಇತ್ಯಾದಿ ಸಾಮಾನುಗಳು.

ಈ ವ್ರತವನ್ನು ಆಷಾಡ ಬಹುಳ ಅಮಾವಾಸ್ಯೆ ದಿವಸ ಮಾಡಬೇಕು. ಇದಕ್ಕೆ 'ಜ್ಯೋತಿರ್ಭೀಮೇಶ್ವರ ವ್ರತ' ಅಥವಾ ಪತಿ ಸಂಜೀವಿನೀ ವ್ರತ' ಎಂದು ಕರೆಯುತ್ತಾರೆ. ಈ ವ್ರತವನ್ನು ಅವಿವಾಹಿತ ಮತ್ತು ವಿವಾಹಿತ ಕನ್ಯೆಯರೂ ಮಾಡಬಹುದು. ಯುವತಿಯರು ಒಂಬತ್ತು ವರ್ಷಗಳ ಕಾಲ ಈ ವ್ರತವನ್ನು ಆಚರಿಸಿ ಉದ್ಯಾಪನೆ ಮಾಡಬೇಕು. ಅಮಾವಾಸ್ಯೆಯು ಎರಡುದಿನ ವ್ಯಾಪ್ತಿ ಇದ್ದಲ್ಲಿ ಎರಡನೇ ದಿನವೇ ವ್ರತವನ್ನು ಮಾಡಬೇಕು. ವ್ರತದ ದಿವಸ ಹೆಣ್ಣುಮಕ್ಕಳೂ, ಸುಮಂಗಲೆಯರೂ ಮಂಗಳ ಸ್ನಾನವನ್ನು ಮಾಡಿ, ಮಂಟಪವನ್ನು ನಿರ್ಮಿಸಿ, ಅದರಲ್ಲಿ ಧಾನ್ಯರಾಶಿಯನ್ನು ಮಾಡಿ ಅದರಮೇಲೆ ದೀಪಸ್ತಂಭವನ್ನಿಟ್ಟು ಗೋದಿಹಿಟ್ಟಿನ ಅಥವಾ ಅಕ್ಕಿಹಿಟ್ಟಿನ ಭಕ್ಷ್ಯಗಳನ್ನು (ಮೋದಕಗಳನ್ನು) ನೈವೇದ್ಯಮಾಡಿ ಈಶ್ವರನನ್ನು ಆರಾಧಿಸುತ್ತಾರೆ. ಈ ವ್ರತ ಗಂಡು ಮಕ್ಕಳು ರಾಜ್ಯ ದೊರೆತುದರ ಗುರುತಾಗಿ ಈ ದಿನ ಹೊಸಲಿನಮೇಲೆ ಭಂಡಾರವನ್ನು ಒಡೆಯುತ್ತಾರೆ. ಆಜ್ಯಯುಕ್ತವಾದ ನವಗ್ರಂಥಿಯುಳ್ಳ ವರ್ತಿಯಿಂದ ನೀರಾಜನವನ್ನು ಪ್ರಜ್ವಲಿಸಿ ಪೂಜೆಯನ್ನು ಆರಂಭಿಸಬೇಕು.

**ಪ್ರಾರ್ಥನೆ :**

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ
ಚತುರ್ಭುಜಂ ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ॥

**ಘಂಟಾನಾದಂ :**

ಆಗಮಾರ್ಥಂತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನ ಲಾಂಛನಮ್॥
ಇತಿ ಘಂಟಾನಾದಂ ಕೃತ್ವಾ ॥ (ಘಂಟೆಯನ್ನು ಬಾರಿಸಬೇಕು)

**ಸಂಕಲ್ಪ :**

ಮಮ ಉಪಾತ್ತಸಮಸ್ತದುರಿತಕ್ಷಯದ್ವಾರ ಶ್ರೀ ಭೀಮೇಶ್ವರ ಪ್ರೀತ್ಯರ್ಥಂ। ಶುಭಾಭ್ಯಾಂ ಶುಭೇ ಶೋಭನೇ ಮುಹೂರ್ತೇ...... ಶುಭತಿಥೌ। ಶ್ರೀ ಪರಮೇಶ್ವರ ಪ್ರೀತ್ಯರ್ಥಂ ವಿಶೇಷಣಃ ಮಮ ಪತಿ ಸಂಜೀವಿನೀ ವ್ರತ ದ್ವಾರ ಯಾವಜ್ಜೀವ ದೀರ್ಘ ಸೌಮಾಂಗಲ್ಯಾಭಿವೃದ್ಧ್ಯರ್ಥಂ। ಆಯುರಾರೋಗ್ಯ ಐಶ್ವರ್ಯ, ಸುಖಸಂತಾನಸೌಭಾಗ್ಯಾಭಿ–ವೃದ್ಧ್ಯರ್ಥಂ। ಶುಭಫಲಾ ವಾಪ್ತ್ಯರ್ಥಂ, ಇಷ್ಟಾರ್ಥ ಸಿದ್ಧ್ಯರ್ಥಂ। ಭೀಮೇಶ್ವ–ರಾಮಾವಾಸ್ಯಾ ಪ್ರಯುಕ್ತ ಪತಿ ಸಂಜೀವಿನೀ ವ್ರತಾಂಗ ಶ್ರೀ ಉಮಾಮಹೇಶ್ವರ ದೇವತಾಮುದ್ದಿಶ್ಯ ಶ್ರೀ ಉಮಾಮಹೇಶ್ವರ ದೇವತಾ ಪ್ರೀತ್ಯರ್ಥಂ ಕಲ್ಪೋಕ್ತಪ್ರಕಾರೇಣ ಯಾವಚ್ಛಕ್ತಿ ಧ್ಯಾನಾವಾಹನಾದಿ ಶೋಡಷೋಪಚಾರ ಪೂಜಾಂ ಕರಿಷ್ಯೇ॥ (ಪುಷ್ಪಾಕ್ಷತೆಗಳನ್ನು ಕಲಶದ ಮೇಲೆ ಹಾಕಬೇಕು) ತದಂಗಂ ಕಲಶಾರಾಧನಂ ಕರಿಷ್ಯೇ॥

**ಕಲಶ ಪೂಜೆ**

ಕಲಶಂ ಗಂಧಾಕ್ಷತ ಪತ್ರಪುಷ್ಪೈರಭ್ಯರ್ಚ್ಯ (ಕಲಶಕ್ಕೆ ಮೂರು ಕಡೆಗಳಲ್ಲಿ ಗಂಧವನ್ನಿಟ್ಟು ಅಕ್ಷತೆಯನ್ನು ಗಂಧದ ಬೊಟ್ಟಿನ ಮೇಲೆ ಒತ್ತಿ ಕಲಶದಲ್ಲಿ ಪುಷ್ಪವನ್ನು ಹಾಕಿ ಕೈಯನ್ನು ಹಿಡಿದುಕೊಳ್ಳುವುದು.)

ಶ್ಲೋಕ॥ ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಾಃ। ಮೂಲೇ ತತ್ರಸ್ಥಿತೋ ಬ್ರಹ್ಮಾಮಧ್ಯೇ ಮಾತೃಗಣಾಸ್ಮೃತಾಃ॥ ಕುಕ್ಷೌತು ಸಾಗರಾಸ್ಸರ್ವೇ ಸಪ್ತದ್ವೀಪಾ– ವಸುಂಧರಾ। ಋಗ್ವೇದೋಥಯಜುರ್ವೇದ ಸಾಮವೇದೋಹ್ಯಥರ್ವಣಃ ಅಂಗೈಶ್ಚಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾಃ। ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ॥ ಗಂಗೇ ಚ ಯಮುನೇಚೈವ ಗೋದಾವರೀ ಸರಸ್ವತೀ। ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು॥

ಮಂತ್ರ :– ಆಪೋವಾ ಇದಗ್ಂ ಸರ್ವಂ ವಿಶ್ವಾಭೂತಾನ್ಯಾಪಃ ಪ್ರಾಣಾವಾ ಆಪಃ ಪಶವ ಆಪೋನ್ನಮಾಪೋಮೃತಮಾಪಸ್ಸಮ್ರಾಡಾಪೋ ವಿರಾಡಾಪಸ್ಸ್ವರಾಡಾಪ ಶ್ಛಂದಾಗ್ ಷ್ಯಾಪೋ ಜ್ಯೋತಿಗ್ಂಷ್ಯಾಪೋ ಯಜುಗ್ಷ್ಯಾಪೋಸ್ಸತ್ಯಮಾಪಸ್ಸರ್ವ ದೇವತಾ ಆಪೋ ಭೂರ್ಭುವಸ್ಸುರಾಪ ಓಂ॥

ಕಲಶೋದಕೇನ ಪೂಜಾದ್ರವ್ಯಾಣಿ ಸಂಪ್ರೋಕ್ಷ್ಯದೇವಮಾತ್ಮಾನಂಚಪ್ರೋಕ್ಷಯೇತ್ (ಕಲಶವಲ್ಲಿರುವ ನೀರನ್ನು ತೆಗೆದುಕೊಂಡು ದೇವರಮೇಲೆಯೂ, ಪೂಜಾ ದ್ರವ್ಯಗಳ ಮೇಲೆಯೂ, ತನ್ನ ಮೇಲೂ ಪ್ರೋಕ್ಷಣೆಯನ್ನು ಮಾಡಿಕೊಳ್ಳಬೇಕು.)

## ಗಣಾಧಿಪತಿ ಪೂಜಾ

ಗಣಾನಾಂತ್ವಾ ಗಣಪತಿಗ್ಂಹವಾಮಹೇ ಕವಿಂ ಕವೀನಾಮುಪಶ್ರವಸ್ಥಮಂ ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಶ್ಶೃಣ್ವನ್ನೂ ತಿಭಿಸ್ಸೀದಸಾಧನಂ॥

### - ಮಹಾಗಣಪತಿಂ ಧ್ಯಾಯಾಮಿ -

ಮಹಾಗಣಾಧಿಪತಯೇ ನಮಃ – ಆಸನಂ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಪಾದ್ಯಂ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಆಚಮನೀಯಂ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಔಪಚಾರಿಕಸ್ನಾನಂ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಸ್ನಾನಾನಂತರಂ ಆಚಮನೀಯಂ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ವಸ್ತ್ರಾರ್ಥಂ ಅಕ್ಷತಾನ್ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಯಜ್ಞೋಪವೀತಾರ್ಥಂ ಅಕ್ಷತಾನ್ ಸಮರ್ಪಯಾಮಿ
ಮಹಾಗಣಾಧಿಪತಯೇ ನಮಃ – ಗಂಧಾನ್ ಧಾರಯಾಮಿ

ಗಂಧಸ್ಯೋಪರಿ ಅಲಂಕಾರಾರ್ಥಂ ಅಕ್ಷತಾನ್ ಸಮರ್ಪಯಾಮಿ। ಪುಷ್ಪಂ ಪೂಜಯಾಮಿ॥ ಓಂ ಸುಮುಖಾಯ ನಮಃ, ಏಕದಂತಾಯ ನಮಃ, ಕಪಿಲಾಯ ನಮಃ, ಗಜಕರ್ಣಕಾಯ ನಮಃ, ಲಂಭೋದರಾಯ ನಮಃ, ವಿಕಟಾಯ ನಮಃ, ವಿಘ್ನರಾಜಾಯ ನಮಃ, ಕುಮಾರಗುರವೇ ನಮಃ, ಈಶ್ವರಪುತ್ರಾಯ ನಮಃ, ಸರ್ವಸಿದ್ಧಿಪ್ರದಾಯಕಾಯ ನಮಃ, ಮಹಾಗಣಾಧಿಪತಯೇ ನಮಃ, ನಾನಾವಿಧ ಪರಿಮಳ ಪತ್ರಪುಷ್ಪಾಣಿ ಸಮರ್ಪಯಾಮಿ, ಧೂಪಾರ್ಥಂ ಅಕ್ಷತಾನ್ ಸಮರ್ಪಯಾಮಿ, ಶ್ರೀಮನ್ ಮಹಾಗಣಾಧಿಪತಯೇ ನಮಃ, ದೀಪಾರ್ಥಂ ಅಕ್ಷತಾನ್ ಸಮರ್ಪಯಾಮಿ, ಓಂ ಭೂರ್ಭುವಸ್ಸುವಃ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ– ಧೀಮಹಿ ಧಿಯೋಯೋನಃ ಪ್ರಚೋದಯಾತ್ ದೇವಸವಿತಃ ಪ್ರಸುವ, ಸತ್ಯಂತ್ವರ್ತೇನಪರಿಷಿಂಚಾಮಿ, ಅಮೃತಮಸ್ತು ಅಮೃತೋಪಸ್ತರಣಮಸೀ ಸ್ವಾಹಾ, ಓಂ ಪ್ರಾಣಾಯ ಸ್ವಾಹಾ, ಓಂ ಅಪಾನಾಯ ಸ್ವಾಹಾ, ಓಂ ವ್ಯಾನಾಯ ಸ್ವಾಹಾ, ಉದಾನಾಯ ಸ್ವಾಹಾ, ಬ್ರಹ್ಮಣೇ ಸ್ವಾಹಾ, ಬ್ರಹ್ಮಣಿಮ, ಆತ್ಮಾಮೃತತ್ವಾಯ... ಮಹಾಗಣಾಧಿಪತಯೇ ನಮಃ ನಿವೇದನಂ ಸಮರ್ಪಯಾಮಿ, ಮಹಾಗಣಾಧಿಪತಯೇ ನಮಃ ಮಧ್ಯೆ ಮಧ್ಯೇ ಪಾನೀಯಂ ಸಮರ್ಪಯಾಮಿ, ಮಹಾಗಣಾಧಿಪತಯೇ ನಮಃ ತಾಂಬೂಲಂ ಸಮರ್ಪಯಾಮಿ, ಮಹಾಗಣಾಧಿಪತಯೇ ನಮಃ ನೀರಾಜನಂ ಸಮರ್ಪಯಾಮಿ, ನೀರಾಜನಾನಂತರಂ ಆಚಮನೀಯಂ ಸಮರ್ಪಯಾಮಿ॥

ವಕ್ರತುಂಡಮಹಾಕಾಯ ಕೋಟಿಸೂರ್ಯ ಸಮಪ್ರಭ। ಅವಿಘ್ನಂ ಕುರುಮೇ ದೇವ ಸರ್ವಕಾರ್ಯೇಷು ಸರ್ವದಾ।। ಮಹಾಗಣಾಧಿಪತಯೇ ನಮಃ – ಮಂತ್ರಪುಷ್ಪಂ ಸಮರ್ಪಯಾಮಿ, ಆತ್ಮಪ್ರದಕ್ಷಿಣ ನಮಸ್ಕಾರಂ ಸಮರ್ಪಯಾಮಿ, ಸರ್ವೋಪಚಾರ ಪೂಜಾಂ ಸಮರ್ಪಯಾಮಿ।। ಯಸ್ಯಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾ ಕ್ರಿಯಾದಿಷು ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಂ। ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಗಣಾಧಿಪ।। ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತುತೇ।। ಅನಯಾ ಷೋಡಶೋಪಚಾರಪೂಜಯಾಭಗವಾನ್ ಸರ್ವಾತ್ಮಕಃ ಶ್ರೀ ಮಹಾಗಣಾಧಿಪತಿಃ ಸುಪ್ರಸನ್ನೋ ವರದೋ ಭವತು (**ಎಂದು ಹೇಳಿ ಹೂವು ಅಕ್ಷತೆಯನ್ನು ತೆಗೆದುಕೊಂಡು ನೀರು ಹಾಕಿ ಬಿಡತಕ್ಕದ್ದು**)

ಗಣಾಧಿಪತಿ ಪ್ರಸಾದಂ ಶಿರಸಾಗೃಹ್ಣಾಮಿ (**ಎಂದು ಹೂವು ಅಕ್ಷತೆಗಳನ್ನು ಶಿರದಲ್ಲಿ ಧರಿಸತಕ್ಕದ್ದು.**)

**ದ್ವಾರಪಾಲಕ ಪೂಜಾ : (ಪುಷ್ಪಾಕ್ಷತೆಗಳಿಂದ ದ್ವಾರಗಳನ್ನು ಪೂಜಿಸಬೇಕು)**

ಪೂರ್ವದ್ವಾರೇ – ದ್ವಾರಶ್ರಿಯೈ ನಮಃ। ಧಾತ್ರೇ ನಮಃ। ವಿಧಾತ್ರೇ ನಮಃ। ದಕ್ಷಿಣದ್ವಾರೇ–ದ್ವಾರಶ್ರಿಯೈ ನಮಃ। ಚಂಡಾಯ ನಮಃ। ಪ್ರಚಂಡಾಯ ನಮಃ। ಪಶ್ಚಿಮ ದ್ವಾರೇ–ದ್ವಾರಶ್ರಿಯೈ ನಮಃ। ಶಂಖನಿಧಯೇ ನಮಃ। ಪದ್ಮನಿಧಯೇ ನಮಃ। ಉತ್ತರದ್ವಾರೇ–ದ್ವಾರಶ್ರಿಯೈ ನಮಃ। ಗಂಗಾಯೈ ನಮಃ। ಯಮುನಾಯೈ ನಮಃ। ಮಧ್ಯೆ ಶ್ರೀ ಉಮಾಮಹೇಶ್ವರಾಭ್ಯಾಂ ನಮಃ। ದ್ವಾರಪಾಲಕ ಪೂಜಾಂ ಸಮರ್ಪಯಾಮಿ।।

**ಪೀಠ ಪೂಜಾ : (ಪುಷ್ಪಾಕ್ಷತೆಗಳಿಂದ ಪೀಠವನ್ನು ಪೂಜಿಸಬೇಕು)**

ಓಂ ಆಧಾರಶಕ್ತ್ಯೈ ನಮಃ। ಓಂ ಅನಂತಾಯ ನಮಃ। ಓಂ ಕೂರ್ಮಾಯ ನಮಃ। ಓಂ ವರಾಹಾಯ ನಮಃ। ಓಂ ಪೃಥಿವ್ಯೈ ನಮಃ। ಓಂ ಸ್ವರ್ಣಸಿಂಹಾಸನಾಯ ನಮಃ। ಓಂ ರತ್ನಸಿಂಹಾಸನಾಯ ನಮಃ। ಓಂ ಹೇಮಪ್ರಕಾರಾಯ ನಮಃ। ತನ್ಮಧ್ಯೇ ಶ್ರೀ ಉಮಾಮಹೇಶ್ವರಾಯ ನಮಃ। ಪೀಠಪೂಜಾಂ ಸಮರ್ಪಯಾಮಿ।।

ಅನಂತರಂ ಸರ್ವಾಲಂಕಾರ ಸಂಯುಕ್ತ ಪಂಚವರ್ಣಾಂಚಿತ ರಂಗವಲ್ಯಾದಿ ಶೋಭಿತ ಶುಚಿ ಪ್ರದೇಶೇ ಪೀಠಂ ಸಂಸ್ಥಾಪ್ಯ। ತದುಪರಿ ತಂಡುಲಂ ಪ್ರಸಾರ್ಯ। ತಸ್ಯೋಪರಿ ಸರ್ವಾಲಂಕೃತ ಘೃತವರ್ತಿಯುಕ್ತ ಜ್ಯೋತಿರ್ಮಯಂ ದೀಪಸ್ತಂಭಂ ನಿಧಾಯ। ತತ್ರ ಜ್ಯೋತಿರ್ಮಯ ಉಮಾಸಹಿತ ಶ್ರೀ ಭೀಮೇಶ್ವರಂ ಅರ್ಚಯೇತ್।। ತತ್ರ ನವದೋರ ಸ್ಥಾಪನಂ। ಕುಸುಮಾಕ್ಷತಾನ್ ಗೃಹೀತ್ವಾ।।

(ನೂತನ ಪಾರವನ್ನು ಒಂದು ವೀಳೆಯದೆಲೆ ಅಥವಾ ತಟ್ಟೆಯಮೇಲಿಟ್ಟು ದೇವರ ಬಲಭಾಗದಲ್ಲಿ ಇಡಬೇಕು)

**ಧ್ಯಾನಂ : (ಕೈ ಮುಗಿದು ಧ್ಯಾನಿಸುವುದು)**

ಪೀಠಂ ಯಸ್ಯಾ ಧರಿತ್ರೀ ಜಲಧರ ಕಲಶಂ ಲಿಂಗಮಾಕಾರ ಮೂರ್ತಿಂ।
ನಕ್ಷತ್ರಂ ಪುಷ್ಪಮಾಲಾಂಗ್ರಹಗಣ ಕುಸುಮಂ ನೇತ್ರ ಚಂದ್ರಾರ್ಕ ವಹ್ನಿಂ
ಕುಕ್ಷಿಂ ಸಪ್ತಸ್ಸಮುದ್ರಂ ಭುಜಗಿರಿಶಿಖರಂ ಸಪ್ತಪಾತಾಳ ಪಾದಂ।
ವೇದಂ ವಕ್ತ್ರಂ ಷಡಂಗಂ ದಶದಿಶವದನಂ ದಿವ್ಯಲಿಂಗಂ ನಮಾಮಿ॥

ಇತಿ ಧ್ಯಾನಂ ಸಮರ್ಪಯಾಮಿ

**ಪ್ರಾಣಪ್ರತಿಷ್ಠಾಪನಂ :**

ಪ್ರಾಣಪ್ರತಿಷ್ಠಾಪನ ಮಹಾಮಂತ್ರಸ್ಯ ಬ್ರಹ್ಮಾವಿಷ್ಣು ಮಹೇಶ್ವರಾಋಷಯಃ। ಋಗ್ಯಜುಸ್ಸಾಮಾಥರ್ವಾಣಿ ಛಂದಾಂಸಿ। ಪ್ರಾಣಶಕ್ತಿಃ, ಪರಾದೇವತಾ, ಹ್ರಾಂ ಬೀಜಂ, ಹ್ರೀಂ ಶಕ್ತಿಃ, ಹ್ರೂಂ ಕೀಲಕಂ, ಮಮ ಅಮಾಭೀಮೇಶ್ವರ ಪ್ರಾಣಪ್ರತಿಷ್ಠಾ ಸಿದ್ಧ್ಯರ್ಥೇ ಜಪೇ ವಿನಿಯೋಗಃ।

| ಕರನ್ಯಾಸ | ಅಂಗನ್ಯಾಸ |
|---|---|
| ಹ್ರಾಂ ಅಂಗುಷ್ಠಾ ಭ್ಯಾಂನಮಃ | ಹ್ರಾಂ ಹೃದಯಾಯನಮಃ |
| ಹ್ರೀಂ ತರ್ಜನೀಭ್ಯಾಂನಮಃ | ಹ್ರೀಂ ಶಿರಸೇಸ್ವಾಹಾ |
| ಹ್ರೂಂ ಮಧ್ಯಮಾಭ್ಯಾಂನಮಃ | ಹ್ರೂ ಶಿಖಾಯೈವೌಷಟ್ |
| ಹ್ರೇಂ ಅನಾಮಿಕಾಭ್ಯಾಂನಮಃ | ಹ್ರೌಂ ನೇತ್ರತ್ರಯಾಯ ವೌಷಟ್ |
| ಹ್ರಃ ಕರತಲಕರಪೃಷ್ಠಾಭ್ಯಾಂನಮಃ | ಹ್ರಃ ಅಸ್ತ್ರಾಯಫಟ್ |

ಓಂ ಭೂರ್ಭುವಸ್ಸುವರೋಮಿತಿ ದಿಗ್ಬಂಧಃ

**ಆವಾಹನಂ : (ಆವಾಹಿಸುವುದು)**

ಅತ್ರಾಗಚ್ಛ ಮಹಾದೇವ ಭೀಮೇಶ್ವರ ಜಗತ್ಪತೇ।
ಜ್ಯೋತಿರ್ಮಯೋ ಮಯಾಸಾರ್ಥಂ ದೀಪೇ ಸನ್ನಿಹಿತೋಭವ॥
ಸ್ವಾಮಿನ್ ಸರ್ವ ಜಗನ್ನಾಥ ಯಾವತ್ಪೂಜಾವಸಾನಗಂ।
ತಾವತ್ವಂ ಪ್ರೀತಿಭಾವೇನ ಬಿಂಬೇऽಸ್ಮಿನ್ ಸನ್ನಿಧಿಂ ಕುರು
ಶ್ರೀ ಉಮಾಮಹೇಶ್ವರೇಭ್ಯೋ ನಮಃ। 'ಆವಾಹನಂ' ಸಮರ್ಪಯಾಮಿ।

**ಆಸನಂ : (ಪುಷ್ಪಾಕ್ಷತೆಗಳನ್ನು ಹಾಕುತ್ತಾ ಪೂಜಿಸುವುದು)**

ಅನೇಕ ರತ್ನ ಸಂಯುಕ್ತಂ ಸೌವರ್ಣಂ ಸುಮನೋಹರಂ।
ಸಿಂಹಾಸನಂ ಪ್ರದಾಸ್ಯಾಮಿ ಗೃಹೀತ್ವ ಪರಮೇಶ್ವರ॥
ಶ್ರೀ ಪಶುಪತಯೇ ನಮಃ॥ 'ಸಿಂಹಾಸನಂ' ಸಮರ್ಪಯಾಮಿ॥

**ಪಾದ್ಯಂ : (ಒಂದು ಉದ್ಧರಣೆ ನೀರನ್ನು ಅರ್ಘ್ಯಪಾತ್ರೆಯಲ್ಲಿ ವಿಸರ್ಜಿಸುವುದು)**

ಸರ್ವಾಧಾರ ಜಗದ್ವಂದ್ಯ ಸರ್ವವಿಶ್ವಾಮರೇಶ್ವರ।
ಪಾದ್ಯಂ ಗೃಹಾಣ ವಿಶ್ವಾತ್ಮ ಭಕ್ತ್ಯಾದತ್ತಂ ಮಯಾಪ್ರಭೋ
ಶ್ರೀ ರುದ್ರಾಯ ನಮಃ॥ 'ಪಾದ್ಯಂ' ಸಮರ್ಪಯಾಮಿ॥

**ಅರ್ಘ್ಯಂ : (ಒಂದು ಉದ್ಧರಣೆ ನೀರನ್ನು ಅರ್ಘ್ಯಪಾತ್ರೆಯಲ್ಲಿ ಬಿಡುವುದು)**

ನಮಸ್ತೇ ಜಗದಾಧಾರ ಶರಣಾಗತ ವತ್ಸಲ।
ಅರ್ಘ್ಯಂ ಚಾನರ್ಘ್ಯವರದ ದಾಸ್ಯಾಮಿ ಪ್ರತಿಗೃಹ್ಯತಾಂ॥
ಶ್ರೀ ಭೀಮಾಯ ನಮಃ॥ 'ಅರ್ಘ್ಯಂ' ಸಮರ್ಪಯಾಮಿ॥

**ಆಚಮನೀಯಂ : (ಮತ್ತೊಂದು ಉದ್ಧರಣೆ ನೀರನ್ನು ಅರ್ಘ್ಯಪಾತ್ರೆಯಲ್ಲಿ ಹಾಕುವುದು)**

ತ್ರಿಯಂಬಕ ನಮಸ್ತೇಽಸ್ತು ನಮಸ್ತೇ ಲೋಕನಾಯಕ।
ಗೃಹಾಣಾಚಮನಂ ದೇವ ಸ್ವೀಕುರುಷ್ವ ಸದಾಶಿವ॥
ಶ್ರೀ ಅಘೋರಾಯ ನಮಃ॥ 'ಆಚಮನಂ' ಸಮರ್ಪಯಾಮಿ॥

**ಮಧುಪರ್ಕಂ :**

**(ಒಂದು ಬಾಳೆಹಣ್ಣನ್ನು ಸುಲಿದು ಪಂಚಾಮೃತದಲ್ಲಿ ಅದ್ದಿ ಪರಮೇಶ್ವರನಿಗೆ ನಿವೇದಿಸಿ ಒಂದು ವೀಳೆಯದೆಲೆಯ ಮೇಲಿಟ್ಟು ದೇವರ ಬಲಭಾಗದಲ್ಲಿರಿಸಬೇಕು)**

ಕಲ್ಯಾಣ ಮೂರ್ತೇ ಭೃಂಗೀಶ ಶ್ರೀ ಶಂಕರ ಸದಾಶಿವ।
ಮಧುಪರ್ಕಂ ಗೃಹಾಣೇದಂ ಗಂಗಾಧರ ನಮೋಽಸ್ತುತೇ॥
ಶ್ರೀ ಶಿವಾಯ ನಮಃ॥ 'ಮಧುಪರ್ಕಂ' ಸಮರ್ಪಯಾಮಿ॥

**ಪಂಚಾಮೃತ ಸ್ನಾನಂ : (ಹೂವಿನಿಂದ ಪಂಚಾಮೃತವನ್ನು ಪ್ರೋಕ್ಷಿಸುವುದು)**

ಪಯೋದಧಿ ಘೃತಂ ಚೈವ ಶರ್ಕರಾ ಮಧುಸಂಯುತಂ।
ಪಂಚಾಮೃತೇನಸ್ನಪನಂ ಸ್ವೀಕುರುಷ್ವ ಸದಾಶಿವ॥
ಶ್ರೀ ಶಂಭವೇ ನಮಃ॥ 'ಪಂಚಾಮೃತ ಸ್ನಾನಂ' ಸಮರ್ಪಯಾಮಿ॥

**ಶುದ್ಧೋದಕಸ್ನಾನಂ : (ಶುದ್ಧವಾದ ನೀರನ್ನು ಪ್ರೋಕ್ಷಿಸುವುದು)**
ನಿರ್ಮಲಂ ಶೀತಲಂ ತೋಯಂ ಅತಿಶುಭ್ರಂ ಮನೋಹರಂ।
ಸ್ನಾನಾರ್ಥಂ ಪ್ರಯಚ್ಛಾಮಿ ಸ್ವೀಕುರುಷ್ವ ದಯಾನಿಧೇ॥
ಶ್ರೀಸ್ಥಾಣವೇ ನಮಃ 'ಶುದ್ಧೋದಕಸ್ನಾನಂ' ಸಮರ್ಪಯಾಮಿ॥

**ವಸ್ತ್ರಂ : (ಜೋಡಿಯಾದ ಗೆಜ್ಜೆವಸ್ತ್ರವನ್ನು ಹಾಕುವುದು)**
ಅಭಿವಸ್ತ್ರಾ ಸುವಸನನ್ಯರ್ಷಾಭಿಧೇನೋಃ ಸುದುಘಾಃ ಪೂಯಮಾನಃ।
ಅಭಿಚಂದ್ರಾ ಭರ್ತವೇನೋ ಹಿರಣ್ಯಾಭ್ಯಶ್ವಾನ್ರಥಿನೋ ದೇವಸೋಮ॥
ಶ್ರೀ ಕಲಾಧರಾಯ ನಮಃ 'ವಸ್ತ್ರಯುಗ್ಮಂ' ಸಮರ್ಪಯಾಮಿ॥

**ಉಪವೀತಂ : [ಯಜ್ಞೋಪವೀತವನ್ನು (ಅಥವಾ ಅಕ್ಷತೆಯನ್ನು) ಸಮರ್ಪಿಸುವುದು]**
ನಾಗಯಜ್ಞೋಪವೀತಸ್ತ್ವಂ ನಾಗೇಶಾದ್ಯೈಃ ಪುರಸ್ಕೃತ।
ಉಪವೀತಮಿದಂ ದಿವ್ಯಂ ಧಾರಯತ್ವಂ ಮಹಾಪ್ರಭೋ॥
ಶ್ರೀ ಯಜ್ಞಪ್ರಿಯಾಯ ನಮಃ 'ಉಪವೀತಂ' ಸಮರ್ಪಯಾಮಿ॥

**ಗಂಧಂ : (ಗಟ್ಟಿಯಾದ ಗಂಧವನ್ನು ಹಚ್ಚುವುದು)**
ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್।
ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ॥
ಶ್ರೀ ಗಂಗಾಧರಾಯ ನಮಃ 'ಗಂಧಂ' ಸಮರ್ಪಯಾಮಿ॥

**ಅಕ್ಷತಾಂ : (ಅಕ್ಷತೆಯನ್ನು ಸಮರ್ಪಿಸುವುದು)**
ಆಯನೇತೇ ಪರಾಯಣೇ ದೂರ್ವಾರೋಹಂತು ಪುಷ್ಪಿಣೀಃ।
ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ॥
ಶ್ರೀ ಸರ್ವಜ್ಞಾಯ ನಮಃ 'ಅಕ್ಷತಾನ್' ಸಮರ್ಪಯಾಮಿ.

**ಆಭರಣಂ :**

[ಆಭರಣವನ್ನು (ಬದಲಾಗಿ ಹೂವು, ಅಕ್ಷತೆಯನ್ನು) ಸಮರ್ಪಿಸುವುದು]
ಹಿರಣ್ಯರೂಪಃ ಸ ಹಿರಣ್ಯ। ಸಂದೃಗಪಾಂನ ಪಾತ್ಸೇದು ಹಿರಣ್ಯ ವರ್ಣಃ।
ಹಿರಣ್ಯಯಾತ್ಪರಿಯೋರ್ನಿಷದ್ಯಾ। ಹಿರಣ್ಯದಾದದತ್ಯಂ ನಮಸ್ಮೈ॥
ಶ್ರೀ ವಿಭೂತಿ ಭೂಷಣಾಯ ನಮಃ 'ಆಭರಣಂ' ಸಮರ್ಪಯಾಮಿ॥

**ಪುಷ್ಪಾಣಿ : (ಪುಷ್ಪಮಾಲಿಕೆಯನ್ನು ಸಮರ್ಪಿಸುವುದು)**

ಜಾಜೀಪುನ್ನಾಗ ಮಂದಾರೈಃ ಕೇತಕೀ ಚಂಪಕಾನಿಚ।
ಮಯಾಹೃತಾನಿ ಪುಷ್ಪಾಣಿ ಗೃಹಾಣ ಪರಮೇಶ್ವರಾ।
ಶ್ರೀ ಚಂದ್ರಶೇಖರಾಯ ನಮಃ। 'ಪುಷ್ಪಾಣಿ' ಸಮರ್ಪಯಾಮಿ॥

**ಹರಿದ್ರಾಚೂರ್ಣಂ : (ಅರಿಶಿನವನ್ನು ಹಚ್ಚುವುದು)**

ಹಾರಿದ್ರವೇವ ಪ್ರತಥೋ ಪನೇದುಪಸೋಮಂ ಸುತಂ।
ಮಹಿಷೇವಾವ ಗಚ್ಛಥಃ। ಸಜೋಷಾಸಾ ಉಷಸಾ ಸೂರ್ಯೇಣ ಚ
ತ್ರಿವರ್ಣಯಾತಮಸ್ವಿನಾ॥
ಶ್ರೀಉಮಾಪತಯೇ ನಮಃ। 'ಹರಿದ್ರಾಚೂರ್ಣಂ' ಸಮರ್ಪಯಾಮಿ॥

**ಕುಂಕುಮಂ : (ಕುಂಕುಮವನ್ನು ಹಚ್ಚುವುದು)**

ಕುಂಕುಮಂ ಕಾಂತಿದಂ ದಿವ್ಯಂ ಸರ್ವಕಾರ್ಯ ಫಲಪ್ರದಂ
ಕುಂಕುಮೇನಾರ್ಚಿತೋದೇವ ಪ್ರಸನ್ನೋವರದೋಭವ॥
ಶ್ರೀ ಗೌರೀವಲ್ಲಭಾಯ ನಮಃ। 'ಕುಂಕುಮ ಚೂರ್ಣಂ' ಸಮರ್ಪಯಾಮಿ॥

**ಸಿಂಧೂರಂ : (ಚಂದನವನ್ನು ಹಚ್ಚುವುಮ)**

ಸಚಿತ್ರ ಚಿತ್ರಂ ಚಿತಯಂ·ತಮಸ್ಮೈ ಚಿತ್ರಕ್ಷತ್ರ ಚಿತ್ರತಮಂ ವಯೋಧಾಂ।
ಚಂದ್ರಂರಯೀಂ ಪುರವೀರಂ ಬೃಹಂತಂ ಚಂದ್ರ ಚಂದ್ರಾಭಿರ್ಗೃಣತೇ ಯುವಸ್ವ॥
ಶ್ರೀ ಭಕ್ತಬಂಧವೇ ನಮಃ। 'ಸಿಂಧೂರ ಚೂರ್ಣಂ' ಸಮರ್ಪಯಾಮಿ॥
ಶ್ರೀ ಸರ್ವಮಂಗಳಾಧವಾಯ ನಮಃ। ಸಕಲ ಮಂಗಳ ದ್ರವ್ಯಾಣಿ
ಸಮರ್ಪಯಾಮಿ॥

## ಅಥ ಅಂಗಪೂಜಾ

**(ಅಂಗಗಳಿಗೆ ಪುಷ್ಪಾಕ್ಷತೆಗಳನ್ನು ಅರ್ಪಿಸುವುದು)**

| | | | |
|---|---|---|---|
| ಓಂ ಶಿವಾಯ ನಮಃ– | ಪಾದೌ | ಪೂಜಯಾಮಿ | (ಪಾದಗಳು) |
| ಓಂ ಭವಾಯ ನಮಃ– | ಗುಲ್ಫೌ | '' | (ಹಿಮ್ಮಡಿ) |
| ಓಂ ವಾಮದೇವಾಯ ನಮಃ– | ಜಂಘೇ | '' | (ಹಿಂಭಾಗ) |
| ಓಂ ವಿರೂಪಾಕ್ಷಾಯ ನಮಃ– | ಜಾನುನೀ | '' | (ಮೊಣಕಾಲು) |
| ಓಂ ಮಹೇಶ್ವರಾಯ ನಮಃ– | ಊರೂನ್ | '' | (ತೊಡೆ) |

| | | | |
|---|---|---|---|
| ಓಂ ಶಂಭವೇ ನಮಃ– | ಕಟಿಂ | ,, | (ನಡು) |
| ಓಂ ಪಿನಾಕಿನೇ ನಮಃ– | ನಾಭಿಂ | ,, | (ಹೊಕ್ಕಳು) |
| ಓಂ ಸರ್ವಜ್ಞಾಯ ನಮಃ– | ಕುಕ್ಷಿಂ | ,, | (ಹೊಟ್ಟೆ) |
| ಓಂ ಹರಾಯ ನಮಃ– | ಹೃದಯಂ | ,, | (ಎದೆ) |
| ಓಂ ಶೂಲಪಾಣಯೇ ನಮಃ– | ಬಾಹೂನ್ | ,, | (ತೋಳುಗಳು) |
| ಓಂ ನೀಲಕಂಠಾಯ ನಮಃ– | ಕಂಠಂ | ,, | (ಕಂಠ) |
| ಓಂ ತ್ರಿಪುರಧ್ವಂಸಿಯೇ ನಮಃ– | ಮುಖಂ | ,, | (ಮುಖ) |
| ಓಂ ತ್ರಿಲೋಚನಾಯ ನಮಃ– | ನೇತ್ರೌ | ,, | (ಕಣ್ಣುಗಳು) |
| ಓಂ ಶ್ರುತಿಸುತ್ತಾಯ ನಮಃ– | ಕರ್ಣೌ | ,, | (ಕಿವಿಗಳು) |
| ಓಂ ಲಲಾಟಾಕ್ಷಾಯ ನಮಃ– | ಲಲಾಟಂ | ,, | (ಹಣೆ) |
| ಓಂ ಚಂದ್ರಮೌಳಯೇ ನಮಃ– | ಶಿರಃ | ,, | (ತಲೆ) |
| ಓಂ ಸರ್ವೇಶ್ವರಾಯ ನಮಃ– | ಸರ್ವಾಂಗಾನಿ | ,, | (ಎಲ್ಲಾ ಅಂಗಗಳು) |

॥ ಶ್ರೀ ಉಮಾಮಹೇಶ್ವರಸ್ವಾಮಿನೇ ನಮಃ-'ಅಂಗಪೂಜಾಂ' ಸಮರ್ಪಯಾಮಿ ॥

## ಅಥ ಪುಷ್ಪ ಪೂಜಾ

(ಹೂವುಗಳಿಂದ ಪೂಜಿಸುವುದು)

| | | |
|---|---|---|
| ಓಂ ಮಹಾದೇವಾಯ ನಮಃ– | ಮಲ್ಲಿಕಾಪುಷ್ಪಂ | ಸಮರ್ಪಯಾಮಿ |
| ಓಂ ಭವಾಯ ನಮಃ– | ಮಾಲತೀಪುಷ್ಪಂ | ,, |
| ಓಂ ಶಿವಾಯ ನಮಃ– | ಸೇವಂತಿಕಾಪುಷ್ಪಂ | ,, |
| ಓಂ ಕರುಣಾಕರಾಯ ನಮಃ– | ಕಮಲಪುಷ್ಪಂ | ,, |
| ಓಂ ಕುಮಾರಗುರವೇ ನಮಃ– | ಮರುವಕಪುಷ್ಪಂ | ,, |
| ಓಂ ಗಿರಿಜಾಪತಯೇ ನಮಃ– | ಗಿರಿಕರ್ಣಿಕಾಪುಷ್ಪಂ | ,, |
| ಓಂ ದ್ರೋಣಪ್ರಿಯಾಯ ನಮಃ– | ದ್ರೋಣಪುಷ್ಪಂ | ,, |
| ಓಂ ಕರಿಚರ್ಮಧರಾಯ ನಮಃ– | ಕರವೀರಪುಷ್ಪಂ | ,, |
| ಓಂ ಶ್ರೀ ಶಂಕರಾಯ ನಮಃ– | 'ಪುಷ್ಪ ಪೂಜಾಂ' | ಸಮರ್ಪಯಾಮಿ |

## ಅಥ ಪತ್ರಪೂಜಾ

(ವಿವಿಧ ಪತ್ರಗಳನ್ನು ಹಾಕುತ್ತಾ ಪೂಜಿಸುವುದು)

| | | |
|---|---|---|
| ಓಂ ಭವಾಯ ನಮಃ– | ಬಿಲ್ವಪತ್ರಂ | ಸಮರ್ಪಯಾಮಿ |
| ಓಂ ಶಿವಾಯ ನಮಃ– | ಸಿಂಧುವಾರ ಪತ್ರಂ | ,, |

| | | |
|---|---|---|
| ಓಂ ತ್ರಿಪುರಘ್ನಾಯ ನಮಃ– | ತುಲಸೀಪತ್ರಂ | ಸಮರ್ಪಯಾಮಿ |
| ಓಂ ತ್ರಿಲೋಕೇಶ್ವರಾಯ ನಮಃ– | ಭೃಂಗರಾಜ ಪತ್ರಂ | '' |
| ಓಂ ಶ್ರೀ ಮಹಾದೇವಾಯ ನಮಃ– | ಮರುವಕ ಪತ್ರಂ | '' |
| ಓಂ ದೂರ್ವಾಸ ವಂದಿತಾಯ ನಮಃ– | ದವನ ಪತ್ರಂ | '' |
| ಓಂ ಮುನಿಗಣ ಸಂಸೇವ್ಯಾಯ ನಮಃ– | ಮಾಚೀ ಪತ್ರಂ | '' |
| ಓಂ ಅಕ್ಷಯಾಯ ನಮಃ– | ಅಶ್ವತ್ಥ ಪತ್ರಂ | '' |
| ಓಂ ದುಷ್ಟದೂರಾಯ ನಮಃ– | ದ್ರೋಣಪತ್ರಂ | '' |
| ಓಂ ಶ್ರೀ ಶ್ರೀಕಂಠಾಯ ನಮಃ– | 'ಪತ್ರಪೂಜಾಂ' | ಸಮರ್ಪಯಾಮಿ |

ಪತ್ರಪೂಜಾಂ ಸಮರ್ಪಯಾಮಿ

## ಅಥ ನಾಮಪೂಜಾ

(ಪುಷ್ಪಾಕ್ಷತೆಗಳಿಂದ ಪೂಜಿಸುವುದು)

ಓಂ ಶಶಿಶೇಖರಾಯ ನಮಃ
ಓಂ ಶಿವಾಯ ನಮಃ
ಓಂ ಭವಾಯ ನಮಃ
ಓಂ ಕಪರ್ದಿನೇ ನಮಃ
ಓಂ ಶೂಲಪಾಣಯೇ ನಮಃ
ಓಂ ಶಿಪಿವಿಷ್ಟಾಯೇ ನಮಃ
ಓಂ ಖಟ್ವಾ ್ವಂಗಿನೇ ನಮಃ
ಓಂ ವೇದ ವೇದ್ಯಾಯ ನಮಃ
ಓಂ ಭಕ್ತವತ್ಸಲಾಯ ನಮಃ
ಓಂ ಸದಾಶಿವಾಯ ನಮಃ
ಓಂ ತ್ರಿಪುರಘ್ನಾಯ ನಮಃ
ಓಂ ಕರುಣಾಸಾಗರಾಯ ನಮಃ
ಓಂ ಕಲಿದೋಷಹರಾಯ ನಮಃ
ಓಂ ಶ್ರೀ ಉಮಾಮಹೇಶ್ವರಾಭ್ಯಾಂ ನಮಃ

ಇತಿ ನಾಮಪೂಜಾಂ ಸಮರ್ಪಯಾಮಿ

## ಅಥ ದೋರಗ್ರಂಥಿಪೂಜಾ

(ನೂತನ ದಾರಕ್ಕೆ ಪುಷ್ಪಾಕ್ಷತೆಗಳನ್ನು ಹಾಕುತ್ತಾ ಪೂಜಿಸುವುದು)

| | | |
|---|---|---|
| ಓಂ ಭವಾಯ ನಮಃ | ಪ್ರಥಮಗ್ರಂಥಿಂ | ಪೂಜಯಾಮಿ |
| ಓಂ ಶಿವಾಯ ನಮಃ | ದ್ವಿತೀಯಗ್ರಂಥಿಂ | '' |
| ಓಂ ರುದ್ರಾಯ ನಮಃ | ತೃತೀಯಗ್ರಂಥಿಂ | '' |
| ಓಂ ಪಶುಪತಯೇ ನಮಃ | ಚತುರ್ಥಗ್ರಂಥಿಂ | '' |
| ಓಂ ಉಗ್ರಾಯ ನಮಃ | ಪಂಚಮಗ್ರಂಥಿಂ | '' |
| ಓಂ ಮಹೇಶ್ವರಾಯ ನಮಃ | ಷಷ್ಠಮಗ್ರಂಥಿಂ | '' |
| ಓಂ ಭೀಮಾಯ ನಮಃ | ಸಪ್ತಮಗ್ರಂಥಿಂ | '' |
| ಓಂ ಈಶ್ವರಾಯ ನಮಃ | ಅಷ್ಟಮಗ್ರಂಥಿಂ | '' |
| ಓಂ ಉಮಾಮಹೇಶ್ವರಾಯ ನಮಃ | ನವಮಗ್ರಂಥಿಂ | '' |

ದೋರಗ್ರಂಥಿ ಪೂಜಾಂ ಸಮರ್ಪಯಾಮಿ||

# ಅಥ ಶಿವಾಷ್ಟೋತ್ತರ ಶತನಾಮಪೂಜಾ

(ಪುಷ್ಪಾಕ್ಷತೆಗಳನ್ನು ಸಮರ್ಪಿಸುತ್ತ ಪೂಜಿಸುವುದು)

ಓಂ ಶಿವಾಯ ನಮಃ
ಓಂ ಮಹೇಶ್ವರಾಯ ನಮಃ
ಓಂ ಶಂಭವೇ ನಮಃ
ಓಂ ಪಿನಾಕಿನೇ ನಮಃ
ಓಂ ಶಶಿಶೇಖರಾಯ ನಮಃ
ಓಂ ವಾಮದೇವಾಯ ನಮಃ
ಓಂ ವಿರೂಪಾಕ್ಷಾಯ ನಮಃ
ಓಂ ಕಪರ್ದಿನೇ ನಮಃ
ಓಂ ನೀಲಲೋಹಿತಾಯ ನಮಃ
ಓಂ ಶಂಕರಾಯ ನಮಃ 10
ಓಂ ಶೂಲಪಾಣಯೇ ನಮಃ
ಓಂ ಖಟ್ವಾಂಗಿನೇ ನಮಃ
ಓಂ ವಿಷ್ಣುವಲ್ಲಭಾಯ ನಮಃ
ಓಂ ಶಿಪಿವಿಷ್ಟಾಯ ನಮಃ
ಓಂ ಅಂಬಿಕಾನಾಥಾಯ ನಮಃ
ಓಂ ಶ್ರೀಕಂಠಾಯ ನಮಃ
ಓಂ ಭಕ್ತವತ್ಸಲಾಯ ನಮಃ
ಓಂ ಭವಾಯ ನಮಃ
ಓಂ ಶರ್ವಾಯ ನಮಃ
ಓಂ ತ್ರಿಲೋಕೇಶಾಯ ನಮಃ 20
ಓಂ ಶಿತಿಕಂಠಾಯ ನಮಃ
ಓಂ ಶಿವಪ್ರಿಯಾಯ ನಮಃ
ಓಂ ಉಗ್ರಾಯ ನಮಃ
ಓಂ ಕಪರ್ದಿನೇ ನಮಃ
ಓಂ ಕಾಮಾರಯೇ ನಮಃ
ಓಂ ಅಂಧಕಾಸುರ ಸೂದನಾಯ ನಮಃ
ಓಂ ಗಂಗಾಧರಾಯ ನಮಃ
ಓಂ ಲಲಾಟಾಕ್ಷಾಯ ನಮಃ
ಓಂ ಕಾಲಕಾಲಾಯ ನಮಃ

ಓಂ ಕೃಪಾನಿಧಯೇ ನಮಃ
ಓಂ ಭೀಮಾಯ ನಮಃ
ಓಂ ಪರಶುಹಸ್ತಾಯ ನಮಃ 30
ಓಂ ಮೃಗಪಾಣಯೇ ನಮಃ
ಓಂ ಜಟಾಧರಾಯ ನಮಃ
ಓಂ ಕೈಲಾಸವಾಸಿನೇ ನಮಃ
ಓಂ ಕವಚಿನೇ ನಮಃ
ಓಂ ಕಠೋರಾಯ ನಮಃ
ಓಂ ತ್ರಿಪುರಾಂತಕಾಯ ನಮಃ
ಓಂ ವೃಷಾಂಕಾಯ ನಮಃ
ಓಂ ವೃಷಭಾರೂಢಾಯ ನಮಃ
ಓಂ ಭಸ್ಮೋದ್ಧೂಳಿತವಿಗ್ರಹಾಯ ನಮಃ
ಓಂ ಸಾಮಪ್ರಿಯಾಯ ನಮಃ
ಓಂ ಸ್ವರಮಯಾಯ ನಮಃ
ಓಂ ತ್ರಯೀಮೂರ್ತಯೇ ನಮಃ
ಓಂ ಅನೀಶ್ವರಾಯ ನಮಃ
ಓಂ ಸರ್ವಜ್ಞಾಯ ನಮಃ
ಓಂ ಪರಮಾತ್ಮನೇ ನಮಃ
ಓಂ ಸೋಮಸೂರ್ಯಾಗ್ನಿ-
ಲೋಚನಾಯ ನಮಃ
ಓಂ ಹವಿಷೇ ನಮಃ
ಓಂ ಯಜ್ಞಮಯಾಯ ನಮಃ
ಓಂ ಸೋಮಾಯ ನಮಃ
ಓಂ ಪಂಚವಕ್ತ್ರಾಯ ನಮಃ
ಓಂ ಸದಾಶಿವಾಯ ನಮಃ 50
ಓಂ ವಿಶ್ವೇಶ್ವರಾಯ ನಮಃ
ಓಂ ವೀರಭದ್ರಾಯ ನಮಃ
ಓಂ ಗಣನಾಥಾಯ ನಮಃ
ಓಂ ಪ್ರಜಾಪತಯೇ ನಮಃ

ಓಂ ಹಿರಣ್ಯರೇತಸೇ ನಮಃ
ಓಂ ದುರ್ಧರ್ಷಾಯ ನಮಃ
ಓಂ ಗಿರೀಶಾಯ ನಮಃ
ಓಂ ಗಿರಿಶಾಯ ನಮಃ
ಓಂ ಅನಘಾಯ ನಮಃ
ಓಂ ಭುಜಂಗಭೂಷಣಾಯ ನಮಃ 60
ಓಂ ಗಿರಿಧನ್ವನೇ ನಮಃ
ಓಂ ಗಿರಿಪ್ರಿಯಾಯ ನಮಃ
ಓಂ ಕೃತ್ತಿವಾಸಸೇ ನಮಃ
ಓಂ ಪುರಾರಾತಯೇ ನಮಃ
ಓಂ ಭಗವತೇ ನಮಃ
ಓಂ ಪ್ರಮಥಾಧಿಪಾಯ ನಮಃ
ಓಂ ಮೃತ್ಯುಂಜಯಾಯ ನಮಃ
ಓಂ ಸೂಕ್ಷ್ಮತನವೇ ನಮಃ
ಓಂ ಜಗದ್ವ್ಯಾಪಿನೇ ನಮಃ
ಓಂ ಜಗದ್ಗುರವೇ ನಮಃ 70
ಓಂ ವ್ಯೋಮಕೇಶಾಯ ನಮಃ
ಓಂ ಮಹಾಸೇನಜನಕಾಯ ನಮಃ
ಓಂ ಚಾರುವಿಕ್ರಮಾಯ ನಮಃ
ಓಂ ರುದ್ರಾಯ ನಮಃ
ಓಂ ಭೂತಪತಯೇ ನಮಃ
ಓಂ ಸ್ಥಾಣವೇ ನಮಃ
ಓಂ ಅಹಿರ್ಬುಧ್ನ್ಯಾಯ ನಮಃ
ಓಂ ದಿಗಂಬರಾಯ ನಮಃ
ಓಂ ಅಷ್ಟಮೂರ್ತಯೇ ನಮಃ

ಓಂ ಅನೇಕಾತ್ಮನೇ ನಮಃ 80
ಓಂ ಸಾತ್ತ್ವಿಕಾಯ ನಮಃ
ಓಂ ಶುದ್ಧವಿಗ್ರಹಾಯ ನಮಃ
ಓಂ ಶಾಶ್ವತಾಯ ನಮಃ
ಓಂ ಖಂಡಪರಶವೇ ನಮಃ
ಓಂ ಅಜಾಯ ನಮಃ
ಓಂ ಪಾಶವಿಮೋಚನಾಯ ನಮಃ
ಓಂ ಮೃಡಾಯ ನಮಃ
ಓಂ ಪಶುಪತಯೇ ನಮಃ 90
ಓಂ ದೇವಾಯ ನಮಃ
ಓಂ ಮಹಾದೇವಾಯ ನಮಃ
ಓಂ ಅವ್ಯಯಾಯ ನಮಃ
ಓಂ ಪೂಷದಂತಭಿದೇ ನಮಃ
ಓಂ ಅವ್ಯಗ್ರಾಯ ನಮಃ
ಓಂ ಹರಯೇ ನಮಃ
ಓಂ ದಕ್ಷಾಧ್ವರಹರಾಯ ನಮಃ
ಓಂ ಹರಾಯ ನಮಃ
ಓಂ ಭಗನೇತ್ರಭಿದೇ ನಮಃ
ಓಂ ಅವ್ಯಕ್ತಾಯ ನಮಃ 100
ಓಂ ಸಹಸ್ರಾಕ್ಷಾಯ ನಮಃ
ಓಂ ಸಹಸ್ರಪದೇ ನಮಃ
ಓಂ ಅಪವರ್ಗಪ್ರದಾಯ ನಮಃ
ಓಂ ಅನಂತಾಯ ನಮಃ
ಓಂ ತಾರಕಾಯ ನಮಃ
ಓಂ ಪರಮೇಶ್ವರಾಯ ನಮಃ 108

**ಇತಿ ಶ್ರೀ ಶಿವಾಷ್ಟೋತ್ತರಶತನಾಮಪೂಜಾಂ ಸಮರ್ಪಯಾಮಿ॥**

(ಸೂಚನೆ : ಕಾಲಾವಕಾಶವಿದ್ದರೆ ಶಿವಸಹಸ್ರನಾಮ ಮಾಡಬಹುದು.)

**ಧೂಪಂ : (ಗಂಧದಕಡ್ಡಿಯನ್ನು ಹಚ್ಚಿ ಸಮರ್ಪಿಸುವುದು)**

ವನಸ್ಪತ್ಯುದ್ಭವೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ।
ಆಘ್ರೇಯಸ್ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ॥
ಶ್ರೀ ಮೃತ್ಯುಂಜಯಾಯ ನಮಃ–'ಧೂಪಂ' ಸಮರ್ಪಯಾಮಿ॥

**ದೀಪಂ :**

**(ಏಕಾರತಿ ದೀಪವನ್ನು ಹಚ್ಚಿ ಬೆಳಗಬೇಕು-ದೀಪವನ್ನು ಪಾದದಿಂದ ಮುಖ ಸ್ಥಾನದ ವರೆಗೆ ಮೂರುಸಾರಿ ಬೆಳಗಬೇಕು. ಅನಂತರ ಆಚಮನೀಯಕ್ಕಾಗಿ ನೀರನ್ನು ಅರ್ಘ್ಯ ಪಾತ್ರೆಯಲ್ಲಿ ಬಿಟ್ಟು ಪತ್ರ, ಪುಷ್ಪ ಅಥವಾ ಅಕ್ಷತೆಯನ್ನು ಸಮರ್ಪಿಸಬೇಕು).**

ಸಾಜ್ಯಂ ತ್ರಿವರ್ತಿ ಸಂಯುಕ್ತಂ ವಹ್ನಿನಾಯೋಜಿತಂ ಮಯಾ। ಗೃಹಾಣಾಂ ಮಂಗಳಂ ದೀಪಂ ತ್ರೈಲೋಕ್ಯ ತಿಮಿರಾಪಹ॥ ಭಕ್ತ್ಯಾದೀಪಂ ಪ್ರಯಚ್ಛಾಮಿ ದೇವಾಯ ಪರಮಾತ್ಮನೇ। ತ್ರಾಹಿಮಾಂ ನರಕಾದ್ಘೋರಾತ್ ದಿವ್ಯಜ್ಯೋತಿ ನಮೋಽಸ್ತುತೇ॥

ಶ್ರೀ ತ್ರಿಲೋಚನಾಯ ನಮಃ-'ದೀಪಂ' ಸಮರ್ಪಯಾಮಿ॥

**ನೈವೇದ್ಯಂ :**

**(ಚತುರಶ್ರ ಮಂಡಲವನ್ನು ಮಾಡಿ ಮಂಗಳದ್ರವ್ಯಗಳನ್ನೂ, ಅದರಮೇಲೆ ನೈವೇದ್ಯಕ್ಕೆ ಕಡುಬುಗಳನ್ನು ಇಟ್ಟು, ಅದರಮೇಲೆ ಕಲಶದಿಂದ ತೆಗೆದ ನೀರನ್ನು ಹೂವಿನಿಂದ ಪ್ರೋಕ್ಷಿಸಬೇಕು).**

ವಿಶ್ವಾಮಿತ್ರ ಸ್ಸವಿತಾ ಗಾಯತ್ರಿ। ಓಂ ಭೂರ್ಭುವಸ್ಸುವಃ। ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್॥ ದೇವಸ್ಯ ತ್ವಾ ಸವಿತುಃ। ಪ್ರಸವೇಶ್ವಿನೋ ಬಾಹುಭ್ಯಾಂ। ಪೂಷ್ಣೋ ಹಸ್ತಾಭ್ಯಾಯಗ್ನೇಸ್ತೇಜಸಾ ಸೂರ್ಯೇಣ ಚಿತ್ರವರ್ತಿ ತಮಸ್ವಿನಾಂ। ಸತ್ಯಂತ್ವರ್ತೇನ ಪರಿಷಿಂಚಾಮಿ। ಕಾಮಧೇನು ಸ್ಮರಾಮಿ। (ಪರಿಷೇಚನ (ಸುತ್ತುಗಟ್ಟುವುದು) ಮಾಡಬೇಕು). ಅಮೃತಮಸ್ತು ಅಮೃತೋಪಸ್ತರಣಮಸಿ, ಸ್ವಾಹಾ । **(ನೈವೇದ್ಯಕ್ಕಿಟ್ಟಿರುವ ಪದಾರ್ಥವನ್ನು ಪ್ರೋಕ್ಷಿಸಿ ಅದರ ಕಡೆಯಿಂದ ದೇವರ ಕಡೆಗೆ ಕೈ ತೋರಿಸುತ್ತಾ)**

| | |
|---|---|
| ಓಂ ಪ್ರಾಣಾಯ ಸ್ವಾಹಾ | ಓಂ ಉದಾನಾಯ ಸ್ವಾಹಾ |
| ಓಂ ಅಪಾನಾಯ ಸ್ವಾಹಾ | ಓಂ ಸಮಾನಾಯ ಸ್ವಾಹಾ |
| ಓಂ ವ್ಯಾನಾಯ ಸ್ವಾಹಾ | ಓಂ ಬ್ರಹ್ಮಣೇ ಸ್ವಾಹಾ |

ಶ್ರೀ ಭೀಮೇಶ್ವರ ದೇವತಾಭ್ಯೋನಮಃ ಯಥಾಭಾಗಂ (ಗುಡಂ, ಕದಳೀ ಫಲಂ ಇತ್ಯಾದಿ) ನಿವೇದಯಾಮಿ॥ **(ನೈವೇದ್ಯ ಪದಾರ್ಥವನ್ನು ಅರ್ಪಿಸುವುದು. ಅದರಮೇಲೆ ಒಂದು ಉದ್ಧರಣೆ ನೀರನ್ನು ಬಿಡುವುದು).**

ನಾನಾ ಪಕ್ವ ಫಲೋಪೇತಂ ನಾರಿಕೇಳ ಸಮನ್ವಿತಂ।
ಪಕ್ವಾನ್ನ ಭಕ್ಷಭೋಜ್ಯಂ ಚ ಕ್ಷೀರ ಶರ್ಕರಯಾನ್ವಿತಂ।
ನೈವೇದ್ಯಂ ಗೃಹ್ಯತಾಂ ದೇವ ಭಕ್ತಿಂ ಮೇಹ್ಯಚಲಾಂಕುರು॥
ಶ್ರೀ ನೀಲಕಂಠಾಯ ನಮಃ - 'ನೈವೇದ್ಯಂ' ಸಮರ್ಪಯಾಮಿ॥

**ತಾಂಬೂಲಂ :**

(ಎಲೆಅಡಿಕೆಯನ್ನು ಸಮರ್ಪಿಸಬೇಕು. ಅನಂತರ ಆಚಮನಕ್ಕಾಗಿ ಒಂದು ಉದ್ಧರಣೆ ನೀರನ್ನು ಬಿಟ್ಟು ಪತ್ರ ಪುಷ್ಪಾಕ್ಷತೆಗಳನ್ನು ದೇವರಿಗೆ ಅರ್ಪಿಸಬೇಕು. ಎಲೆಅಡಿಕೆಯ ತುದಿ ಮತ್ತು ತೊಟ್ಟಿನ ಭಾಗವನ್ನು ಮುರಿಯಬೇಕು).

ಪೂಗೀಫಲ ಸಮಾಯುಕ್ತಂ ನಾಗವಲ್ಲೀ ದಳೈರ್ಯುತಂ।
ಕರ್ಪೂರಚೂರ್ಣ ಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ॥
ಶ್ರೀ ಕಾಮಾರಾಯ ನಮಃ 'ತಾಂಬೂಲಂ' ಸಮರ್ಪಯಾಮಿ॥

**ಸುವರ್ಣಪುಷ್ಪಂ : (ಪುಷ್ಪವನ್ನು ಸಮರ್ಪಿಸುವುದು)**

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ।
ಅನಂತ ಪುಣ್ಯಫಲದಂ ಅತಶ್ಶಾಂತಿಂ ಪ್ರಯಚ್ಛಮೇ॥
ಶ್ರೀ ಭದ್ರಾಯನಮಃ 'ಸುವರ್ಣಪುಷ್ಪಂ ದಕ್ಷಿಣಾಂ' ಸಮರ್ಪಯಾಮಿ॥

**ಮಂತ್ರಪುಷ್ಪಂ :**

(ಪುಷ್ಪವನ್ನು ಕೈಯಲ್ಲಿ ಹಿಡಿದುಕೊಂಡು ಮಂತ್ರ ಹೇಳಿದನಂತರ ಸಮರ್ಪಿಸುವುದು)

ಮಲ್ಲಿಕಾ ಮಾಲತೀ ಜಾಜಿ ಸೇವಂತೀ ಕರವೀರಕೈಃ।
ಶತಪತ್ರೈಶ್ಚ ಕಲ್ಹಾರ ಗೃಹೀಷ್ವ ಕುಸುಮಾಂಜಲಿಂ॥
ಶ್ರೀ ಸದ್ಯೋಜಾತಾಯ ನಮಃ–'ಮಂತ್ರಪುಷ್ಪಂ' ಸಮರ್ಪಯಾಮಿ॥

**ಪ್ರದಕ್ಷಿಣಂ :**

(ಆಸನದಿಂದ ಇಳಿದು ಬಲಗಡೆ ಸ್ವಲ್ಪದೂರದಲ್ಲಿ ಮೂರುಸುತ್ತು ಸುತ್ತುವುದು)

ಪ್ರದಕ್ಷಿಣಂ ಕರೋಮಿತ್ವಾಂ ಸರ್ವಪಾಪೌಘ ನಾಶನ।
ತ್ರಾಹಿಮಾಂ ಪಾರ್ವತೀಕಾಂತ ಸಂಸಾರಾರ್ಣವ ತಾರಕ॥
ಶ್ರೀ ಅಷ್ಟಮೂರ್ತಯೇ ನಮಃ–'ಪ್ರದಕ್ಷಿಣಂ' ಸಮರ್ಪಯಾಮಿ॥

**ನಮಸ್ಕಾರ : (ಪ್ರದಕ್ಷಿಣೆ ಆದನಂತರ ಐದುಬಾರಿ ನಮಸ್ಕರಿಸುವುದು)**

ನಮಸ್ತೇ ಜಗದಾಧಾರ ನಮಸ್ತೇ ಕರುಣಾಕರ।
ನಮಸ್ತೇ ಪಾರ್ವತೀನಾಥ ವಿಶ್ವೇಶ್ವರ ನಮೋಽಸ್ತುತೇ॥
ಶ್ರೀ ಸದಾಚಾರ ಪ್ರಿಯಾಯ ನಮಃ–'ನಮಸ್ಕಾರಂ' ಸಮರ್ಪಯಾಮಿ॥

**ಪುನರರ್ಘ್ಯಂ : (ಒಂದು ಉದ್ಧರಣೆ ನೀರನ್ನು ಅರ್ಘ್ಯಪಾತ್ರೆಯಲ್ಲಿ ಬಿಡುವುದು)**

ನಮಸ್ತೇ ವಿಶ್ವಭವನ ನಮಸ್ತೇ ವಿಶ್ವಮೂರ್ತಯೇ।
ಪುನರರ್ಘ್ಯಂ ಪ್ರದಾಸ್ಯಾಮಿ ವಿಶ್ವನಾಥ ನಮೋಽಸ್ತುತೇ॥
ಶ್ರೀ ಶಿವಾಯ ನಮಃ–'ಪುನರರ್ಘ್ಯಂ' ಸಮರ್ಪಯಾಮಿ॥

**ಪುಷ್ಪಾಂಜಲಿ : (ಪುಷ್ಪವನ್ನು ಸಮರ್ಪಿಸುವುದು)**

ಪುಷ್ಪಾಂಜಲಿಂ ಪ್ರದಾಸ್ಯಾಮಿ ಪುಣ್ಯರೂಪಾಘನಾಶಕ।
ಪೂರ್ಣಂ ಮೇ ವಾಂಚಿತಂ ದೇಹಿ ಕಲ್ಯಾಣ ಪರಮೇಶ್ವರಂ॥
ಶ್ರೀ ವಾಮದೇವಾಯ ನಮಃ 'ಪುಷ್ಪಾಂಜಲಿಂ' ಸಮರ್ಪಯಾಮಿ॥
ಶ್ರೀ ಉಗ್ರಾಯ ನಮಃ–'ಕ್ಷಮಾಪಣಂ' ಸಮರ್ಪಯಾಮಿ॥

**ಪ್ರಾರ್ಥನಾ : (ಕೈಮುಗಿದುಕೊಂಡು ಪ್ರಾರ್ಥಿಸುವುದು)**

ಮೃತ್ಯುಂಜಯ ನಮಸ್ತುಭ್ಯಂ ತವಮೇ ಸೂತ್ರಧಾರಣಾತ್।
ಸೌಭಾಗ್ಯಂ ಧನಧಾನ್ಯಂ ಚ ಪುತ್ರವೃದ್ಧಿಂ ಸದಾಕುರು॥
ಶ್ರೀ ವೀರಭದ್ರಾಯ ನಮಃ 'ಪ್ರಾರ್ಥನಾಂ' ಸಮರ್ಪಯಾಮಿ॥

**ದೋರಬಂಧನಂ : (ನೂತನ ದಾರವನ್ನು ಬಲಗೈಗೆ ಕಟ್ಟಿಕೊಳ್ಳುವುದು)**

ಶಿವಸೂತ್ರಮಿದಂ ದೇವ ವಟತ್ವಕ್ ನವತಂತುಭಿಃ।
ಬದ್ನಾಮಿ ದಕ್ಷಿಣೇ ಹಸ್ತೇ ವ್ರತಾಚರಣ ಕಂಕಣಂ॥
ಮೃತ್ಯುಂಜಯ ನಮಸ್ತುಭ್ಯಂ ತವಮೇ ಸೂತ್ರ ಧಾರಣಾತ್।
ಸೌಭಾಗ್ಯಂ ಧನಧಾನ್ಯಂ ಚ ಪ್ರಜಾವೃದ್ಧಿಂ ಸದಾಕುರು॥

**ಉಪಾಯನದಾನಂ :**

ಉಪಾಯನದಾನಕ್ಕಾಗಿ ತೆಗೆದಿಟ್ಟಿರುವ ಅಕ್ಕಿ, ಎರಡು ತೆಂಗಿನಕಾಯಿ, ಹಣ್ಣುಗಳು, ವೀಳೆಯದೆಲೆ, ಅಡಿಕೆ ಮತ್ತು ದಕ್ಷಿಣೆ ಇಟ್ಟು ಬ್ರಾಹ್ಮಣರಿಗೆ ದಾನ ನೀಡಿ, ಅವರಿಂದ ಆಶೀರ್ವಾದ ಪಡೆಯಬೇಕು. ದಾನಕೊಡುವಾಗ ಈ ಕೆಳಗಿನ ಮಂತ್ರ ಹೇಳಬೇಕು.

"ದೇವಸ್ಯತ್ವಾ ಸವಿತುಃ ಪ್ರಸವೇ ಅಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಂ ಅಗ್ನೇಸ್ತೇಜ ಸೂರ್ಯಸ್ಸವರ್ಚ ಸೇಂದ್ರಿಯೇಣಾಭಿಷಿಂಚಾಮಿ। ಬಲಾಯಶ್ರಿಯೈ ಯಶಸೇನ್ನಾದ್ಯಾಯ॥ ಶ್ರೀ ಉಮಾಮಹೇಶ್ವರಸ್ವಾಮಿನೇ ನಮಃ ಉಪಾಯನದಾನಂ ಪ್ರತಿಗೃಹ್ಣಾತು॥

(ದಾನ ತೆಗೆದುಕೊಳ್ಳುವವರು ಹೇಳುವುದು) ಪ್ರತಿಗೃಹ್ಣಾಮಿ॥

ಅವರಿಂದ ಪ್ರಸಾದ ಪುಷ್ಪ-ಸ್ವೀಕರಿಸಬೇಕು.

ಗೋಧೂಮ ಲಡ್ಡುಕಂ ಚೈವ ಸತಾಂಬೂಲಂ ಸದಕ್ಷಿಣಂ।
ಸಫಲಂತೆ ಪ್ರದಾಸ್ಯಾಮಿ ಗೃಹೀತ್ವಾ ವರದೋಭವ॥
ತ್ರಿಲೋಕನಾಥಕಾಮಾರಾ ಭೀಮೇಶ್ವರ ಜಗತ್ಪತೇ।
ವಾಯನಂ ತವದಾಸ್ಯಾಮಿ ಪ್ರಸೀದ ಪರಮೇಶ್ವರ।.
ಭೀಮೇಶೋ ಪ್ರತಿಗೃಹ್ಣಾತಿ ಭೀಮೇಶೋ ವೈ ದದಾತಿಚ।
ಭೀಮೇಶೋ ಸ್ತಾರಕೋಭಾಭ್ಯಾಂ ಭೀಮೇಶಾಯ ನಮೋನಮಃ॥

**ಪ್ರತಿಗ್ರಹಣ ಮಂತ್ರ : (ಕೈ ಮುಗಿಯುವುದು)**

ದೀಪಸ್ತಂಭಂ ಹೇಮಮಯಂ ವಸ್ತ್ರಯುಗ್ಮೇನ ವೇಷ್ಟಿತಂ।
ದಾಸ್ಯಾಮಿ ತವದೇವೇಶ ಸುಪ್ರೀತೋ ಭವಸರ್ವದಾ॥
ರಾಜಿತಂ ದೀಪಪಾತ್ರಂ ಚ ಸ್ವರ್ಣವರ್ತಿ ಸಮನ್ವಿತಂ।
ದಾಸ್ಯಾಮಿ ಗಿರಿಜಾಕಾಂತ ಮಮಾಭೀಷ್ಟ ಪ್ರದೋಭವ॥

**ಪುನಃ ಪ್ರಾರ್ಥನೆ : (ಮತ್ತೆ ಕೈಮುಗಿದು ಪ್ರಾರ್ಥಿಸುವುದು)**

ಮತ್ಪತಿಂ ಜೀವಯ ಸ್ವಾಮಿನ್ ಭೀಮೇಶ ಶರದಾಂ ಶತಂ।
ಪ್ರಸಾದಂ ಕುರು ಸೌಭಾಗ್ಯಂ ಜ್ಯೋತಿರ್ಮಯ ಜಗತ್ಪತೇ॥
ಶ್ರೀ ತ್ರಿಲೋಚನಾಯ ನಮಃ – 'ಪುನಃ ಪ್ರಾರ್ಥನಾಂ' ಸಮರ್ಪಯಾಮಿ॥

**ಪೂರ್ಣಫಲ ಸಮರ್ಪಣಂ :**

**(ಒಂದು ತೆಂಗಿನಕಾಯಿಗೆ ಅರಶಿನ ಕುಂಕುಮ ಹಚ್ಚಿ ವೀಳೆದೆಲೆ ಅಡಿಕೆ ಸಹಿತ ದೇವರ ಬಲಭಾಗದಲ್ಲಿ ಇಡಬೇಕು).**

ಇದಂ ಫಲಂ ಮಹಾದೇವ ಸ್ಥಾಪಿತಂ ಪುರತಸ್ತವ।
ತೇ ನಮೇ ಸಫಲಾವಾಪ್ತಿರ್ಭವೇಜ್ಜನ್ಮನಿ ಜನ್ಮನಿ॥

ಶ್ರೀ ಉಮಾಮಹೇಶ್ವರಾಯ ನಮಃ – 'ಪೂರ್ಣಫಲಂ' ಸಮರ್ಪಯಾಮಿ॥

**ಪುನಃ ಪೂಜಾ : (ಪುಷ್ಪಾಕ್ಷತೆಗಳನ್ನು ಸಮರ್ಪಿಸಿ ನಮಸ್ಕರಿಸುವುದು)**

ಪೂಜಾಂತೆ ಛತ್ರಂ ಸಮರ್ಪಯಾಮಿ। ಚಾಮರಂ ಸಮರ್ಪಯಾಮಿ। ಗೀತಂ ಸಮರ್ಪಯಾಮಿ। ವಾದ್ಯಂ ಸಮರ್ಪಯಾಮಿ। ನೃತ್ಯಂ ಸಮರ್ಪಯಾಮಿ। ಆಂದೋಳಿಕಂ

ಸಮರ್ಪಯಾಮಿ। ಅಶ್ವಾರೋಹಣಂ ಸಮರ್ಪಯಾಮಿ। ಗಜಾರೋಹಣಂ ಸಮರ್ಪಯಾಮಿ। ರಥಾರೋಹಣಂ ಸಮರ್ಪಯಾಮಿ। ಮಮ ಇಷ್ಟೋಪಚಾರ, ಪಿಷ್ಟೋಪಚಾರ, ಭಕ್ತ್ಯುಪಚಾರ, ಶಕ್ತ್ಯುಪಚಾರ, ಮಾನಸೋಪಚಾರ ಪೂಜಾಂ ಸಮರ್ಪಯಾಮಿ। ಪ್ರಾರ್ಥಯಾಮಿ। ಪೂಜಯಾಮಿ। ನಮಸ್ಕರೋಮಿ॥

**ಕ್ರಿಯಾಲೋಪ ಪ್ರಾಯಶ್ಚಿತ್ತ : (ಕೈ ಮುಗಿದು ಪ್ರಾರ್ಥಿಸುವುದು)**

ಯಸ್ಯಸ್ಮೃತ್ಯಾಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು। ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋವಂದೇ ತಮಚ್ಯುತಂ। ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಸುರಾರ್ಚಿತಂ ಯತ್ಪೂಜಿತಂ ಮಯಾದೇವ ಪರಿಪೂರ್ಣಂ ತದಸ್ತುಮೇ॥

ಪೂಜಾಕಾಲೇ ಮಧ್ಯೇ ಮಂತ್ರ, ತಂತ್ರ..... ಗೋವಿಂದೇಭ್ಯೋ ನಮೋನಮಃ॥ ಅನಯಾ ಮಯಾಕೃತ ಕಲ್ಪೋಕ್ತ ಪ್ರಕಾರೇಣ ಯಾವಚ್ಛಕ್ತಿ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಯಾ ಭಗವಾನ್ ಸರ್ವಾತ್ಮಕ ಸರ್ವಶ್ರೀ ಜ್ಯೋತಿಸ್ವರೂಪ ಶ್ರೀ ಉಮಾಮಹೇಶ್ವರಸ್ಸುಪ್ರೀತಸ್ಸುಪ್ರಸನ್ನ ವರದೋ ಭವತು॥

**ಪ್ರಸಾದ ಧಾರಣಂ :**

**(ದೇವರಿಗೆ ಪೂಜೆ ಮಾಡಿದ ಪುಷ್ಪವನ್ನು ಸ್ವೀಕರಿಸಿ ಕಣ್ಣಿಗೆ ಒತ್ತಿ ತಲೆಯಲ್ಲಿ ಧರಿಸಬೇಕು)**

ಅಯಂ ಮೇ ಹಸ್ತ ಇತ್ಯಸ್ಯ। ಗೌಪಾಯನೋ ಹಸ್ತೋಽನುಷ್ಟುಪ್। ಪ್ರಸಾದ ಸ್ವೀಕರಣೇ ವಿನಿಯೋಗಃ॥

7ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ॥ ಅಯಂ ಮೇ ವಿಶ್ವ ಭೇಷಜೋಯಂ ಶಿವಾಭಿಮರ್ಶಿನಃ॥ ಯಾಂತು ದೇವಗಣಾಃ ಸರ್ವೇ ಪೂಜಾಮಾದಾಯ ಮತ್ಕೃತಾಂ॥

**ಭಗವದರ್ಪಣಂ :**

**(ಕೈಯಲ್ಲಿ ಹೂವು, ಪತ್ರೆ, ಅಕ್ಷತೆಯನ್ನು ತೆಗೆದುಕೊಂಡು, ಒದು ಉದ್ಧರಣೆ ನೀರು ಹಾಕಿ ಅರ್ಘ್ಯಪಾತ್ರೆಯಲ್ಲಿ ವಿಸರ್ಜಿಸಬೇಕು).**

ಕಾಯೇನವಾಚಾ ಮನಸೇಂದ್ರಿಯೈರ್ವಾ। ಬುದ್ಧ್ಯಾತ್ಮನಾವ ಪ್ರಕೃತೇಃ ಸ್ವಭಾವಾತ್ ಕರೋಮಿ ಯದ್ಯತ್ ಸಕಲಂ ಶ್ರೀ ಭೀಮೇಶ್ವರಾಯ ಸಮರ್ಪಯಾಮಿ॥ ಓಂ ತತ್ಸತ್–ಬ್ರಹ್ಮಾರ್ಪಣಮಸ್ತು॥

**ತೀರ್ಥಗ್ರಹಣಂ :**

(ಮೂರುಬಾರಿ ತೀರ್ಥವನ್ನು ಸ್ವೀಕರಿಸಬೇಕು. ಕೆಳಕ್ಕೆ ಚೆಲ್ಲಬಾರದು)

ಶರೀರೇ ಜರ್ಝರೀಭೂತೇ..... ನಾರಾಯಣೋ ಹರಿः॥

ಅಕಾಲ ಮೃತ್ಯುಹರಣಂ ಸರ್ವವ್ಯಾಧಿ ನಿವಾರಣಂ ಸಮಸ್ತ

ದುರಿತೋಪಶಮನಂ ಶ್ರೀ ಭೀಮೇಶ್ವರ ಪಾದೋದಕಂ ಶುಭಂ

(ಪಾದಪಂಕಜಂ)

**ತಿಲಕಧಾರಣೆ :**

(ತಾನು ಕುಳಿತು ಪೂಜಿಸಿದ ಸ್ಥಳವನ್ನು ಪ್ರೋಕ್ಷಿಸಿ, ತೇದು ತಿಲಕಧಾರಣೆ ಮಾಡಬೇಕು).

ಅದ್ಯಾನೋ ದೇವ ಸವಿತಃ ಪ್ರಜಾವತ್ಸಾವೀಸ್ಸೌಭಗಂ। ಪರಾದುಸ್ವಪ್ನಿಯಗ್ಂಸುವ। ವಿಶ್ವಾನಿದೇವ ಸವಿತರ್ದುರಿತಾನಿ ಪರಾಸುವ॥ ಯದ್ಭದ್ರಂ ತನ್ನ ಆಸುವ ಮಯಿ ಮಹೋ, ಮಯಿ ಯಶೋ, ಮಯೀಂದ್ರಿಯಂ ವೀರ್ಯಂ॥

ಕುಸುಮಾಕ್ಷತಾಂ ಗೃಹೀತ್ವಾ। ಸ್ತಂಭಂಸ್ಪರ್ಶ॥ ಯಾಂತು ದೇವಗಣಾಸ್ಸರ್ವೇ ಪೂಜಾಮಾದಾಯ ಮತ್ಕೃತಾಂ। ಇಷ್ಟಕಾಮ್ಯಾರ್ಥ ಸಿದ್ಧ್ಯರ್ಥ ಪುನರಾಗಮನಾಯಚ॥ ಶ್ರೀ ಭೀಮೇಶ್ವರ ಸ್ವಾಮಿಯೇ ನಮಃ ಯಥಾಸ್ಥಾನಮುದ್ವಾಸಯಾಮಿ। ಶೋಭನಾರ್ಥೆ ಪುನರಾಗಮನಾಯಚ॥

॥ಜ್ಯೋತಿರ್ಭೀಮೇಶ್ವರ ವ್ರತವಿಧಾನಂ ಸಂಪೂರ್ಣಂ॥

# ಶ್ರೀ ಭೀಮೇಶ್ವರ ವ್ರತಕಥಾ

ನೈಮಿಶಾರಣ್ಯ ವಾಸಿಗಳಾದ ಶೌನಕಾದಿ ಮಹಾಮುನಿಗಳು ಸೂತಪುರಾಣಿಕರನ್ನು ಕಂಡು–ಎಲೆ ಮುನಿವರ್ಯರೇ। ಸ್ತ್ರೀಯರು ಆಚರಿಸಲು ಅನುಕೂಲವಾಗಿಯೂ, ಸೌಭಾಗ್ಯ ಸೌಮಂಗಲ್ಯ ಸುಖಸಂತೋಷ ಉತ್ತರೋತ್ತರ ಅಭಿವೃದ್ಧಿಪ್ರದವಾಗಿಯೂ ಇರುವ ಒಂದು ವ್ರತವನ್ನು ಹೇಳಬೇಕೆಂದು ಕೇಳಿಕೊಳ್ಳಲು, ಸೂತಮಹಾಮುನಿಗಳು ಹೇಳುತ್ತಾರೆ – ಸೌಮಂಗಲ್ಯಾಭಿವೃದ್ಧಿಯನ್ನು ಬಯಸುವ ಸ್ತ್ರೀಯರು ಆಷಾಢಮಾಸದ ಅಮಾವಾಸ್ಯೆಯ ದಿವಸ ಪತಿಸಂಜೀವನಾರ್ಥವಾಗಿ, ಸುಖಪ್ರದವಾದ ''ಭೀಮೇಶ್ವರ ಅಮಾವಾಸ್ಯೆಯ ವ್ರತ''ವನ್ನು ಮಾಡಬೇಕು. ಈ ವ್ರತಕ್ಕೆ ''ಜ್ಯೋತಿಸ್ತಂಭವ್ರತ'' ''ಪತಿ ಸಂಜೀವಿನೀ ವ್ರತ'' ಎಂದೂ ಕರೆಯುವರು. ಆ ದಿವಸ ಸ್ತ್ರೀಯರು ಮಂಗಳಸ್ನಾನ ಮಾಡಿ, ಪೂಜಾಗೃಹವನ್ನು ರಂಗವಲ್ಯಾದಿಗಳಿಂದ ಅಲಂಕರಿಸಿ, ಪೀಠವನ್ನು ಹಾಕಿ, ಅದರಮೇಲೆ ಅಕ್ಕಿಯನ್ನು ಹರಡಿ, ಆ ಸ್ಥಳದಲ್ಲಿ ಎರಡು ಮಣ್ಣಿನ ಬೊಂಬೆಗಳನ್ನೂ, ಜ್ಯೋತಿಸ್ತಂಭವೆಂಬ ವಿಧಾನದಿಂದ ಒಂದು ದೀಪವನ್ನೂ ಇಟ್ಟು, ಉಮಾಸಹಿತನಾದ

ಮಹೇಶ್ವರನನ್ನು ಆವಾಹಿಸಿ, ಜ್ಯೋತಿರ್ಮಯಾತ್ಮನೆಂದು ಭಕ್ತಿಯಿಂದ ಧ್ಯಾನಿಸುತ್ತ ತುಪ್ಪದ ದೀಪವನ್ನು ಹಚ್ಚಿರುವ ದೀಪಸ್ತಂಭವನ್ನು ಆ ಸ್ಥಳದಲ್ಲಿಟ್ಟು, ಆ ಸ್ತಂಭದಲ್ಲಿರುವ ಉಮಾ ಮಹೇಶ್ವರನನ್ನು ಭಕ್ತಿಯಿಂದ ಪೂಜಿಸಿ, ಗೋಧೂಮ ಪಿಷ್ಟದಿಂದಲೂ, ಕಡುಬುಗಳಿಂದಲೂ ನೈವೇದ್ಯಮಾಡಿ, ಅದನ್ನು ನೂರರಂತೆ ಆಚಾರ್ಯರಿಗೆ ಉಪಾಯನವಾಗಿ ಕೊಡಬೇಕು. ಒಂಬತ್ತು ಗಂಟಿನ ದಾರವನ್ನು ಮಂತ್ರಪುರಸ್ಸರವಾಗಿ ಕೈಗೆ ಕಟ್ಟಿಕೊಂಡು ಚಂದ್ರನಿಗೆ ಅರ್ಘ್ಯಪ್ರದಾನಮಾಡಿ, ಬ್ರಾಹ್ಮಣ ಸುವಾಸಿನಿಯರನ್ನು ಭೋಜನ ದಾನದಕ್ಷಿಣೆಗಳಿಂದ ತೃಪ್ತಿಪಡಿಸಿ, ತಾನೂ ಕಥೆಯನ್ನು ಕೇಳಿದನಂತರ ಭೋಜನಮಾಡಿ, ರಾತ್ರಿ ಭಗವಂತನನ್ನು ಧ್ಯಾನಿಸುತ್ತ ಆ ದೀಪಸ್ತಂಭದ ಬಳಿಯಲ್ಲಿಯೇ ಮಲಗಿರಬೇಕು. ಈ ರೀತಿ ಒಂಬತ್ತು ವರ್ಷಗಳ ಕಾಲ ಮಾಡಿ ಉದ್ಯಾಪನೆಯನ್ನು ಮಾಡಬೇಕು. ಈ ರೀತಿ ಮಾಡಿದರೆ ಸರ್ವ ಇಷ್ಟಾರ್ಥಗಳೂ ಲಭಿಸುವುವು. ಇಂತಹ ಸರ್ವೋತ್ತಮವಾದ ವ್ರತವನ್ನು ಮಾಡಿ ಸತ್ತ ಪತಿಯನ್ನು ಬದುಕಿಸಿಕೊಂಡ ಒಬ್ಬ ಪತಿವ್ರತೆಯ ಕಥೆಯನ್ನು ನಿಮಗೆ ತಿಳಿಸುತ್ತೇನೆ.

ಪೂರ್ವದಲ್ಲಿ ಸೌರಾಷ್ಟ್ರದೇಶದಲ್ಲಿ ವಜ್ರಬಾಹುವೆಂಬ ರಾಜನು ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದನು. ಸಾಧ್ವಿಯಾದ ಪತ್ನಿಯೂ, ಸರ್ವಶಾಸ್ತ್ರ ವಿಶಾರದನೂ, ಸುಂದರನೂ, ಧೈರ್ಯವಂತನೂ ಆದ ವೈಜಯಶೇಖರನೆಂಬ ಒಬ್ಬ ಮಗನೂ ಇದ್ದರು. ಪ್ರಾಪ್ತವಯಸ್ಕನಾದ ಮಗನಿಗೆ ಮದುವೆ ಮಾಡಬೇಕೆಂದು ಯೋಚಿಸುತ್ತಿರುವಲ್ಲಿಯೇ ಅವನು ದೈವಯೋಗದಿಂದ ಮೃತನಾದನು. ಅತ್ಯಂತ ದುಃಖತಪ್ತರಾದ ಆ ರಾಜದಂಪತಿಗಳು ಮೃತನಾದ ಪುತ್ರನ ಕಳೇಬರಕ್ಕೆ ವಿವಾಹವನ್ನು ಮಾಡಿ ಸಂತೋಷಿಸಬೇಕೆಂದು ಯೋಚಿಸಿ – ''ಈ ನನ್ನ ಮೃತನಾದ ಮಗನಿಗೆ ಮದುವೆಗಾಗಿ ಹೆಣ್ಣು ಕೊಡತಕ್ಕವರಿಗೆ ಲಕ್ಷದ್ರವ್ಯವನ್ನು ಕೊಡುವೆ''ನೆಂದು ಪಟ್ಟಣದಲ್ಲೆಲ್ಲಾ ಡಂಗುರವನ್ನು ಹೊಡೆಸಿದನು. ಆ ಪಟ್ಟಣದಲ್ಲಿ ವೇದವೇದಾಂಗ ಸಕಲಶಾಸ್ತ್ರ ಪಾರಂಗತನೂ, ಅಗ್ನಿಹೋತ್ರ ಕರ್ಮನಿರತನೂ, ದರಿದ್ರನೂ, ಆದ ಮಾಧವ ಶರ್ಮನೆಂಬ ಬ್ರಾಹ್ಮಣನಿಗೆ ಪತ್ನಿ, ಐದು ಜನ ಹೆಣ್ಣುಮಕ್ಕಳು, ಒಂಬತ್ತು ಜನ ಗಂಡುಮಕ್ಕಳಿದ್ದರು. ಮಾಧವಶರ್ಮನು ತನ್ನ ಪತ್ನಿ ಸುಶೀಲೆಗೆ ಡಂಗುರದ ವಿಷಯವನ್ನು ತಿಳಿಸಿ – ''ತಾನು ಪೂರ್ಣವಿದ್ಯಾವಂತನಾಗಿದ್ದರೂ, ನಾವು ದಾರಿದ್ರ್ಯದಿಂದ ಪೀಡಿತರಾಗಿದ್ದೇವೆ. ಮಕ್ಕಳಿಗೆ ಸರಿಯಾಗಿ ಆಹಾರಕೊಡಲು ಸಾಧ್ಯವಾಗಿಲ್ಲ. ಆದ್ದರಿಂದ ನಮ್ಮ ಐದುಜನ ಹೆಣ್ಣುಮಕ್ಕಳಲ್ಲಿ ಒಬ್ಬಳನ್ನು ಆ ರಾಜಪುತ್ರನಿಗೆ ಕೊಡೋಣ''ವೆಂದು ಹೇಳಲು ಮೊದಲು ಅವನ ಮಾತಿಗೆ ಸಮ್ಮತಿಸದ ಸುಶೀಲೆ ನಂತರ ತನ್ನ ಪತಿಯ ಮಾತಿಗೆ ಒಪ್ಪಿದಳು. ಮಾಧವಶರ್ಮನು ರಾಜನಿಗೆ ತನ್ನ ನಿಶ್ಚಯವನ್ನು ತಿಳಿಸಿದನು. ರಾಜನು ಮಾಧವಶರ್ಮನಿಗೆ ಲಕ್ಷದ್ರವ್ಯವನ್ನು ಕೊಟ್ಟು, ಅವನ ಮಗಳನ್ನು ತನ್ನ ಮಗನಿಗೆ ಶಾಸ್ತ್ರೋಕ್ತವಾಗಿ ಮದುವೆ ಮಾಡಿಸಿ, ಅನಂತರ ಶವವನ್ನು ಸಂಸ್ಕಾರಕ್ಕಾಗಿ ಸ್ಮಶಾನಕ್ಕೆ ತೆಗೆದುಕೊಂಡುಹೋಗಿ ಚಿತೆಯನ್ನು





ನಿರ್ಮಿಸಿ ಅದರ ಮೇಲೆ ಶವವನ್ನಿಟ್ಟು ಸೊಸೆಗೆ ಬೆಂಕಿಯನ್ನು ಹಾಕುವಂತೆ ತಿಳಿಸಿದನು. ಪತಿಭಕ್ತಿಪರಾಯಣೆಯಾದ ಆ ಹುಡುಗಿಯು ಮನಸ್ಸಿನಲ್ಲಿ ಪರಮೇಶ್ವರನನ್ನು ಧ್ಯಾನಿಸುತ್ತಾ ಅಗ್ನಿಯನ್ನು ಪ್ರತಿಷ್ಠಿಸಿದಳು. ಕೂಡಲೆ ಅಗಾಧವಾದ ಮಳೆಯು ಬಂದು ಎಲ್ಲೆಲ್ಲೂ ನೀರು ತುಂಬಿಕೊಂಡಿತು. ರಾಜನೂ, ಪರಿವಾರದವರೂ, ಇತರರೂ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಆ ದಿನ ಅಮಾವಾಸ್ಯೆಯಾಗಿದ್ದ ಕಾರಣ ಗಾಢಾಂಧಕಾರವು ಹಬ್ಬಿತ್ತು. ಆ ದುರ್ಗಮಪ್ರದೇಶದಲ್ಲಿ ಆ ಬಾಲಕಿಯೊಬ್ಬಳೇ ರೋಧಿಸುತ್ತಾ ಈ ಕಷ್ಟ ಸಮಯದಲ್ಲಿ ತನಗೆ ಮತ್ತಾರೂ ಗತಿ ಇಲ್ಲವೆಂದು ಬಗೆದು ಭಗವಂತನನ್ನು ಕುರಿತು ಭಕ್ತಿಯಿಂದ ಬೇಡಿಕೊಂಡಳು. ಭಕ್ತವತ್ಸಲ, ಮಹಾದೇವ, ಮೃತ್ಯುಂಜಯ ನಿನ್ನ ಹೊರತು ನನಗೆ ಮತ್ಯಾರೂ ದಿಕ್ಕಿಲ್ಲ. ನಿನ್ನಿಂದ ಮಾರ್ಕಂಡೇಯನೂ, ಚ್ಯವನಋಷಿಯೂ, ಶ್ವೇತವಾಹನನೂ ಪೂರ್ಣ ಆಯುಸ್ಸನ್ನು ಪಡೆದರು. ರತಿದೇವಿಗೂ, ಸ್ವಾಹಾಸ್ವದೇಯರಿಗೂ, ಮಾರ್ಕಂಡೇಯನ ಪತ್ನಿಗೂ, ನೀನು ಸೌಭಾಗ್ಯವನ್ನು ದಯಪಾಲಿಸಿದೆ. ಹಾಗೆಯೇ ನನ್ನ ಪತಿಜೀವವನ್ನು ಉಳಿಸಿ ನನ್ನ ಸೌಭಾಗ್ಯವನ್ನು ಕಾಪಾಡು ಎಂಬುದಾಗಿ ಪರಶಿವನನ್ನು ಬೇಡಿಕೊಳ್ಳುತ್ತಿದ್ದಳು. ಆಗ ದಯಾಳುವಾದ ಪರಮೇಶ್ವರನು ನಂದಿವಾಹನನಾಗಿ ಪಾರ್ವತಿಯೊಡಗೂಡಿ ಆ ಸ್ಮಶಾನಕ್ಕೆ ಬಂದು ಆ ಭಕ್ತಳಿಗೆ ದರ್ಶನಕೊಟ್ಟನು. ಆಗ ಆ ಕನ್ಯಾಮಣಿಯು ಭಕ್ತಿಯಿಂದ ಶಿವಪಾರ್ವತಿಯರಿಗೆ ನಮಸ್ಕರಿಸಿ ತನ್ನ ಪ್ರಾರ್ಥನೆಯನ್ನು ಅನುಗ್ರಹಿಸಿ ಕಾಪಾಡಬೇಕೆಂದು ಪ್ರಾರ್ಥಿಸಲು ಆಗ ಪರಮೇಶ್ವರನು ಈ ಭೀಮೇಶ್ವರ ಅಮಾವಾಸ್ಯೆಯ ವ್ರತವನ್ನು ಆಚರಿಸಲು ತಿಳಿಸಿ ವ್ರತಕ್ರಮವನ್ನು ವಿವರಿಸಿ ಅದರಂತೆ ನೀನು ಮಾಡಿದರೆ ನಿನ್ನ ಪತಿಯು ಜೀವಿಸುವನು ಎಂದು ಹೇಳಿ ಅದೃಶ್ಯನಾದನು. ಕೂಡಲೆ ಆಕೆ ಸಂತೋಷಭರಿತಳಾಗಿ ಹತ್ತಿರದಲ್ಲೇ ಇದ್ದ ಮಣ್ಣಿನಿಂದ ದೀಪಸ್ತಂಭವನ್ನು ಮಾಡಿ, ಆಲದ ಹಾಲನ್ನು ಎಣ್ಣೆಯಾಗಿ ಹಾಕಿ, ಆಲದ ನಾರಿನಿಂದ ಬತ್ತಿಯನ್ನು ಮಾಡಿ ಆಲದ ಎಲೆಗಳನ್ನು ವೀಳೆಯದೆಲೆಯನ್ನಾಗಿಯೂ, ಹಣ್ಣುಗಳನ್ನು ಅಡಿಕೆಯಾಗಿಯೂ, ಚಿಗುರು ಗರಿಕೆಗಳನ್ನು ಹೂವಾಗಿಯೂ ಮಾಡಿಕೊಂಡು, ಮಣ್ಣಿನ ಉಂಡೆಗಳಿಂದ ಕಡುಬುಗಳನ್ನು ಮಾಡಿಟ್ಟುಕೊಂಡು, ಭಕ್ತಿಯಿಂದ ಮನಸ್ಸಿನಲ್ಲಿ ಧೂಪ, ದೀಪ, ನೈವೇದ್ಯ, ತಾಂಬೂಲ ದಕ್ಷಿಣೆಗಳನ್ನು ಸ್ಮರಿಸುತ್ತ ಏಕಚಿತ್ತ ಮನೋಭಾವದಿಂದ ದೃಢ ಸಂಕಲ್ಪಳಾಗಿ ಭೀಮೇಶ್ವರ ವ್ರತವನ್ನು ಮಾಡಿ ಮುಗಿಸಿದಳು. ಆ ವ್ರತದ ಪ್ರಭಾವದಿಂದ ಮಲಗಿದ್ದವರು ಏಳುವಂತೆ ಚಿತೆಯ ಮೇಲಿದ್ದ ರಾಜಪುತ್ರನು ಎದ್ದು ಕುಳಿತನು. ಸ್ಮಶಾನವೇ ಅರಮನೆಯಾಯಿತು. ಚಿತೆಯೇ ಪರ್ಯಂಕವಾಯಿತು. ಆಗ ತನ್ನ ಗಂಡನ ಸ್ಥಿತಿಯನ್ನು ಕಂಡು ಸಂತೋಷದಿಂದ ಸತಿಪತಿಗಳಿಬ್ಬರೂ ಆನಂದಿಂದಿದ್ದರು. ಬೆಳಗಾಗುತ್ತಲೆ ರಾಜಭಟರು ಬಂದು ನೋಡಿ ಆಶ್ಚರ್ಯಪಟ್ಟು ವಿಚಾರವನ್ನು ರಾಜನಿಗೆ ತಿಳಿಸಲು ಆಶ್ಚರ್ಯ ಆನಂದಗಳಿಂದ ಕೂಡಿದ ರಾಜನು ಅಲ್ಲಿಗೆ ಬಂದು ನಡೆದುದೆಲ್ಲವನ್ನು ಕೇಳಿ ಆನಂದದಿಂದ ಅವರನ್ನು ಅರಮನೆಗೆ





ಕರೆದುಕೊಂಡು ಹೋಗಿ, ಬಡಬಗ್ಗರಿಗೆ ಅನ್ನಾಹಾರ ವಸ್ತ್ರಾದಿ ದಾನಗಳನ್ನು ಮಾಡಿ, ಮಾಧವಶರ್ಮನನ್ನು ಬಹಳವಾಗಿ ಹೊಗಳಿ ಮನ್ನಿಸಿದನು. ಆ ದಂಪತಿಗಳು ನಂತರ ಇಹದಲ್ಲಿ ಸಕಲ ಸೌಖ್ಯಗಳನ್ನೂ ಅನುಭವಿಸಿ ಅಂತ್ಯದಲ್ಲಿ ಶಿವಸಾಯುಜ್ಯವನ್ನು ಸೇರಿದರು ಎಂದು ಸೂತಮಹಾಮುನಿಗಳು ಶೌನಕಾದಿಗಳಿಗೆ ಹೇಳಿದ ಸ್ಕಾಂದ ಪುರಾಣೋಕ್ತವಾದ ಈ 'ಪತಿಸಂಜೀವಿನೀ' ಅಥವಾ 'ಭೀಮೇಶ್ವರ ಅಮಾವಾಸ್ಯೆ ವ್ರತ'ದ ಕಥೆಯು ಮುಗಿದುದು. ಈ ವ್ರತಕಥೆಯನ್ನು ಓದುವವರೂ, ಹೇಳುವವರೂ, ಕೇಳುವವರೂ ಸಂತಾನ, ಸೌಭಾಗ್ಯಾದಿಗಳನ್ನು ಪಡೆಯುವರು.

॥ಶುಭಮ್॥





# ಶ್ರೀ ಅನಂತಪದ್ಮನಾಭ ವ್ರತ

ಈ ವ್ರತವನ್ನು ಭಾದ್ರಪದ ಶುಕ್ಲ ಚತುರ್ದಶಿ ದಿನ ಆಚರಿಸಬೇಕು. ಸೂರ್ಯೋದಯ ಕಾಲದಲ್ಲಿ ಚತುರ್ದಶಿಯು ಒಂದು ಘಳಿಗೆ ಇದ್ದರೂ ಆ ದಿನವೇ ವ್ರತ ಮಾಡಬೇಕು. ಹಿಂದಿನ ದಿನ ಚತುರ್ದಶಿ ಇದ್ದರೂ ಪರದಿನದಲ್ಲೇ ಮಾಡತಕ್ಕದ್ದು ಎರಡೂ ದಿನಗಳಲ್ಲಿ ಸೂರ್ಯೋದಯಕ್ಕೆ ಚತುರ್ದಶಿಯಿದ್ದರೂ ಮುಂದಿನ ದಿನವೇ ವ್ರತಾಚರಣೆ ಶ್ರೇಷ್ಠ ಕೆಲವರು ಎರಡು ಕಲಶಗಳನ್ನಿಟ್ಟು ಪೂಜಿಸುತ್ತಾರೆ. ಕೆಲವರು ಒಂದೇ ಕಲಶವನ್ನಿಟ್ಟು ಪೂಜಿಸುವ ಪದ್ಧತಿಯೂ ಇದೆ. ಅವರವರ ಪದ್ಧತಿ ಪ್ರಕಾರ ನಡೆದುಕೊಳ್ಳಬಹುದು. ಏಳು ದರ್ಭೆಗಳ ತುದಿಗೆ ಗಂಟು ಹಾಕಿ ಹೆಡೆಯಂತೆ ಮಾಡಿ ಕಲಶದ ಹತ್ತಿರ ಇಡಬೇಕು. ಎರಡು ಕಲಶ ಇಟ್ಟವರು ದರ್ಭೆಯ ಸರ್ಪವನ್ನು ಎರಡು ಕಲಶಗಳ ಮಧ್ಯೆ ಇರಿಸಬೇಕು. ಅನಂತನ ಚಿತ್ರ ಮುದ್ರಿಸಿರುವ ಬಿಳಿವಸ್ತ್ರವನ್ನು ಕಲಶದ ಮೇಲೆ ಹಾಸಿ ಅದರ ಮೇಲೆ ತೆಂಗಿನಕಾಯನ್ನು ಇರಿಸಬೇಕು. ಮೊದಲು ಯಮುನಾಪೂಜೆಯನ್ನು ಮಾಡಿ ಆ ನೀರನ್ನು ಕಲಶದೊಳಕ್ಕೆ ಹಾಕಿ ಪೂಜಿಸಬೇಕು. ಯಮುನಾಪೂಜೆಯನ್ನು ತುಳಸೀ ಕಟ್ಟೆಯ ಬಳಿ ಮಾಡಿ ನಂತರ ಆ ಕಲಶದ ನೀರನ್ನು ಅನಂತನ ಕಲಶಗಳಿಗೆ ಹಾಕಬೇಕು.

## ಅಥ ವ್ರತವಿಧಾನಮ್

ಭೋ ದೀಪದೇವೀ ರೂಪಸ್ತ್ವಂ ಕರ್ಮಸಾಕ್ಷೀ ಹ್ಯ ವಿಘ್ನಕೃತ್ ।
ಯಾವತ್ಪೂಜಾ ಸಮಾಪ್ತಿಸ್ಸ್ಯಾತ್ ತಾವತ್ತ್ವಂ ಸುಸ್ಥಿರೋ ಭವ ॥

ಇತಿ ದೀಪಂ ಪ್ರಜ್ವಾಲ್ಯ। ದೀಪಂ ನಮಸ್ಕೃತ್ಯ। ದೀಪಗಳನ್ನು ಬೆಳಗಿ ನಮಸ್ಕರಿಸುವುದು.

ಕರ್ತಾ ಆಚಮ್ಯ । ವ್ರತವನ್ನು ಆಚರಿಸುವವರು ಆಚಮನ ಮಾಡುವುದು.

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥

ಇತಿ ಘಂಟಾನಾದಂ ಕೃತ್ವಾ । ಘಂಟೆಯನ್ನು ಬಾರಿಸುವುದು.

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

**ಅಭೀಪ್ಸಿತಾರ್ಥ ಸಿದ್ಧ್ಯರ್ಥಂ ಪೂಜಿತೋ ಯಸ್ಸುರೈರಪಿ ।**
**ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥**

**ಗಣಪತಿಂ ಧ್ಯಾತ್ವಾ । ಗಣಪತಿಗೆ ಕೈ ಮುಗಿಯುವುದು**

**ಓಂ ವಿಷ್ಣು ಶಕ್ತಿ ಸಮೋಪೇತೇ ಸರ್ವವರ್ಣೇ ಮಹೀತಲೇ ।**
**ಅನೇಕ ರತ್ನಸಂಭೂತೇ ಭೂಮಿದೇವಿ ನಮೋಽಸ್ತು ತೇ ॥**

**ಇತಿ ಭೂಮಿಂ ಸ್ಪೃಷ್ಟ್ವಾ ಸಂಪ್ರಾರ್ಥ್ಯ ॥ ಕುಳಿತಿರುವ ಪೀಠದ ಕೆಳಗೆ ಭೂಮಿಯನ್ನು ಮುಟ್ಟಿ ಕೈಗಳನ್ನು ಜೋಡಿಸಿ ಪ್ರಾರ್ಥಿಸಿಕೊಳ್ಳುವುದು.**

**ಪೃಥ್ವಿ ತ್ವಯಾ ಧೃತಾ ಲೋಕಾಃ ದೇವಿ ತ್ವಂ ವಿಷ್ಣುನಾ ಧೃತಾ ।**
**ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್ ॥**

ಓಂ ಆಸನಾಯ ನಮಃ । ಓಂ ಅನಂತಾಸನಾಯ ನಮಃ । ಓಂ ಕೂರ್ಮಾಸನಾಯ ನಮಃ । ಓಂ ವಿಮಲಾಸನಾಯ ನಮಃ । ಓಂ ಕಮಲಾಸನಾಯ ನಮಃ । ಓಂ ಮಧ್ಯೇ ಶ್ರೀ ಪರಮಸುಖಾಸನಾಯ ನಮಃ । ಓಂ ಭೂರ್ಭುವಸ್ಸುವಃ । ಇತ್ಯಾಸನೇ ಉಪವಿಶ್ಯ ॥ ಆಸನದಲ್ಲಿ ಕುಳಿತುಕೊಳ್ಳುವುದು.

**ಸಂಕಲ್ಪ: ಪ್ರಾಣಾನಾಯಮ್ಯ । ಪ್ರಣವಸ್ಯ । ಪರಬ್ರಹ್ಮ ಋಷಿಃ । ಪರಮಾತ್ಮಾ ದೇವತಾ । ದೈವೀ ಗಾಯತ್ರೀ ಛಂದಃ । ಪ್ರಾಣಾಯಾಮೇ ವಿನಿಯೋಗಃ । ಓಂ ಭೂಃ । ಓಂ ಭುವಃ । ಓಗ್ಂ ಸುವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಗ್ಂ ಸತ್ಯಮ್।**

**ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ । ಓಂ ಆಪೋಜ್ಯೋತೀರಸೋ ಅಮೃತಂ ಬ್ರಹ್ಮ ಭೂರ್ಭುವಸ್ಸುವರೋಮ್ ॥**

ಶುಭೇ । ಶೋಭನೇ ಮುಹೂರ್ತೇ ಅದ್ಯ ಬ್ರಹ್ಮಣಃ । ದ್ವಿತೀಯ ಪರಾರ್ಧೇ । ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ । ಕಲಿಯುಗೇ । ಪ್ರಥಮ ಪಾದೇ । ಜಂಬೂದ್ವೀಪೇ । ಭರತವರ್ಷೇ । ಭರತಖಂಡೇ । ದಂಡಕಾರಣ್ಯೇ ಗೋದಾವರ್ಯಾಃ । ದಕ್ಷಿಣೇತೀರೇ । ಶಾಲೀವಾಹನಶಕೇ । ಬೌದ್ಧಾವತಾರೇ । ರಾಮಕ್ಷೇತ್ರೇ । ಅಸ್ಮಿನ್ ವರ್ತಮಾನೇ । ವ್ಯಾವಹಾರಿಕೇ । ಚಾಂದ್ರಮಾನೇ । ಪ್ರಭವಾದಿಷಷ್ಠಿ ಸಂವತ್ಸರಾಣಾಂ ಮಧ್ಯೇ .... ನಾಮ ಸಂವತ್ಸರೇ । ದಕ್ಷಿಣಾಯನೇ । ವರ್ಷಋತೌ ಶ್ರಾವಣಮಾಸೇ ಕೃಷ್ಣಪಕ್ಷೇ । ಅಷ್ಟಾಮ್ಯಾಂ ಶುಭತಿಥೌ । ..... ವಾಸರಯುಕ್ತಾಯಾಂ । ಶುಭನಕ್ಷತ್ರ ಶುಭಯೋಗ । ಶುಭಕರಣ । ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ । ಅಸ್ಮಾಕಂ ಸಹಕುಟುಂಬಾನಾಂ ಕ್ಷೇಮಸ್ಥೈರ್ಯ ವಿಜಯವೀರ್ಯಅಭಯ ಆಯುರಾರೋಗ್ಯ ಐಶ್ವರ್ಯಾಭಿವೃದ್ಧ್ಯರ್ಥಂ, ಸಮಸ್ತ ದುರಿತೋಪಶಾಂತ್ಯರ್ಥಂ, ಸಮಸ್ತಸನ್ಮಂಗಳಾರ್ಥಂ ಸಮಸ್ತ ಅಭ್ಯುದಯಾರ್ಥಂ ಚ, ಧರ್ಮಾರ್ಥಕಾಮಮೋಕ್ಷ





ಚತುರ್ವಿಧ ಫಲಪುರುಷಾರ್ಥಸಿದ್ಧ್ಯರ್ಥಂ ಶ್ರೀಮದನಂತಪದ್ಮನಾಭಸ್ವಾಮಿ ವ್ರತಾಂಗ ಯಮುನಾ ಪೂಜಾಂ ಕರಿಷ್ಯೇ ॥

ತದಂಗ ಕಲಶಪೂಜಾಂ ಶಂಖಪೂಜಾಂ ಚ ಕರಿಷ್ಯೇ । ಕಲಶಂ ಗಂಧಾಕ್ಷತ ಪತ್ರಪುಷ್ಪೈಃ ಅಭ್ಯರ್ಚ್ಯ । ಪಂಚಪಾತ್ರೆಯ ನಾಲ್ಕೂ ಕಡೆಗೆ ಗಂಧ ಹಚ್ಚಿ, ಅದರ ಮಂತ್ರಾಕ್ಷತೆಯನ್ನು ಗಂಧದ ಮೇಲೆ ಇಟ್ಟು ಪಂಚಪಾತ್ರೆಯ ಒಳಕ್ಕೆ ಹೂ ಅಥವಾ ತುಳಸೀಯನ್ನು ಹಾಕಿ ಬಲಗೈಮೇಲೆ ಬರುವಂತೆ ಮುಚ್ಚಿಕೊಳ್ಳಬೇಕು.

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಾಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥
ಕುಕ್ಷೌತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಸ್ಸಾಮವೇದೋ ಹ್ಯಥರ್ವಣಃ ॥
ಅಂಗೈಶ್ಚ ಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾಃ ।
ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ ॥
ಗಂಗೇ ಚ ಯಮುನೇ ಚೈವ ಗೋದಾವರೀ ಸರಸ್ವತೀ ।
ನರ್ಮದೇ ಸಿಂಧು ಕಾವೇರೀ ಜಲೇಽಸ್ಮಿನ್ ಸನ್ನಿಧಿಂ ಕುರು ॥

ಓಂ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಗ್ಂ ಸಚತಾ ಪರುಷ್ಣಿಯಾ ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾಽಽರ್ಜಿಕೀಯೇ ಶೃಣುಹ್ಯಾ ಸುಷೋಮಯಾ ॥

ಪಂಚಪಾತ್ರೆಯ ನೀರನ್ನು ಉದ್ಧರಣೆಯಲ್ಲಿ ತೆಗೆದುಕೊಂಡು ಹೂವಿನಿಂದ ಪ್ರೋಕ್ಷಿಸುವುದು.

ಯಾಗಮಂಡಪಂ ಯಾಗಭೂಮಿಂ ಚ ಸಂಪ್ರೋಕ್ಷ್ಯ । ಪೂಜೋಪಕರಣ ದ್ರವ್ಯಾಣಿ । ಪುಷ್ಪಾಣಿ ಚ ಸಂಪ್ರೋಕ್ಷ್ಯ । ದೇವತಾಂ ಸಂಪ್ರೋಕ್ಷ್ಯ । ಆತ್ಮಾನಂ ಸಂಪ್ರೋಕ್ಷ್ಯ । ಶೇಷಂ ಜಲಂ ವಿಸೃಜ್ಯ ॥ ಮಂಟಪಕ್ಕೆ, ಪೂಜಾದ್ರವ್ಯಗಳಿಗೆ, ಕುಳಿತಿರುವ ಸ್ಥಳಕ್ಕೆ ದೇವರಿಗೆ ಹಾಗೂ ಮೇಲೂ ಪ್ರೋಕ್ಷಿಸಿಕೊಂಡು ಉಳಿದ ನೀರನ್ನು ಅರ್ಘ್ಯಪಾತ್ರೆಗೆ ಹಾಕುವುದು.

## ಯಮುನಾ ಕಲಶಕ್ಕೆ ಪೂಜೆ

**ಧ್ಯಾನ :**

ಲೋಕಪಾಲಸ್ತುತಾಂ ದೇವೀಂ ಇಂದ್ರನೀಲ ಸಮಪ್ರಭಾಮ್ ।
ಯಮುನೇ ತ್ವಾಮಹಂ ಧ್ಯಾಯೇತ್ಸರ್ವಕಾಮಾರ್ಥಸಿದ್ಧಯೇ ॥

ಶ್ರೀ ಯಮುನಾಯೈ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ॥ ಹೂವಿನಿಂದ [redacted] ಮಾಡುವುದು.

**ಆವಾಹನೆ :**

ಕ್ಷೀರೋದಾರ್ಣವಸಂಭೂತೇ ಕ್ಷೀರವರ್ಣೋಽವಶೋಭಿತೇ ।
ಪ್ರಸನ್ನಾ ಭವ ಮೇ ದೇವಿ ಯಮುನೇ ತೇ ನಮೋ ನಮಃ ॥

ಶ್ರೀ ಯಮುನಾಯೈ ನಮಃ । ಆವಾಹಯಾಮಿ । ಆವಾಹನಂ ಸಮರ್ಪಯಾಮಿ ॥ ಹೂವಿನಿಂದ ಪೂಜೆಯನ್ನು ಮಾಡುವುದು.

**ಸಿಂಹಾಸನ :**

ಸಿಂಹಾಸನ ಸಮಾರೂಢೇ ದೇವಶಕ್ತಿಸಮನ್ವಿತೇ ।
ಸರ್ವಲಕ್ಷಣ ಸಂಪೂರ್ಣೇ ಯಮುನಾಯೈ ನಮೋಽಸ್ತುತೇ ॥

ಶ್ರೀ ಯಮುನಾಯೈ ನಮಃ । ಸಿಂಹಾಸನಂ ಸಮರ್ಪಯಾಮಿ ॥ ಹೂ ಪೂಜೆ.

**ಪಾದ್ಯ :**

ಗರುಡಾಗ್ರಜಸಂಭೂತೇ ಶಂಕರಪ್ರಿಯಭಾಮಿನಿ ।
ಸರ್ವಕಾಮಪ್ರದೇ ದೇವಿ ಯಮುನೇ ತೇ ನಮೋ ನಮಃ ॥

ಶ್ರೀ ಯಮುನಾಯೈ ನಮಃ । ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ ॥ ಒಂದು ಉದ್ಧರಣೆ ನೀರನ್ನು ಯಮುನಾ ಕಲಶಕ್ಕೆ ತೋರಿಸಿ ಅರ್ಘ್ಯ ಪಾತ್ರೆಗೆ ಬಿಡುವುದು.

**ಅರ್ಘ್ಯ :**

ರುದ್ರಪಾದೇ ನಮಸ್ತುಭ್ಯಂ ಸರ್ವಲೋಕ ಹಿತೇ ಶುಭೇ ।
ಸರ್ವಪಾಪ ಪ್ರಶಮನೀ ತರಂಗಿಣ್ಯೈ ನಮೋಽಸ್ತು ತೇ ॥

ಶ್ರೀ ಯಮುನಾಯೈ ನಮಃ । ಹಸ್ತಯೋಃ ಅರ್ಘ್ಯಮರ್ಘ್ಯಂ ಸಮರ್ಪಯಾಮಿ ॥ ಒಂದು ಉದ್ಧರಣೆ ನೀರನ್ನು ಯಮುನಾ ಕಲಶಕ್ಕೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡುವುದು.

ನಂದಿಪಾದೇ ನಮಸ್ತುಭ್ಯಂ ಶಂಕರಾರ್ಧಶರೀರಿಣಿ ।
ಸರ್ವಲೋಕಹಿತೇ ದೇವಿ ಭೀಮರಥ್ಯೈ ನಮೋ ನಮಃ ॥

ಪಂಚಾಮೃತಸ್ನಾನಮಿದಂ ದಧ್ಯಾಜ್ಯಮಧು ಸಂಯುತಮ್ ।
ಶರ್ಕರಾಕ್ಷೀರ ಸಂಯುಕ್ತಂ ಗೃಹಾಣ ಜಗದೀಶ್ವರಿ ॥

ಶ್ರೀ ಯಮುನಾಯೈ ನಮಃ । ಪಂಚಾಮೃತ ಸ್ನಾನಂ ಸಮರ್ಪಯಾಮಿ ॥ ಒಂದು ಹೂವಿನಿಂದ ಹಾಲು, ಮೊಸರು, ತುಪ್ಪ, ಸಕ್ಕರೆ, ಜೇನುತುಪ್ಪದಲ್ಲಿ ಅದ್ದಿ ಕಲಶದ ಮೇಲೆ ಪ್ರೋಕ್ಷಿಸುವುದು.

ಗೋದಾವರ್ಯೈ ನಮಸ್ತುಭ್ಯಂ ಗೌತಮಸ್ಯಾಘನಾಶಿನಿ ।
ಸರ್ವಪಾಪ ಪ್ರಶಮನೀ ಶಿವರೂಪಿ ನಮೋಽಸ್ತು ತೇ ॥

ಶ್ರೀ ಯಮುನಾಯೈ ನಮಃ । ಶುದ್ಧೋದಕ ಸ್ನಾನಂ ಸಮರ್ಪಯಾಮಿ ॥ ನೀರಿನಿಂದ ಪ್ರೋಕ್ಷಣೆ ಮಾಡುವುದು.

ಸ್ನಾನಾಂಗಪಾಚಮನಂ ಸಮರ್ಪಯಾಮಿ ॥ ಒಂದು ಉದ್ಧರಣೆ ನೀರನ್ನು ಅರ್ಘ್ಯಪಾತ್ರೆಗೆ ಬಿಡುವುದು.

**ವಸ್ತ್ರ :**

ವಿಷ್ಣುಪಾದಾಬ್ಜಸಂಭೂತೇ ಗಂಗೇ ತ್ರಿಪಥಗಾಮಿನಿ ।
ಸರ್ವಪಾಪಹರೇ ದೇವಿ ಭಾಗೀರಥ್ಯೈ ನಮೋಽಸ್ತು ತೇ ॥

ಶ್ರೀ ಯಮುನಾಯೈ ನಮಃ । ಶ್ವೇತವಸ್ತ್ರದ್ವಯಂ ಸಮರ್ಪಯಾಮಿ ॥ ಗೆಜ್ಜೆವಸ್ತ್ರ.

**ರವಿಕೆ :**

ತ್ರ್ಯಂಬಕಸ್ಯ ಜಟೋದ್ಭೂತೇ ದಿವ್ಯಶಕ್ತಿ ಸಮನ್ವಿತೇ ।
ಸಪ್ರಧಾ ಪ್ರಾಗತಂ ಯಾತೇ ಗಂಗಾಯೈ ತೇ ನಮೋ ನಮಃ ॥

ಶ್ರೀ ಯಮುನಾಯೈ ನಮಃ ಕಂಚುಕಂ ಸಮರ್ಪಯಾಮಿ॥ ರೇಶ್ಮೆಯ ಕಣ ಇಡುವುದು.

**ಉಪವೀತ :**

ಸೌವರ್ಣಂ ಬ್ರಹ್ಮಸೂತ್ರಂ ಚ ಬ್ರಹ್ಮಣಾ ನಿರ್ಮಿತಂ ಪುರಾ ।
ಅಹಂ ದಾಸ್ಯಾಮಿ ದೇವೇಶೀ ಯಮುನಾಯೈ ನಮೋಽಸ್ತು ತೇ ॥

ಶ್ರೀ ಯಮುನಾಯೈ ನಮಃ । ಯಜ್ಞೋಪವೀತಂ ಸಮರ್ಪಯಾಮಿ ॥ ಹೂವು ಮಂತ್ರಾಕ್ಷತೆಗಳನ್ನು ಅರ್ಪಿಸುವುದು.

**ಗಂಧ :**

ಚಂದನಾಗರು ಕಸ್ತೂರೀ ರೋಚನಂ ಕುಂಕುಮಂ ತಥಾ ।
ಕರ್ಪೂರೇಣ ಸಮಾಯುಕ್ತಂ ಗಂಧಂ ದದ್ಮಿ ಚ ಭಕ್ತಿತಃ ॥

ಶ್ರೀ ಯಮುನಾಯೈ ನಮಃ । ಗಂಧಂ ಧಾರಯಾಮಿ । ಗಂಧವನ್ನು ಹಚ್ಚುವುದು.

**ಅಕ್ಷತೆ :**

ಶ್ವೇತಾಂಶ್ಚ ಚಂದ್ರವರ್ಣಾಭಾನ್ ಹರಿದ್ರಾರಾಗರಂಜಿತಾನ್ ।
ಅಕ್ಷತಾಂಶ್ಚ ಸುರಶ್ರೇಷ್ಠೇ ದದಾಮಿ ಯಮುನೇ ಶುಭೇ ॥

ಶ್ರೀ ಯಮುನಾಯೈ ನಮಃ ಅಕ್ಷತಾನ್ ಸಮರ್ಪಯಾಮಿ ॥ ಅಕ್ಷತೆಗಳಿಂದ ಪೂಜೆ.

**ಆಭರಣ :**

ಮಾಣಿಕ್ಯ ಮುಕ್ತಾಮಣಿಕೌಸ್ತುಭಾಂಶ್ಚ ವೈಢೂರ್ಯಗೋಮೇಧಿಕ ಪುಷ್ಪರಾಗೈಃ ।
ವಜ್ರೈಶ್ಚ ನೀಲೈಶ್ಚ ಸುಶೋಭಿತಾನಿ ಗೃಹಾಣ ಸರ್ವಾಭರಣಾನಿ ದೇವಿ ॥

ಶ್ರೀ ಯಮುನಾಯೈ ನಮಃ । ನಾನಾವಿಧ ಆಭರಣಾನಿ ಸಮರ್ಪಯಾಮಿ ॥ ಆಭರಣಗಳನ್ನು ಅಲಂಕರಿಸುವುದು.

**ಪುಷ್ಪ :**

ಮಂದಾರಮಾಲತೀಜಾಜೀ ಕೇತಕೀಪಾಟಲೈಶ್ಶುಭೈಃ ।
ಪೂಜಯಾಮಿ ಸದಾ ದೇವಿ ಯಮುನೇ ಭಕ್ತವತ್ಸಲೇ ॥

ಶ್ರೀ ಯಮುನಾಯ್ಯೆ ನಮಃ। ನಾನಾವಿಧ ಪರಿಮಳ ಪುಷ್ಪಾಣಿ ಸಮರ್ಪಯಾಮಿ॥ ಹೂವಿನ ಮಾಲಿಕೆ ಅರ್ಪಿಸುವುದು.

**ಅರಿಶಿನ :**

ಸೌಭಾಗ್ಯ ಸುಖದೇ ದೇವಿ ಸರ್ವಮಂಗಳದಾಯಿಕೇ ।
ಹರಿದ್ರಾಂ ತೇ ಪ್ರಯಚ್ಛಾಮಿ ಗೃಹಾಣ ವರದಾ ಭವ ॥

ಶ್ರೀ ಯಮುನಾಯ್ಯೆ ನಮಃ। ಹರಿದ್ರಾಚೂರ್ಣಂ ಸಮರ್ಪಯಾಮಿ॥ ಅರಿಶಿನದಿಂದ ಪೂಜಿಸುವುದು.

**ಕುಂಕುಮ :**

ಕುಂಕುಮಂ ಕಾಂತಿದಂ ದಿವ್ಯಂ ಸರ್ವಕಾಮಫಲಪ್ರದಮ್ ।
ಸರ್ವದೇವೈಶ್ಚ ಸಂಪೂಜ್ಯೇ ಗೃಹಾಣ ಪರಮೇಶ್ವರೀ ॥

ಶ್ರೀ ಯಮುನಾಯ್ಯೆ ನಮಃ। ಕುಂಕುಮಚೂರ್ಣಂ ಸಮರ್ಪಯಾಮಿ॥ ಕುಂಕುಮದಿಂದ ಪೂಜೆ ಮಾಡುವುದು.

**ಚಂದ್ರ :**

ಮಹಾದೇವಿ ನಮಸ್ತುಭ್ಯಂ ಸಂಧ್ಯಾವಂದರುಣಪ್ರಭಮ್ ।
ವೀರಾಲಂಕರಣಂ ದಿವ್ಯಂ ಸಿಂಧೂರಂ ಪ್ರತಿಗೃಹ್ಯತಾಮ್ ॥

ಶ್ರೀ ಯಮುನಾಯ್ಯೆ ನಮಃ। ಸಿಂಧೂರಂ ಸಮರ್ಪಯಾಮಿ॥ ಚಂದನದಿಂದ ಪೂಜಿಸಿರಿ.

## ಅಂಗ ಪೂಜಾ

| | |
|---|---|
| ಓಂ ಚಂಚಲಾಯ್ಯೆ ನಮಃ | ಪಾದೌ ಪೂಜಯಾಮಿ |
| ಓಂ ಚಪಲಾಯ್ಯೆ ನಮಃ | ಜಾನುನೀಂ ಪೂಜಯಾಮಿ |
| ಓಂ ಭಕ್ತವತ್ಸಲಾಯ್ಯೆ ನಮಃ | ಕಟಿಂ ಪೂಜಯಾಮಿ |
| ಓಂ ಮಹೋದರಾಯ್ಯೆ ನಮಃ | ನಾಭಿಂ ಪೂಜಯಾಮಿ |
| ಓಂ ಭಾಗೀರಥ್ಯೈ ನಮಃ | ಹೃದಯಂ ಪೂಜಯಾಮಿ |
| ಓಂ ಕೃಷ್ಣವೇಣ್ಯೈ ನಮಃ | ಸ್ತನೌ ಪೂಜಯಾಮಿ |
| ಓಂ ಲಲಿತಾಯ್ಯೆ ನಮಃ | ಭುಜೌ ಪೂಜಯಾಮಿ |
| ಓಂ ನೀಲವರ್ಣಾಯ್ಯೆ ನಮಃ | ಸ್ಕಂದೌ ಪೂಜಯಾಮಿ |
| ಓಂ ಉತ್ಕಂಠ್ಯೈ ನಮಃ | ಕಂಠಂ ಪೂಜಯಾಮಿ |

ಓಂ ರಮಾಯೈ ನಮಃ ಮುಖಂ ಪೂಜಯಾಮಿ
ಓಂ ತ್ರೈಲೋಕ್ಯಜನನ್ಯೈ ನಮಃ ಲಲಾಟಂ ಪೂಜಯಾಮಿ
ಓಂ ಭಾಗೀರಥ್ಯೈ ನಮಃ ಶಿರಃ ಪೂಜಯಾಮಿ
ಓಂ ಯಮುನಾಯೈ ನಮಃ ಸರ್ವಾಣ್ಯಂಗಾನಿ ಪೂಜಯಾಮಿ

## ನಾಮ ಪೂಜಾ

ಓಂ ಯಮುನಾಯೈ ನಮಃ
ಓಂ ಸೀತಾಯೈ ನಮಃ
ಓಂ ವಿಮಲಾಯೈ ನಮಃ
ಓಂ ಉತ್ಪಲಾಯೈ ನಮಃ
ಓಂ ಅಭೀಷ್ಟದಾಯೈ ನಮಃ
ಓಂ ನರ್ಮದಾಯೈ ನಮಃ
ಓಂ ಗೌರ್ಯೈ ನಮಃ
ಓಂ ಭಾಗೀರಥ್ಯೈ ನಮಃ
ಓಂ ತುಂಗಾಯೈ ನಮಃ
ಓಂ ಭದ್ರಾಯೈ ನಮಃ
ಓಂ ಕೃಷ್ಣವೇಣ್ಯೈ ನಮಃ
ಓಂ ಭವನಾಶಿನ್ಯೈ ನಮಃ
ಓಂ ಸಂಸರತ್ಯೈ ನಮಃ
ಓಂ ಕಾವೇರ್ಯೈ ನಮಃ
ಓಂ ಸಿಂಧವೇ ನಮಃ
ಓಂ ಗೌತಮ್ಯೈ ನಮಃ
ಓಂ ಗಾಯತ್ರ್ಯೈ ನಮಃ
ಓಂ ಗರುಢಾಯೈ ನಮಃ
ಓಂ ಗಿರಿಜಾಯೈ ನಮಃ
ಓಂ ಚಂದ್ರಚೂಡಾಯೈ ನಮಃ
ಓಂ ಸರ್ವೈಶ್ವರ್ಯೈ ನಮಃ
ಓಂ ಮಹಾಲಕ್ಷ್ಮ್ಯೈ ನಮಃ
ಓಂ ಯಮುನಾಯೈ ನಮಃ
ಓಂ ಹರಿಹರರೂಪಿಣ್ಯೈ ನಮಃ

ಸರ್ವಪಾಪಹರೇ ದೇವೀ ಸರ್ವೋಪದ್ರವನಾಶಿನೀ ।
ಸರ್ವಸಂಪತ್ಪ್ರದೇ ದೇವೀ ಯಮುನಾಯೈ ನಮೋಽಸ್ತು ತೇ ॥
ನಾಮಪೂಜಾಂ ಸಮರ್ಪಯಾಮಿ ॥

**ಧೂಪ :**

ದಶಾಂಗಂ ಗುಗ್ಗುಲೋಪೇತಂ ಸುಗಂಧಂ ಚ ಮನೋಹರಮ್ ।
ಕಪಿಲಾಘೃತ ಸಂಯುಕ್ತಂ ಧೂಪಂ ಸ್ವೀಕುರು ಸೂರ್ಯಜೇ ॥
ಶ್ರೀ ಯಮುನಾಯೈ ನಮಃ। ಧೂಪಮಾಘ್ರಾಪಯಾಮಿ ॥ ಅಗರಬತ್ತಿ ಬೆಳಗುವದು.

**ಏಕಾರ್ತಿದೀಪ :**

ಘೃತವರ್ತಿ ಸಮಾಯುಕ್ತಂ ವಹ್ನಿನಾ ಯೋಜಿತಂ ಮಯಾ ।
ಗೃಹಾಣ ದೀಪಂ ದೇವಿ ತ್ವಂ ಸರ್ವೈಶ್ವರ್ಯಪ್ರದಾಯಿನೀ ॥
ಶ್ರೀ ಯಮುನಾಯೈ ನಮಃ ಏಕಾರ್ತಿದೀಪಂ ದರ್ಶಯಾಮಿ ॥ ಮೂರು ತುಪ್ಪದ ಬತ್ತಿಗಳನ್ನು ಹಚ್ಚಿ ಬೆಳಗುವುದು.




ಧೂಪದೀಪಾನಂತರೇ ಆಚಮನಮ್ । ಆಚಮನಾನಂತರೇ ಪತ್ರಪುಷ್ಪಾಣಿ ಸಮರ್ಪಯಾಮಿ ॥ ಒಂದು ಉದ್ಧರಣೆ ನೀರನ್ನು ಬಿಟ್ಟು ಹೂವನ್ನು ಪೂಜಿಸುವುದು.

**ನೈವೇದ್ಯ :**

**ಸರ್ವಭಕ್ಷ್ಯೈಶ್ಚ ಭೋಜ್ಯೈಶ್ಚ ರಸ್ಯೈಃ ಷಡ್ಭಿಃ ಸಮನ್ವಿತಮ್ ।**
**ನೈವೇದ್ಯಂ ಚ ಸಮಾನೀತಂ ಸ್ವೀಕುರುಷ್ವ ಮಹೇಶ್ವರೀ ॥**

ಮಂಡಲ ಮಾಡಿ, ನೈವೇದ್ಯಕ್ಕೆ ಇಟ್ಟು, ಪ್ರೋಕ್ಷಿಸಿ, ಪ್ರದಕ್ಷಿಣಾಕಾರವಾಗಿ ಪರಿಷೇಚನ ಮಾಡುವುದು.

ಓಂ ವಿಶ್ವಾಮಿತ್ರ ಋಷಿಃ । ಸವಿತಾ ದೇವತಾ ಗಾಯತ್ರೀ ಛಂದಃ ।

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ ।

**ಸತ್ಯಂತ್ವರ್ತೇನ ಪರಿಷಿಂಚಾಮಿ ॥**

ಓಂ ಪ್ರಾಣಾಯ ಸ್ವಾಹಾ । ಓಂ ಅಪಾನಾಯ ಸ್ವಾಹಾ । ಓಂ ವ್ಯಾನಾಯ ಸ್ವಾಹಾ । ಓಂ ಉದಾನಾಯ ಸ್ವಾಹಾ । ಓಂ ಸಮಾನಾಯ ಸ್ವಾಹಾ । ಓಂ ಬ್ರಹ್ಮಣೇ ಸ್ವಾಹಾ ॥ ಶ್ರೀ ಯಮುನಾಯ್ಕೆ ನಮಃ । ನಾನಾವಿಧ ನೈವೇದ್ಯಂ ಸಮರ್ಪಯಾಮಿ । ನಾರಿಕೇಳಫಲಂ (ತೆಂಗಿನಕಾಯಿ) ಕದಲೀಫಲಂ (ಬಾಳೇಹಣ್ಣು) ನಿವೇದಯಾಮಿ ॥ ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಪಾದಪ್ರಕ್ಷಾಳನಂ, ಪುನರಾಚಮನಂ ಸಮರ್ಪಯಾಮಿ ॥ ಮೂರು ಸಾರಿ ನೀರನ್ನು ಬಿಡುವುದು.

**ತಾಂಬೂಲ :**

**ಪೂಗೀಫಲ ಸಮಾಯುಕ್ತಂ ನಾಗವಲ್ಲೀದಳೈರ್ಯುತಮ್ ।**
**ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥**

ಶ್ರೀ ಯಮುನಾಯ್ಕೆ ನಮಃ ಪೂಗೀಫಲ ತಾಂಬೂಲಂ ಸಮರ್ಪಯಾಮಿ ॥ ಸುವರ್ಣ–ಪುಷ್ಪದಕ್ಷಿಣಾಂ ಸಮರ್ಪಯಾಮಿ ॥ ತಾಂಬೂಲ, ದಕ್ಷಿಣೆ ಸಹಿತ ನೀರು ಬಿಡುವುದು.

ತಾಂಬೂಲಾನಂತರೇ ಆಚಮನಂ ಸಮರ್ಪಯಾಮಿ । ಆಚಮನಾನಂತರೇ ಪತ್ರಪುಷ್ಪಾಣಿ ಸಮರ್ಪಯಾಮಿ ॥ ಒಂದು ಉದ್ಧರಣೆ ನೀರನ್ನು ಬಿಟ್ಟು ಹೂಗಳನ್ನು ಸಮರ್ಪಿಸುವುದು.

**ನೀರಾಜನಂ :**

**ನೀರಾಜನಂ ಸಕರ್ಪೂರಂ ಘೃತವರ್ತಿಸಮನ್ವಿತಮ್ ।**
**ಗೃಹಾಣ ಮಂಗಳಂ ದೀಪಂ ಯಮುನಾಯ್ಕೆ ನಮೋಽಸ್ತು ತೇ ॥**

ಶ್ರೀ ಯಮುನಾಯ್ಕೆ ನಮಃ ಕರ್ಪೂರ ಮಂಗಳ ನೀರಾಜನಂ ದರ್ಶಯಾಮಿ ॥ ಅಗರುಬತ್ತಿ ಹಚ್ಚಿ, ಕರ್ಪೂರದ ಮಂಗಳಾರತಿ ಮಾಡುವುದು.

ನೀರಾಜನಾನಂತರೇ ಆಚಮನವಮ್ । ಆಚಮನಾನಂತರೇ ಪತ್ರಪುಷ್ಪಾಣಿ ಸಮರ್ಪಯಾಮಿ ॥ ಒಂದು ಉದ್ಧರಣೆ ನೀರು ಹಾಕಿ ಹೂವನ್ನು ಸಮರ್ಪಿಸುವುದು.

**ಪ್ರದಕ್ಷಿಣೆ :**

**ಕೇತಕೀಜಾತಿಕುಸುಮೈಃ ಮಲ್ಲಿಕಾಮಾಲತೀಶುಭೈಃ ।**
**ಪುಷ್ಪಾಂಜಲಿರ್ಮಯಾದತ್ತೋರುದ್ರಪ್ರೀತ್ಯೈ ನಮೋಽಸ್ತು ತೇ ॥**

ಶ್ರೀ ಯಮುನಾಯೈ ನಮಃ ಪುಷ್ಪಾಂಜಲಿಂ ಸಮರ್ಪಯಾಮಿ । ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ ॥ ಪ್ರದಕ್ಷಿಣೆ ನಮಸ್ಕಾರ ಮಾಡಬೇಕು.

**ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾ ಕ್ರಿಯಾದಿಷು ।**
**ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ವಿಷ್ಣುಪ್ರಿಯಾಮ್॥**
**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಹರಿವಲ್ಲಭೇ ।**
**ಯತ್ಪೂಜಿತಂ ಮಯಾ ದೇವಿ ಪರಿಪೂರ್ಣಂ ತದಸ್ತು ಮೇ ॥**

ಅನೇನ ಶ್ರೀ ಯಮುನಾ ಪೂಜಾವಿಧಾನೇನ ಭಗವತೀ ಸರ್ವಾತ್ಮಿಕಾ ಶ್ರೀ ಯಮುನಾದೇವೀ ಸುಪ್ರೀತಾ ಸುಪ್ರಸನ್ನಾ ವರದಾ ಭವತು । ಒಂದು ಉದ್ಧರಣೆ ನೀರು ಬಿಡುವುದು.

**ಸುರಾಸುರೇಂದ್ರಾದಿ ಕಿರೀಟ ಮೌಕ್ತಿಕೈಃ ಯುಕ್ತಂ ಸದಾಯುತ್ತವ ಪಾದಪಂಕಜಮ್।**
**ಪರಾವರಂ ಪಾತು ವರಂ ಸುಮಂಗಳಂ ನಮಾಮಿ ಭಕ್ತ್ಯಾ ಮಮ ಕಾಮ ಸಿದ್ಧಯೇ॥**

ನಮಸ್ಕರಿಸಿ ಪ್ರಸಾದ ತೆಗೆದುಕೊಳ್ಳುವುದು. ಕರ್ತೃವು ಯಮುನಾ ಕಲಶದ ತಟ್ಟೆಯನ್ನು ಕೈಯಲ್ಲಿ ಹಿಡಿದು ಉತ್ತರ ಅಥವಾ ಪೂರ್ವದಿಕ್ಕಿಗೆ ನಿಂತುಕೊಳ್ಳುವುದು. ಆರತಿ ಮಾಡಿದ ಮೇಲೆ ಶಂಖ, ಜಾಗಟೆ, ಘಂಟೆ ಮುಂತಾದ ಮಂಗಳವಾದ್ಯದೊಡನೆ ಗೃಹಪ್ರವೇಶ ಮಾಡುವುದು. ಯಮುನಾ ಕಲಶದ ನೀರನ್ನು ಕಲಶಗಳಿಗೆ ಹಾಕುವುದು.

## ಶ್ರೀ ಮದನಂತಪದ್ಮನಾಭಸ್ವಾಮಿ ವ್ರತ ವಿಧಾನ

**ಭೋ ದೀಪದೇವೀ ರೂಪಸ್ತ್ವಂ ಕರ್ಮಸಾಕ್ಷೀ ಹ್ಯವಿಘ್ನಕೃತ್ ।**
**ಯಾವತ್ಪೂಜಾ ಸಮಾಪ್ತಿಃ ಸ್ಯಾತ್ ತಾವತ್ತ್ವಂ ಸುಸ್ಥಿರೋ ಭವ ॥**

ಇತಿ ದೀಪಂ ಪ್ರಜ್ವಾಲ್ಯ । ದೀಪಂ ನಮಸ್ಕೃತ್ಯ । ದೀಪಗಳನ್ನು ಹೊತ್ತಿಸಿ ಕೈ ಮುಗಿಯುವುದು.

**ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।**
**ಕುರ್ವೇ ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥**

ಇತಿ ಘಂಟಾನಾದಂ ಕೃತ್ವಾ । ಘಂಟೆ ಬಾರಿಸುವುದು.

**ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।**
**ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥**

**ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಸ್ಸುರೈರಪಿ ।**
**ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥**

ಇತಿ ಗಣಪತಿಂ ಧ್ಯಾತ್ವಾ । ಈ ರೀತಿ ಗಣಪತಿಯನ್ನು ಪ್ರಾರ್ಥಿಸಿರಿ.

**ಓಂ ವಿಷ್ಣುಶಕ್ತಿಸಮೋಪೇತೇ ಸರ್ವವರ್ಣೇ ಮಹೀತಲೇ ।**
**ಅನೇಕರತ್ನಸಂಭೂತೇ ಭೂಮಿದೇವಿ ನಮೋಽಸ್ತು ತೇ ॥**

ಇತಿ ಭೂಮಿಂ ಸ್ಪೃಷ್ಟ್ವಾ ಸಂಪ್ರಾರ್ಥ್ಯ ॥ ಕುಳಿತಿರುವ ಪೀಠದ ಕೆಳಗಿನ ಭೂಮಿಯನ್ನು ಎರಡೂ ಕೈಗಳಿಂದ ಮುಟ್ಟಿ ಪ್ರಾರ್ಥಿಸಿಕೊಳ್ಳುವುದು.

**ಪೃಥ್ವಿ ತ್ವಯಾ ಧೃತಾ ಲೋಕಾಃ ದೇವಿ ತ್ವಂ ವಿಷ್ಣುನಾ ಧೃತಾ ।**
**ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್ ॥**

ಓಂ ಆಸನಾಯ ನಮಃ । ಅನಂತಸನಾಯ ನಮಃ । ಓಂ ಕೂರ್ಮಾಸನಾಯ ನಮಃ। ಓಂ ವಿಮಲಾಸನಾಯ ನಮಃ । ಓಂ ಕಮಲಾಸನಾಯ ನಮಃ ' ಧ್ಯೇ ಶ್ರೀ ಪರಮ ಸುಖಾಸನಾಯ ನಮಃ ॥ ಓಂ ಭೂರ್ಭುವಸ್ಸುವಃ । ಇತ್ಯಾಸನೇ ಉಪವಿಶ್ಯ ॥ ಆಸನದಲ್ಲಿ ಕುಳಿತುಕೊಳ್ಳುವುದು.

ಸಂಕಲ್ಪ: ಪ್ರಾಣಾನಾಯಮ್ಯ ಪ್ರಣವಸ್ಯ ಪರಬ್ರಹ್ಮ ಋಷಿಃ । ಪರಮಾತ್ಮಾ ದೇವತಾ। ದೈವೀ ಗಾಯತ್ರೀ ಛಂದಃ । ಪ್ರಾಣಾಯಾಮೇ ವಿನಿಯೋಗಃ । ಓಂ ಭೂಃ । ಓಂ ಭುವಃ। ಓಗ್ಂ ಸುವಃ । ಓಗ್ಂ ಸುವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಗ್ಂ ಸತ್ಯಮ್।

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ । ಓಂ ಆಪೋ ಜ್ಯೋತೀರಸೋ ಅಮೃತಂ ಬ್ರಹ್ಮ ಭೂರ್ಭುವಸ್ಸುವರೋಮ್ ॥

ಶುಭೇ ಶೋಭನೇ ಮುಹೂರ್ತೇ । ಆದ್ಯ ಬ್ರಹ್ಮಣ್ಯಾಃ । ದ್ವಿತೀಯಪರಾರ್ಧೇ । ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ । ಕಲಿಯುಗೇ । ಪ್ರಥಮಪಾದೇ । ಜಂಬೂದ್ವೀಪೇ । ಭರತವರ್ಷೇ । ಭರತಖಂಡೇ । ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ । ಶಾಲೀವಾಹನಶಕೇ । ಬೌದ್ಧಾವತಾರೇ । ರಾಮಕ್ಷೇತ್ರೇ । ಅಸ್ಮಿನ್ ವರ್ತಮಾನೇ । ವ್ಯಾವಹಾರಿಕೇ । ಚಾಂದ್ರಮಾನೇನ । ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ ಶ್ರೀ ......... ಸಂವತ್ಸರೇ । ದಕ್ಷಿಣಾಯನೇ । ವರ್ಷಋತೌ ಭಾದ್ರಪದಮಾಸೇ ಶುಕ್ಲಪಕ್ಷೇ । ಚತುರ್ದಶ್ಯಾಂ ಶುಭತಿಥೌ । .... ವಾಸರಯುಕ್ತಾಯಾಮ್ । ಶುಭನಕ್ಷತ್ರ ಶುಭಯೋಗ ಶುಭಕರಣ । ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ । ಅಸ್ಮಾಕಂ ಸಹಕುಟುಂಬಾನಾಂ ಪುತ್ರ ಪೌತ್ರ ಕಳತ್ರ ಮಿತ್ರ ಭ್ರಾತೃ ಬಂಧುವರ್ಗಸಹಿತಾನಾಂ ಕ್ಷೇಮಸ್ಥೈರ್ಯವಿಜಯವೀರ್ಯ ಅಭಯಆಯುರಾರೋಗ್ಯ ಐಶ್ವರ್ಯಾಭಿ-ವೃದ್ಧ್ಯರ್ಥಂ, ಧರ್ಮಾರ್ಥಕಾಮಮೋಕ್ಷಚತುರ್ವಿಧಫಲಪುರುಷಾರ್ಥಂ ಸಿದ್ಧ್ಯರ್ಥಂ

ವಿಶೇಷಣ ಅನಂತಕೀರ್ತಿ, ಅನಂತಸಂಪತ್‌ಸೌಭಾಗ್ಯ, ಅನಂತಸೌಖ್ಯ, ಅನಂತಪುತ್ರ ಪೌತ್ರಾಭಿ ವೃದ್ಧ್ಯರ್ಥಂ ಅನಂತಲ್ಪೋಕ್ತಪ್ರಕಾರೇಣ ಸಂಭವದ್ಭಿಃ ನಿಯಮೈಃ ಸಂಭವದ್ಭಿಃ ಉಪಚಾರೈಶ್ಚ ಯಾವಚ್ಛಕ್ತಿ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾಂ ಕರಿಷ್ಯೇ॥

ಹೂ ಮಂತ್ರಾಕ್ಷತೆಗಳನ್ನು ದೇವರ ಮೇಲೆ ಅರ್ಪಿಸುವುದು

ತದಂಗತ್ವೇನ ಕಲಶಾರ್ಚನಂ ಶಂಖಾರ್ಚನಂ ಚ ಕರಿಷ್ಯೇ । ಕಲಶಂ ಗಂಧಾಕ್ಷತೆ ಪತ್ರಪುಷ್ಪೈಃ ಅಭ್ಯರ್ಚ್ಯ ॥ ಆಚಮನ ಮಾಡಿದ ನೀರನ್ನು ಚೆಲ್ಲಿ ಪಂಚಪಾತ್ರೆಗೆ ಬೇರೆ ನೀರನ್ನು ಹಾಕುವುದು.

ಕಲಶಂ ಗಂಧಾಕ್ಷತ ಪತ್ರಪುಷ್ಪೈಃ ಅಭ್ಯರ್ಚ್ಯ ॥ ಪಂಚಪಾತ್ರೆಯ ನಾಲ್ಕು ಕಡೆ ಗಂಧ ಹಚ್ಚಿ ಮಂತ್ರಾಕ್ಷತೆಯನ್ನು ಗಂಧದ ಮೇಲೆ ಇಟ್ಟು, ಪಂಚಪಾತ್ರೆಯ ಒಳಗೆ ಹೂ ಅಥವಾ ತುಳಸಿಯನ್ನು ಹಾಕಿ ಬಲಗೈಮೇಲೆ ಬರುವಂತೆ ಮುಚ್ಚಿಕೊಳ್ಳಬೇಕು.

**ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಾಃ ।**
**ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥**

**ಕುಕ್ಷೌತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ ।**
**ಋಗ್ವೇದೋಽಥ ಯಜುರ್ವೇದಸ್ಸಾಮವೇದೋ ಹ್ಯಥರ್ವಣಃ ॥**

**ಅಂಗೈಶ್ಚ ಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾಃ ।**
**ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ ॥**

**ಗಂಗೇ ಚ ಯಮುನೇ ಚೈವ ಗೋದಾವರೀ ಸರಸ್ವತೀ ।**
**ನರ್ಮದೇ ಸಿಂಧು ಕಾವೇರೀ ಜಲೇಽಸ್ಮಿನ್ ಸನ್ನಿಧಿಂ ಕುರು ॥**

ಓಂ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಗ್‌ಂ ಸಚತಾ ಪರುಷ್ಣಿಯಾ ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾಽಽರ್ಜಿಕೀಯೇ ಶೃಣುಹ್ಯಾ ಸುಷೋಮಯಾ ॥

ಪಂಚಪಾತ್ರೆಯ ನೀರನ್ನು ಉದ್ಧರಣೆಯಲ್ಲಿ ತೆಗೆದುಕೊಂಡು ಹೂವಿನಿಂದ ಅದ್ದಿ ಪ್ರೋಕ್ಷಿಸುವುದು.

ಯಾಗಮಂಡಪಂ ಯಾಗಭೂಮಿಂ ಚ ಸಂಪ್ರೋಕ್ಷ್ಯ । ಪೂಜೋಪಕರಣ ದ್ರವ್ಯಾಣಿ । ಪುಷ್ಪಾಣಿ ಚ ಸಂಪ್ರೋಕ್ಷ್ಯ । ದೇವತಾಂ ಸಂಪ್ರೋಕ್ಷ್ಯ । ಆತ್ಮಾನಂ ಸಂಪ್ರೋಕ್ಷ್ಯ । ಶೇಷಂ ಜಲಂ ವಿಸೃಜ್ಯ ॥ ಮಂಟಪಕ್ಕೆ, ಪೂಜಾದ್ರವ್ಯಗಳಿಗೆ, ಕುಳಿತಿರುವ ಜಾಗಕ್ಕೆ ಹಾಗೂ ದೇವರಿಗೆ ಮತ್ತು ತನ್ನ ಮೇಲೂ ಪ್ರೋಕ್ಷಿಸಿಕೊಂಡು ಉಳಿದ ನೀರನ್ನು ಅರ್ಘ್ಯಪಾತ್ರೆಗೆ ಹಾಕುವುದು.

**ಅಭೀಪ್ಸಿತಾರ್ಥಸಿದ್ಧ್ಯರ್ಥಂ ಪೂಜಿತೋ ಯಸ್ಸುರೈರಪಿ ।**
**ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥**

ಇತಿ ಗಣಪತಿಂ ಧ್ಯಾತ್ವಾ । ಈ ರೀತಿ ಗಣಪತಿಯನ್ನು ಪ್ರಾರ್ಥಿಸಿರಿ.

**ಓಂ ವಿಷ್ಣುಶಕ್ತಿ ಸಮೋಪೇತೇ ಸರ್ವವರ್ಣೇ ಮಹೀತಲೇ ।**
**ಅನೇಕರತ್ನಸಂಭೂತೇ ಭೂಮಿದೇವಿ ನಮೋಽಸ್ತು ತೇ ॥**

ಇತಿ ಭೂಮಿಂ ಸ್ಪೃಷ್ಟ್ವಾ ಸಂಪ್ರಾರ್ಥ್ಯ ॥ ಕುಳಿತಿರುವ ಪೀಠದ ಕೆಳಗಿನ ಭೂಮಿಯನ್ನು ಎರಡೂ ಕೈಗಳಿಂದ ಮುಟ್ಟಿ ಪ್ರಾರ್ಥಿಸಿಕೊಳ್ಳುವುದು.

**ಪೃಥ್ವಿ ತ್ವಯಾ ಧೃತಾ ಲೋಕಾಃ ದೇವಿ ತ್ವಂ ವಿಷ್ಣುನಾ ಧೃತಾ ।**
**ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್ ॥**

ಓಂ ಆಸನಾಯ ನಮಃ । ಅನಂತಸನಾಯ ನಮಃ । ಓಂ ಕೂರ್ಮಾಸನಾಯ ನಮಃ। ಓಂ ವಿಮಲಾಸನಾಯ ನಮಃ । ಓಂ ಕಮಲಾಸನಾಯಾ ನಮಃ ' ಧ್ಯೇ ಶ್ರೀ ಪರಮ ಸುಖಾಸನಾಯ ನಮಃ ॥ ಓಂ ಭೂರ್ಭುವಸ್ಸುವಃ । ಇತ್ಯಾಸನೇ ಉಪವಿಶ್ಯ ॥ ಆಸನದಲ್ಲಿ ಕುಳಿತುಕೊಳ್ಳುವುದು.

ಸಂಕಲ್ಪ: ಪ್ರಾಣಾನಾಯಮ್ಯ ಪ್ರಣವಸ್ಯ ಪರಬ್ರಹ್ಮ ಋಷಿಃ । ಪರಮಾತ್ಮಾ ದೇವತಾ। ದೈವೀ ಗಾಯತ್ರೀ ಛಂದಃ । ಪ್ರಾಣಾಯಾಮೇ ವಿನಿಯೋಗಃ । ಓಂ ಭೂಃ । ಓಂ ಭುವಃ। ಓಗ್ಂ ಸುವಃ । ಓಗ್ಂ ಸುವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಗ್ಂ ಸತ್ಯಮ್।

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ । ಓಂ ಆಪೋ ಜ್ಯೋತೀರಸೋ ಅಮೃತಂ ಬ್ರಹ್ಮ ಭೂರ್ಭುವಸ್ಸುವರೋಮ್ ॥

ಶುಭೇ ಶೋಭನೇ ಮುಹೂರ್ತೇ । ಆದ್ಯ ಬ್ರಹ್ಮಣ್ಯಃ । ದ್ವಿತೀಯಪರಾರ್ಧೇ । ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ । ಕಲಿಯುಗೇ । ಪ್ರಥಮಪಾದೇ । ಜಂಬೂದ್ವೀಪೇ । ಭರತವರ್ಷೇ । ಭರತಖಂಡೇ । ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ । ಶಾಲೀವಾಹನಶಕೇ । ಬೌದ್ಧಾವತಾರೇ । ರಾಮಕ್ಷೇತ್ರೇ । ಅಸ್ಮಿನ್ ವರ್ತಮಾನೇ । ವ್ಯಾವಹಾರಿಕೇ । ಚಾಂದ್ರಮಾನೇನ । ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ ಶ್ರೀ ......... ಸಂವತ್ಸರೇ । ದಕ್ಷಿಣಾಯನೇ । ವರ್ಷಋತೌ ಭಾದ್ರಪದಮಾಸೇ ಶುಕ್ಲಪಕ್ಷೇ । ಚತುರ್ದಶ್ಯಾಂ ಶುಭತಿಥೌ । .... ವಾಸರಯುಕ್ತಾಯಾಮ್ । ಶುಭನಕ್ಷತ್ರ ಶುಭಯೋಗ ಶುಭಕರಣ । ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ । ಅಸ್ಮಾಕಂ ಸಹಕುಟುಂಬಾನಾಂ ಪುತ್ರ ಪೌತ್ರ ಕಳತ್ರ ಮಿತ್ರ ಭ್ರಾತೃ ಬಂಧುವರ್ಗಸಹಿತಾನಾಂ ಕ್ಷೇಮಸ್ಥೈರ್ಯವಿಜಯವೀರ್ಯ ಅಭಯಆಯುರಾರೋಗ್ಯ ಐಶ್ವರ್ಯಾಭಿ-ವೃದ್ಧ್ಯರ್ಥಂ, ಧರ್ಮಾರ್ಥಕಾಮಮೋಕ್ಷಚತುರ್ವಿಧಫಲಪುರುಷಾರ್ಥಂ ಸಿದ್ಧ್ಯರ್ಥಂ

ವಿಶೇಷಣ ಅನಂತಕೀರ್ತಿ, ಅನಂತಸಂಪತ್‌ಸೌಭಾಗ್ಯ, ಅನಂತಸೌಖ್ಯ, ಅನಂತಪುತ್ರ ಪೌತ್ರಾಭಿ ವೃದ್ಧ್ಯರ್ಥಂ ಅನಂತಲ್ಪೋಕ್ತಪ್ರಕಾರೇಣ ಸಂಭವದ್ಭಿಃ ನಿಯಮ್ಯೈಃ ಸಂಭವದ್ಭಿಃ ಉಪಚಾರೈಶ್ಚ ಯಾವಚ್ಛಕ್ತಿ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾಂ ಕರಿಷ್ಯೇ॥

ಹೂ ಮಂತ್ರಾಕ್ಷತೆಗಳನ್ನು ದೇವರ ಮೇಲೆ ಅರ್ಪಿಸುವುದು

ತದಂಗತ್ವೇನ ಕಲಶಾರ್ಚನಂ ಶಂಖಾರ್ಚನಂ ಚ ಕರಿಷ್ಯೇ । ಕಲಶಂ ಗಂಧಾಕ್ಷತೆ ಪತ್ರಪುಷ್ಪೈಃ ಅಭ್ಯರ್ಚ್ಯ ॥ ಆಚಮನ ಮಾಡಿದ ನೀರನ್ನು ಚೆಲ್ಲಿ ಪಂಚಪಾತ್ರೆಗೆ ಬೇರೆ ನೀರನ್ನು ಹಾಕುವುದು.

ಕಲಶಂ ಗಂಧಾಕ್ಷತ ಪತ್ರಪುಷ್ಪೈಃ ಅಭ್ಯರ್ಚ್ಯ ॥ ಪಂಚಪಾತ್ರೆಯ ನಾಲ್ಕು ಕಡೆ ಗಂಧ ಹಚ್ಚಿ ಮಂತ್ರಾಕ್ಷತೆಯನ್ನು ಗಂಧದ ಮೇಲೆ ಇಟ್ಟು, ಪಂಚಪಾತ್ರೆಯ ಒಳಗೆ ಹೂ ಅಥವಾ ತುಳಸಿಯನ್ನು ಹಾಕಿ ಬಲಗೈಮೇಲೆ ಬರುವಂತೆ ಮುಚ್ಚಿಕೊಳ್ಳಬೇಕು.

**ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಾಃ ।**
**ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥**

**ಕುಕ್ಷೌತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ ।**
**ಋಗ್ವೇದೋಽಥ ಯಜುರ್ವೇದಸ್ಸಾಮವೇದೋ ಹ್ಯಥರ್ವಣಃ ॥**

**ಅಂಗೈಶ್ಚ ಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾಃ ।**
**ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ ॥**

**ಗಂಗೇ ಚ ಯಮುನೇ ಚೈವ ಗೋದಾವರೀ ಸರಸ್ವತೀ ।**
**ನರ್ಮದೇ ಸಿಂಧು ಕಾವೇರೀ ಜಲೇಽಸ್ಮಿನ್ ಸನ್ನಿಧಿಂ ಕುರು ॥**

ಓಂ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಗ್‌ಂ ಸಚತಾ ಪರುಷ್ಣಿಯಾ ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾಽಽರ್ಜಿಕೀಯೇ ಶೃಣುಹ್ಯಾ ಸುಷೋಮಯಾ ॥

ಪಂಚಪಾತ್ರೆಯ ನೀರನ್ನು ಉದ್ಧರಣೆಯಲ್ಲಿ ತೆಗೆದುಕೊಂಡು ಹೂವಿನಿಂದ ಅದ್ದಿ ಪ್ರೋಕ್ಷಿಸುವುದು.

ಯಾಗಮಂಡಪಂ ಯಾಗಭೂಮಿಂ ಚ ಸಂಪ್ರೋಕ್ಷ್ಯ । ಪೂಜೋಪಕರಣ ದ್ರವ್ಯಾಣಿ । ಪುಷ್ಪಾಣಿ ಚ ಸಂಪ್ರೋಕ್ಷ್ಯ । ದೇವತಾಂ ಸಂಪ್ರೋಕ್ಷ್ಯ । ಆತ್ಮಾನಂ ಸಂಪ್ರೋಕ್ಷ್ಯ । ಶೇಷಂ ಜಲಂ ವಿಸೃಜ್ಯ ॥ ಮಂಟಪಕ್ಕೆ, ಪೂಜಾದ್ರವ್ಯಗಳಿಗೆ, ಕುಳಿತಿರುವ ಜಾಗಕ್ಕೆ ಹಾಗೂ ದೇವರಿಗೆ ಮತ್ತು ತನ್ನ ಮೇಲೂ ಪ್ರೋಕ್ಷಿಸಿಕೊಂಡು ಉಳಿದ ನೀರನ್ನು ಅರ್ಘ್ಯಪಾತ್ರೆಗೆ ಹಾಕುವುದು.

## ಶಂಖಾರ್ಚನೆ

ಕಲಶೋದಕೇನ ಶಂಖಂ ಪ್ರಕ್ಷಾಳ್ಯ । ಕಲಶದ ನೀರಿನಿಂದ ಶಂಖವನ್ನು ತೊಳೆಯುವುದು.

ಓಂ ಪ್ರಣವೇನ ಶಂಖಂ ಅಪೂರ್ಯ । ಓಂ ಎಂದು ಹೇಳಿ ಶಂಖವನ್ನು ನೀರಿನಿಂದ ತುಂಬಿಸುವುದು.

ಶಂಖಂ ಗಂಧಾಕ್ಷತ ಪತ್ರಪುಷ್ಪೈಃ ಅಭ್ಯರ್ಚ್ಯ । ಪೀಠದ ಮೇಲೆ ಶಂಖವನ್ನು ಇಟ್ಟು ಅದಕ್ಕೆ ಗಂಧ ಸವರಿ ಅಕ್ಷತೆ ಹೂಗಳನ್ನಿಟ್ಟು ಅದನ್ನು ಮುಚ್ಚಿಕೊಂಡು ಹೇಳಬೇಕು.

**ಶಂಖಂ ಚಂದ್ರಾರ್ಕದೈವತ್ಯಂ ಕುಕ್ಷೌವರುಣದೇವತಾಃ ।**
**ಪೃಷ್ಠೇ ಪ್ರಜಾಪತಿಶ್ಚೈವ ಅಗ್ರೇ ಗಂಗಾ ಸರಸ್ವತೀ ॥**

**ತ್ರೈಲೋಕ್ಯೇ ಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯಾ ।**
**ಶಂಖೇ ತಿಷ್ಠಂತಿ ವಿಪೇಂದ್ರ ತಸ್ಮಾಚ್ಛಂಖಂ ಪ್ರಪೂಜಯೇತ್ ॥**

ಶಂಖದ ನೀರನ್ನು ಹೂವಿನಿಂದ ಅದ್ದಿ ಮಂಟಪ, ದೇವರನ್ನು ಇರಿಸಿರುವ ಸ್ಥಳ ತನ್ನ ತಲೆಯ ಮೇಲೂ ಪ್ರೋಕ್ಷಿಸಿಕೊಂಡು ಉಳಿದ ನೀರನ್ನು ಅರ್ಘ್ಯಪಾತ್ರೆಗೆ ಬಿಟ್ಟು ಮತ್ತೆ ಶಂಖಕ್ಕೆ ನೀರು ತುಂಬಿ ಪೀಠದ ಮೇಲೆ ಇರಿಸುವುದು.

## ಗಣಪತಿ ಪೂಜೆ

ಮಯಾ ಕರಿಷ್ಯಮಾಣ ಶ್ರೀ ಅನಂತಪದ್ಮನಾಭಸ್ವಾಮಿವ್ರತಂ ನಿರ್ವಿಘ್ನೇನ ಸಮಾಪ್ತ್ಯರ್ಥಂ ಆದೌ ಶ್ರೀ ಗಣಪತಿ ಪೂಜಾಂ ಕರಿಷ್ಯೇ ॥

ಓಂ ಗಣಾನಾಂ ತ್ವಾಂ ಗಣಪತಿಗ್ಂ ಹವಾಮಹೇ । ಕವಿಂ ಕವೀನಾಗ್ಂ ಮುಪಮಶ್ರವಸ್ತಮವ್ । ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ನೂತಿಭಿಸ್ಸೀದಸಾದನಮ್ ॥

ಶ್ರೀ ಗಣಪತಯೇ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ॥ ಹೂವುಗಳಿಂದ ಪೂಜಿಸುವುದು.

ಆವಾಹಯಾಮಿ । ಆವಾಹನಂ ಸಮರ್ಪಯಾಮಿ । ಹೂವಿನಿಂದ ಪೂಜಿಸುವುದು.

ಸಿಂಹಾಸನಂ ಸಮರ್ಪಯಾಮಿ । ಹೂವಿನಿಂದ ಪೂಜಿಸುವುದು

ಪಾದ್ಯಂ ಸಮರ್ಪಯಾಮಿ । ಕಾಲುಗಳ ಮೇಲೆ ನೀರನ್ನು ಪ್ರೋಕ್ಷಿಸುವುದು.

ಅರ್ಘ್ಯಂ ಸಮರ್ಪಯಾಮಿ । ಕೈಗಳ ಮೇಲೆ ನೀರನ್ನು ಪ್ರೋಕ್ಷಿಸುವುದು.

ಆಚಮನೀಯಂ ಸಮರ್ಪಯಾಮಿ । ಸೊಂಡಿಲ ಮೇಲೆ ನೀರು ಪ್ರೋಕ್ಷಿಸುವುದು.

## ಪಂಚಾಮೃತ ಸ್ನಾನ

ಹಾಲು : ಓಂ ಆಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣಿಯಮ್ । ಭವಾವಾಜಸ್ಯ ಸಂಗಥೇ ॥

ಶ್ರೀ ಗಣಪತಯೇ ನಮಃ ಕ್ಷೀರಸ್ನಾನಂ ಸಮರ್ಪಯಾಮಿ ॥ ಹೂವನ್ನು ಹಾಲಿನಲ್ಲಿ ಅದ್ದಿ ಪ್ರೋಕ್ಷಿಸುವುದು.

ಮೊಸರು : ಓಂ ದಧಿಕ್ರಾವ್ಣ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ । ಸುರಭಿನೋ ಮುಖಾಕರತ್ಪ್ರಣ ಆಯೂಗ್ಂ ಷಿತಾರಿಷತ್ ॥

ಶ್ರೀ ಗಣಪತಯೇ ನಮಃ ದಧಿಸ್ನಾನಂ ಸಮರ್ಪಯಾಮಿ ॥ ಮೊಸರಿನಿಂದ ಪ್ರೋಕ್ಷಣೆ ಮಾಡುವುದು.

ತುಪ್ಪ : ಓಂ ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋವಸ್ಸವಿತೋ–ತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಸ್ಸೂರ್ಯಸ್ಯ ರಶ್ಮಿಭಿಃ ॥

ಶ್ರೀ ಗಣಪತಯೇ ನಮಃ ಘೃತೇನ ಸ್ನಪಯಾಮಿ ॥ ತುಪ್ಪದಿಂದ ಪ್ರೋಕ್ಷಣೆ ಮಾಡುವುದು.

ಜೇನುತುಪ್ಪ : ಓಂ ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ। ಮಾಧ್ವೀರ್ನಃ ಸಂತ್ವೋಷಧೀಃ ॥ ಮಧುನಕ್ತಮುತೋಷಸಿ । ಮಧುಮತ್ಪಾರ್ಥಿವಗ್ಂ ರಜಃ ಮಧು ದ್ಯೌರಸ್ತುನಃ ಪಿತಾ । ಮಧುಮಾನ್ನೋ ವನಸ್ಪತಿರ್ಮಧುಮಾಗ್ಂ ಅಸ್ತು ಸೂರ್ಯಃ। ಮಾಧ್ವೀರ್ಗಾವೋ ಭವಂತು ನಃ ॥

ಶ್ರೀ ಗಣಪತಯೇ ನಮಃ ಮಧುನಾ ಸ್ನಪಯಾಮಿ ॥ ಜೇನುತುಪ್ಪವನ್ನು ಪ್ರೋಕ್ಷಣೆ ಮಾಡುವುದು.

ಸಕ್ಕರೆ : ಓಂ ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತು ನಾಮ್ನೇ । ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾಗ್ಂ ಅದಾಭ್ಯಃ ॥

ಶ್ರೀ ಗಣಪತಯೇ ನಮಃ ಶರ್ಕರಯಾ ಸ್ನಪಯಾಮಿ ॥ ಸಕ್ಕರೆಯಿಂದ ಪ್ರೋಕ್ಷಣೆ ಮಾಡುವುದು.

ಫಲೋದಕ : ಓಂ ಯಾಃ ಫಲನೀರ್ಯಾ ಅಫಲಾ ಅಪುಷ್ಪಾಯಾಶ್ಚ ಪುಷ್ಪಿಣೀಃ। ಬೃಹಸ್ಪತಿ ಪ್ರಸೂತಾಸ್ತಾನೋ ಮುಂಚಂತ್ವಗ್ಂಹಸಃ ॥

ಶ್ರೀ ಗಣಪತಯೇ ನಮಃ ಫಲೋದಕೇನ ಸ್ನಪಯಾಮಿ ॥ ಎಳನೀರಿನಿಂದ ಪ್ರೋಕ್ಷಣೆ.

ಪಂಚಾಮೃತಸ್ನಾನಾನಂತರೇ ಶುದ್ಧೋದಕ ಸ್ನಾನಂ ಸಮರ್ಪಯಾಮಿ ॥ ಒಂದು ಉದ್ಧರಣೆ ನೀರನ್ನು ತೋರಿಸಿ ಅರ್ಘ್ಯಪಾತ್ರೆಗೆ ಹಾಕುವುದು.

ವಸ್ತ್ರದ್ವಯಂ ಸಮರ್ಪಯಾಮಿ। ಹತ್ತಿಯಿಂದ ಮಾಡಿದ ಗೆಜ್ಜೆವಸ್ತ್ರಗಳನ್ನಿಡುವುದು.

ಉಪವೀತಂ ಸಮರ್ಪಯಾಮಿ । ಹೂ ಮಂತ್ರಾಕ್ಷತೆ ಹಾಕುವುದು.

ಗಂಧಂ ಸಮರ್ಪಯಾಮಿ । ಗಂಧ ಹಚ್ಚುವುದು

ಅಕ್ಷತಾನ್ ಸಮರ್ಪಯಾಮಿ । ಅಕ್ಷತೆಗಳಿಂದ ಪೂಜಿಸುವುದು.

ಪುಷ್ಪಾಣಿ ಸಮರ್ಪಯಾಮಿ । ಹೂವಿನಿಂದ ಪೂಜಿಸುವುದು.

## ಅಥ ನಾಮಪೂಜಾಂ ಕರಿಷ್ಯೇ

| | |
|---|---|
| ಓಂ ಸುಮುಖಾಯ ನಮಃ | ಓಂ ವಿಘ್ನರಾಜಾಯ ನಮಃ |
| ಓಂ ಏಕದಂತಾಯ ನಮಃ | ಓಂ ಗಣಾಧಿಪಾಯ ನಮಃ |
| ಓಂ ಕಪಿಲಾಯ ನಮಃ | ಓಂ ಧೂಮ್ರಕೇತವೇ ನಮಃ |
| ಓಂ ಗಜಕರ್ಣಿಕಾಯ ನಮಃ | ಓಂ ಗಣಾಧ್ಯಕ್ಷಾಯ ನಮಃ |
| ಓಂ ಲಂಬೋದರಾಯ ನಮಃ | ಓಂ ಫಾಲಚಂದ್ರಾಯ ನಮಃ |
| ಓಂ ವಿಕಟಾಯ ನಮಃ | ಓಂ ಗಜಾನನಾಯ ನಮಃ |

ನಾಮಪೂಜಾಂ ಸಮರ್ಪಯಾಮಿ

**ದಶಾಂಗಂ ಗುಗ್ಗುಲೋ ಧೂಪಃ ಸುಗಂಧಶ್ಚ ಮನೋಹರಃ ।**
**ಕಪಿಲಾಘೃತ ಸಂಯುಕ್ತೋ ಧೂಪೋಽಯಂ ಪ್ರತಿಗೃಹ್ಯತಾಮ್ ॥**

ಶ್ರೀ ಮಹಾಗಣಪತಯೇ ನಮಃ ಧೂಪಮಾಘ್ರಾಪಯಾಮಿ ॥ ಊದಿನಕಡ್ಡಿ ಹಚ್ಚಿ ಬೆಳಗುವುದು.

**ಸಾಜ್ಯಂ ತ್ರಿವರ್ತಿ ಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ।**
**ಗೃಹಾಣ ಮಂಗಳಂ ದೀಪಂ ತ್ರೈಲೋಕ್ಯ ತಿಮಿರಾಪಹ ॥**

ಶ್ರೀ ಮಹಾಗಣಪತಯೇ ನಮಃ ಏಕಾರ್ತಿದೀಪಂ ದರ್ಶಯಾಮಿ ॥ ಮೂರು ಬತ್ತಿಗಳನ್ನು ಹಚ್ಚಿ ಬೆಳಗುವುದು.

ಧೂಪದೀಪಾನಂತರೇ ಆಚಮನಮ್ ॥ ನೀರು ಬಿಡುವುದು.

ಆಚಮನಾನಂತರೇ ಪತ್ರಪುಷ್ಪಾಣಿ ॥ ಹೂಗಳಿಂದ ಪೂಜೆ.

## ನೈವೇದ್ಯ

ಕಲಶದ ನೀರನ್ನು ತೆಗೆದುಕೊಂಡು ನೈವೇದ್ಯದ ಮೇಲೆ ಪ್ರೋಕ್ಷಿಸಿ ಪ್ರದಕ್ಷಿಣಾಕಾರವಾಗಿ ಪರಿಷೇಚನೆ ಮಾಡುವುದು.

ಓಂ ವಿಶ್ವಾಮಿತ್ರ ಋಷಿಃ । ಸವಿತಾ ದೇವತಾ । ಗಾಯತ್ರೀ ಛಂದಃ ।

ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ ॥

ಸತ್ಯಂತ್ವರ್ತೇನ ಪರಿಷಿಂಚಾಮಿ ॥

ಓಂ ಪ್ರಾಣಾಯ ಸ್ವಾಹಾ । ಓಂ ಅಪಾನಾಯ ಸ್ವಾಹಾ । ಓಂ ವ್ಯಾನಾಯ ಸ್ವಾಹಾ । ಓಂ ಉದಾನಾಯ ಸ್ವಾಹಾ । ಓಂ ಸಮಾನಾಯ ಸ್ವಾಹಾ । ಓಂ ಬ್ರಹ್ಮಣೇ ಸ್ವಾಹಾ ॥

ಶ್ರೀ ಗಣಪತಯೇ ನಮಃ । ಕದಲೀಫಲ (ಬಾಳೆ ಹಣ್ಣು) ನಾರಿಕೇಳ ಫಲ (ತೆಂಗಿನಕಾಯಿ) ನೈವೇದ್ಯಂ ಸಮರ್ಪಯಾಮಿ । ಚಣಕದಳ ಮುದ್ಗದಳ (ಕಡಲೇಬೇಳೆ, ಹೆಸರುಬೇಳೆ) ನೈವೇದ್ಯಂ ಸಮರ್ಪಯಾಮಿ ॥

ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ ॥ ನೀರು ಬಿಡುವುದು.

ತಾಂಬೂಲಂ ದಕ್ಷಿಣಾಂ ಚ ಸಮರ್ಪಯಾಮಿ ॥ ಎಲೆ ಅಡಿಕೆ ದಕ್ಷಿಣೆ ಇಡುವುದು.

## ಮಂಗಳಾರತಿ

**ಓಂ ಸಾಮ್ರಾಜ್ಯಂ ಭೌಜ್ಯಂ ಸ್ವಾರಾಜ್ಯಂ ವೈರಾಜ್ಯಂ ಪಾರಮೇಷ್ಠ್ಯಂ ರಾಜ್ಯಂ ಮಹಾರಾಜ್ಯಮಾಧಿಪತ್ಯಮಯಂ ಸಮಂತಪರ್ಯಾಯೀ ಸ್ಯಾತ್ ಸಾರ್ವಭೌಮ-ಸ್ಸಾರ್ವಾಯುಷ ಆಂತಾದಾ ಪರಾರ್ಧಾತ್ಪೃಥಿವ್ಯೈ ಸಮುದ್ರಪರ್ಯಂತಾಯಾ ಏಕರಾಳಿತಿ ॥**

ಶ್ರೀ ಗಣಪತಯೇ ನಮಃ । ಮಂಗಳ ನೀರಾಜನಂ ದರ್ಶಯಾಮಿ । ಒಂದು ಸಾರಿ ನೀರು ಬಿಟ್ಟು ಹಲಗಾರತಿ ಹಿಂದೆ ಇಟ್ಟಿರುವ ಹೂ ಮಂತ್ರಾಕ್ಷತೆಗಳನ್ನು ದೇವರ ಮೇಲೆ ಹಾಕಿ ಮಂಗಳಾರತಿಯನ್ನು ತೆಗೆದುಕೊಳ್ಳುವುದು.

## ಪ್ರದಕ್ಷಿಣೆ ನಮಸ್ಕಾರ

ಗಜಾನನಂ ಭೂತಗಣಾಧಿಸೇವಿತಂ ಕಪಿತ್ಥ ಜಂಬೂಫಲಸಾರಭಕ್ಷಿತಮ್ । ಉಮಾಸುತಂ ಶೋಕವಿನಾಶಕಾರಣಂ ನಮಾಮಿ ವಿಘ್ನೇಶ್ವರ ಪಾದಪಂಕಜಮ್ ॥

ಪ್ರದಕ್ಷಿಣ ನಮಸ್ಕಾರಮ್ ಸಮರ್ಪಯಾಮಿ ॥ ಪ್ರದಕ್ಷಿಣೆ ನಮಸ್ಕಾರ ಮಾಡುವುದು.

## ಪುನಃ ಪೂಜಾಂ ಕರಿಷ್ಯೇ

ಶ್ರೀ ಗಣಪತಯೇ ನಮಃ । ಛತ್ರಂ ಸಮರ್ಪಯಾಮಿ । ಚಾಮರಂ ವೀಜಯಾಮಿ । ನೃತ್ಯಂ ದರ್ಶಯಾಮಿ । ಗೀತಂ ಶ್ರಾವಯಾಮಿ । ಸರ್ವೋಪಚಾರ ಪೂಜಾಂ ಸಮರ್ಪಯಾಮಿ ॥

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾ ಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ಲಂಬೋದರಮ್ ॥

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಗಣಾಧಿಪ ।
ಯತ್ಪೂಜಿತಂ ಮಯಾ ದೇವಿ ಪರಿಪೂರ್ಣಂ ತದಸ್ತು ಮೇ ॥

ಅನೇನ ಮಯಾ ಕೃತೇನ ಷೋಡಶೋಪಚಾರ ಪೂಜಾವಿಧಾನೇನ ಭಗವಾನ್ ಸರ್ವಾತ್ಮಕಃ ಶ್ರೀ ಮಹಾಗಣಪತಿಃ ಸುಪ್ರೀತಃ ಸುಪ್ರಸನ್ನಾ ವರದಾ ಭವತು । ಹೂ ಮಂತ್ರಾಕ್ಷತೆಗಳನ್ನು ಕೈಯಲ್ಲಿಟ್ಟುಕೊಂಡು ನೀರು ಹಾಕಿ ಅರ್ಘ್ಯಪಾತ್ರೆಗೆ ಬಿಡುವುದು.

ವಕ್ರತುಂಡ ಮಹಾಕಾಯ ಕೋಟಿಸೂರ್ಯ ಸಮಪ್ರಭ ।
ನಿರ್ವಿಘ್ನಂಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥

ಎಂದು ಹೇಳಿ ಗಣಪತಿ ಪ್ರಸಾದದ ಹೂ ತೆಗೆದುಕೊಂಡು ಮುಡಿದುಕೊಳ್ಳುವುದು.

## ಕಲಶ ಸ್ಥಾಪನೆ

ದರ್ಭೆಯಿಂದ ಮಾಡಿರುವ ಏಳು ಹೆಡೆ ಸರ್ಪವನ್ನು ಇಡಬೇಕು.

ಯಸ್ಯ ದೇಹೇ ಸ್ಥಿತಾ ಲೋಕಾಃ ಸರ್ವೇ ತಿಷ್ಠಂತಿ ಪನ್ನಗಾಃ ।
ಸಾಗರಾ ಸರಿತಶ್ಚಾಪಿ ಸೋಽಸ್ಮಿನ್ ಸಂಸ್ಥಾಪ್ಯತೇ ಹರಿಃ ।

ಏಹ್ಯೇಹಿ ಕೃಪಯಾನಂತ ಕ್ಷೀರೋದಾರ್ಣವ ಸಂಸ್ಥಿತ ।
ಪದ್ಮ ಚಕ್ರ ಗದಾ ಶಂಖ ಗರುಡಾದಿ ಸಮನ್ವಿತ ॥

ಶ್ರೀವತ್ಸ ಕೌಸ್ತುಭೋರಸ್ಕಫಣಾಸ್ಸಪ್ತಾನ್ವಿತಾಃ ಪ್ರಭೋ ।
ವ್ರತಸ್ಯೋಪಕ್ರಮೇ ಶೀಘ್ರಂ ಸರ್ವಾಭೀಷ್ಟಪ್ರದೋ ಭವ ॥

ಇತಿ ಧ್ಯಾತ್ವಾ ॥ ಹೀಗೆ ಹೇಳಿ ಹೂ ಮಂತ್ರಾಕ್ಷತೆಗಳನ್ನು ದರ್ಭೆಯ ಸರ್ಪದ ಮೇಲೆ ಅರ್ಪಿಸಿ ಕೈ ಮುಗಿಯುವುದು.

॥ ಅಥ ಶ್ರೀಮದನಂತಪದ್ಮನಾಭಸ್ವಾಮಿ ಪ್ರಾಣಪ್ರತಿಷ್ಠಾಪನಮ್॥

ಅಸ್ಯ ಶ್ರೀಮದನಂತಪದ್ಮನಾಭಸ್ವಾಮಿ ಪ್ರಾಣಪ್ರತಿಷ್ಠಾಸಿದ್ಧ್ಯರ್ಥೇ ಮಹಾಮಂತ್ರಸ್ಯ ಬ್ರಹ್ಮಾ ವಿಷ್ಣು ಮಹೇಶ್ವರಾ ಋಷಯಃ ಋಗ್ಯಜುಸ್ಸಾಮಾಽಥರ್ವಣಃ ಛಂದಾಸಿ । ಪ್ರಾಣಶಕ್ತಿಃ-ಪರಾದೇವತಾ । ಹ್ರಾಂ ಬೀಜಂ ಹ್ರೀಂ ಶಕ್ತಿ । ಹ್ರೂಂ ಕೀಲಕಮ್ । ಮಮ ಶ್ರೀಮದನಂತಪದ್ಮನಾಭಸ್ವಾಮಿ ಪ್ರಾಣಪ್ರತಿಷ್ಠಾಸಿದ್ಧ್ಯರ್ಥೇ ಜಪೇ ವಿನಿಯೋಗಃ ॥

### ಅಥ ಕರನ್ಯಾಸ : (ಎರಡೂ ಕೈಗಳಿಂದ)

ಹ್ರಾಂ ಅಂಗುಷ್ಠಾಭ್ಯಾಂ ನಮಃ ॥ ತೋರುಬೆರಳನ್ನು ಹೆಬ್ಬೆರಳಿಗೆ ಮುಟ್ಟಿಸಿ ಮಿಡಿಯುವುದು.

ಹ್ರೀಂ ತರ್ಜನೀಭ್ಯಾಂ ನಮಃ ॥ ಹೆಬ್ಬೆರಳಿನಿಂದ ತೋರುಬೆರಳನ್ನು ಬುಡ...ದ ತುದಿಯವರೆಗೆ ಸವರುವುದು.

ಹ್ರೂಂ ಮಧ್ಯಮಾಭ್ಯಾಂ ನಮಃ॥ ಹೆಬ್ಬೆರಳಿನಿಂದ ಮಧ್ಯದ ಬೆರಳನ್ನು ಸವರುವುದು.

ಹ್ರೈಂ ಅನಾಮಿಕಾಭ್ಯಾಂ ನಮಃ ॥ ಹೆಬ್ಬೆರಳಿನಿಂದ ಉಂಗುರದ ಬೆರಳನ್ನು ಸವರುವುದು.

ಹ್ರೌಂ ಕನಿಷ್ಠಿಕಾಭ್ಯಾಂ ನಮಃ ॥ ಹೆಬ್ಬೆರಳಿನಿಂದ ಕಿರುಬೆರಳನ್ನು ಸವರುವುದು.

ಹ್ರಃ ಕರತಲಕರಪೃಷ್ಠಾಭ್ಯಾಂ ನಮಃ ॥ ಎರಡೂ ಅಂಗೈಗಳನ್ನು ಒಂದರ ಮೇಲೊಂದನ್ನಿಟ್ಟು ಸವರುವುದು.

## ಅಥ ಹೃದಯಾದಿನ್ಯಾಸಃ :

ಹ್ರಾಂ ಹೃದಯಾಯ ನಮಃ ॥ ಎದೆಯನ್ನು ಮುಟ್ಟಿಕೊಳ್ಳುವುದು.

ಹ್ರೀಂ ಶಿರಸೇ ಸ್ವಾಹಾ ॥ ತಲೆಯನ್ನು ಮುಟ್ಟಿಕೊಳ್ಳುವುದು.

ಹ್ರೂಂ ಶಿಖಾಯೈ ವೌಷಟ್ ॥ ಜುಟ್ಟನ್ನು ಮುಟ್ಟಿಕೊಳ್ಳುವುದು.

ಹ್ರೈಂ ಕವಚಾಯ ಹುಂ ॥ ಎರಡು ಕೈಗನ್ನು ಸ್ವಸ್ತಿಕ ರೂಪದಲ್ಲಿ ಭುಜಗಳ ಮೇಲೆ ಇಟ್ಟು ಕೊಳ್ಳುವುದು.

ಹ್ರೌಂ ನೇತ್ರತ್ರಯಾಯೈ ವೌಷಟ್ ॥ ಎರ... ಕಣ್ಣುಗಳನ್ನು ಮುಟ್ಟಿಕೊಂಡು ಕೈಯನ್ನು ತಲೆಯಸುತ್ತಾ ಪ್ರದಕ್ಷಿಣಾಕಾರವಾಗಿ ತಿರುಗಿಸಿ ಚಪ್ಪಾಳೆ ತಟ್ಟುವುದು.

ಹ್ರಃ ಅಸ್ತ್ರಾಯ ಫಟ್ ॥ ಚಪ್ಪಾಳೆ ತಟ್ಟುವುದು.

ಭೂರ್ಭುವಸ್ಸುವರೋಂ ಇತಿ ದಿಗ್ಬಂಧಃ ॥

## ಧ್ಯಾನಮ್

ರಕ್ತಾಂಬೋಧಿ ಸ್ಥಪೋತೋಲ್ಲಸದರುಣ ಸರೋಜಾಧಿರೂಢಾ ಕರಾಬ್ಜೈಃ।
ಪಾಶಂ ಕೋದಂಡಮಿಕ್ಷೂದ್ಭವ ಮಣಿಗಣಮಪ್ಯಂಕುಶಂ ಪಂಚಬಾಣಾನ್।
ಬಿಭ್ರಾಣಾಸೃಕ್ಕಪಾಲಂ ತ್ರಿನಯನ ವಿಲಸತ್ಪೀನವಕ್ಷೋರುಹಾಢ್ಯಾ ।
ದೇವೀ ಬಾಲಾರ್ಕವರ್ಣಾ ಭವಂತು ಸುಖಕರೀ ಪ್ರಾಣಶಕ್ತಿಃ ಪರಾ ನಃ ॥

ಓಂ ಹ್ರಾಂ ಹ್ರೀಂ ಕ್ರೋಂ ಯ ರ ಲ ವ ಶ ಸ ಹ ಳ ಕ್ಷ ಹಂಸಸ್ಸೋಽಹಂ ಹಂಸಃ ಶ್ರೀಮದನಂತಪದ್ಮನಾಭಸ್ವಾಮಿಪ್ರಾಣಾಃ ಮಮ ಪ್ರಾಣಾಃ ಶ್ರೀಮದನಂತಪದ್ಮನಾಭ-ಸ್ವಾಮಿ ಜೀವಃ ಮಮ ಜೀವಃ। ವಾಙ್ಮನಶ್ಚಕ್ಷುಶ್ಶ್ರೋತ್ರಜಿಹ್ವಾ ಘ್ರಾಣೈಃ ಉಚ್ಛ್ವಾಸ-ನಿಶ್ವಾಸರೂಪೇಣ ಬಹಿರಾಗತ್ಯ ಅನಯೋಃ ಕಲಶಯೋಃ (ಒಂದೇ ಕಲಶ ಇಟ್ಟಿದ್ದರೆ) ಅಸ್ಮಿನ್ ಕಲಶೇ ಸುಖಂ ಚಿರಂ ತಿಷ್ಠಂತಿ ಸ್ವಾಹಾ ॥

ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹನೋ ಧೇಹಿ ಭೋಗಮ್।
ಜ್ಯೋಕ್ಪಶ್ಯೇಮ ಸೂರ್ಯಮುಚ್ಚರನ್ತಮನುಮತೇ ಮೃಡಯಾ ನಃ ಸ್ವಸ್ತಿ॥

ಅತ್ರಾಗಚ್ಛ ಆಗಚ್ಛ। ಅತ್ರಾವಾಹಿತೋ ಭಾವ॥ ಸ್ಥಾಪಿತೋ ಭವ। ಸನ್ನಿಹಿತೋ ಭವ। ಸನ್ನಿರುದ್ಧೋ ಭವ। ಅವಕುಂಠಿತೋ ಭವ। ಸುಪ್ರಸನ್ನೋ ಭವ। ವರದೋ ಭವ। ಶಾಂತೋ ಭವ॥ ಪ್ರಸೀದ ಪ್ರಸೀದ ಪ್ರಸೀದ॥

ಸ್ವಾಮಿನ್ ಸರ್ವಜಗನ್ನಾಥ ಯಾವತ್ಪೂಜಾವಸಾನಕಮ್।
ತಾವತ್ವಂ ಪ್ರೀತಿಭಾವೇನ ಬಿಂಬೇಽಸ್ಮಿನ್ ಸನ್ನಿಧಿಂ ಕುರು॥

ಹೂ ಮಂತ್ರಾಕ್ಷತೆಗಳನ್ನು ಕಲಶದ ಮೇಲೆ ಹಾಕಬೇಕು.

ಶ್ರೀಮದನಂತಪದ್ಮನಾಭಸ್ವಾಮಿ ಪ್ರಾಣಪ್ರತಿಷ್ಠಾಮುಹೂರ್ತಸ್ಸುಮುಹೂರ್ತೋಽಸ್ತು॥

## ನೂತನ ದೋರ ಸ್ಥಾಪನಮ್

ಹದಿನಾಲ್ಕು ಗಂಟುಗಳನ್ನು ಹಾಕಿರುವ ಅನಂತನ ದಾರವನ್ನು ದೇವರ ಹತ್ತಿರ ಇಟ್ಟು ಪೂಜಿಸುವುದು. ಗ್ರಂಥಿ ದೇವತೆಗಳ ಸಂಬಂಧಪಟ್ಟ ಈ ಕೆಳಗಿನ ಶ್ಲೋಕಗಳನ್ನು ಹೇಳುವುದು.

**ವಿಷ್ಣುರಗ್ನಿಸ್ತಥಾಸೂರ್ಯಃ ಸಹಸ್ರಾಕ್ಷಃ ಪಿತಾಮಹಃ।**
**ವಾಯುಃ ಪಿನಾಕೀ ವಿಘ್ನೇಶಃ ಸ್ಕಂದಃ ಸೋಮಸ್ತಥೈವ ಚ।**
**ಆಕಾಶೋ ವರುಣಃ ಪೃಥ್ವೀ ವಸವೋ ಗ್ರಂಥಿ ದೇವತಾಃ॥**

ಕ್ರಮವಾಗಿ ಒಂದೊಂದು ಗ್ರಂಥಿಗೂ ಪೂಜೆಮಾಡಬೇಕು.

## ದೋರಗ್ರಂಥಿ ಪೂಜಾ

| | |
|---|---|
| ಓಂ ವಿಷ್ಣವೇ ನಮಃ | ಓಂ ವಿಘ್ನೇಶಾಯ ನಮಃ |
| ಓಂ ಅಗ್ನಯೇ ನಮಃ | ಓಂ ಸ್ಕಂದಾಯ ನಮಃ |
| ಓಂ ಸೂರ್ಯಾಯ ನಮಃ | ಓಂ ಸೋಮಾಯ ನಮಃ |
| ಓಂ ಸಹಸ್ರಾಕ್ಷಾಯ ನಮಃ | ಓಂ ಆಕಾಶಾಯ ನಮಃ |
| ಓಂ ಪಿತಾಮಹಾಯ ನಮಃ | ಓಂ ವರುಣಾಯ ನಮಃ |
| ಓಂ ವಾಯವೇ ನಮಃ | ಓಂ ಪೃಥ್ವ್ಯೈ ನಮಃ |
| ಓಂ ಪಿನಾಕಿನೇ ನಮಃ | ಓಂ ವಸುಭ್ಯೋ ನಮಃ |

ಇತಿ ಗ್ರಂಥಿ ದೇವತಾ ಪೂಜಾಂ ಸಮರ್ಪಯಾಮಿ॥

## ದ್ವಾರಪಾಲಕ ಪೂಜಾ (ಆಯಾ ದಿಕ್ಕುಗಳಿಗೆ ಪೂಜೆ)

ಪೂರ್ವದ್ವಾರೇ ದ್ವಾರಶ್ರಿಯೈ ನಮಃ। ಚಂಡಾಯ ನಮಃ। ಪ್ರಚಂಡಾಯ ನಮಃ।
ದಕ್ಷಿಣದ್ವಾರೇ ದ್ವಾರಶ್ರಿಯೈ ನಮಃ। ಗಂಗಾಯೈ ನಮಃ। ಯಮುನಾಯೈ ನಮಃ।

ಪಶ್ಚಿಮದ್ವಾರೇ ದ್ವಾರಶ್ರಿಯೈ ನಮಃ । ಧಾತ್ರೇ ನಮಃ । ವಿಧಾತ್ರೇ ನಮಃ । ಉತ್ತರದ್ವಾರೇ ದ್ವಾರಶ್ರಿಯೈ ನಮಃ। ಶಂಖನಿಧಯೇ ನಮಃ । ಪದ್ಮನಿಧಯೇ ನಮಃ ।

ಮಧ್ಯೇ ಶ್ರೀಮದನಂತಪದ್ಮನಾಭಸ್ವಾಮಿನೇ ನಮಃ। ದ್ವಾರಪಾಲಕ ಪೂಜಾಂ ಸಮರ್ಪಯಾಮಿ॥ ಹೂ ಮಂತ್ರಾಕ್ಷತೆಗಳನ್ನು ದೇವರ ಮೇಲೆ ಹಾಕುವುದು.

## ದಿಕ್ಪಾಲಕ ಪೂಜಾ (ಎಂಟು ದಿಕ್ಕುಗಳಿಗೆ ಹೂ ಪೂಜೆ)

| | | | |
|---|---|---|---|
| ಇಂದ್ರಾಯ ನಮಃ | (ಪೂರ್ವ) | ವರುಣಾಯ ನಮಃ | (ಪಶ್ಚಿಮ) |
| ಅಗ್ನಯೇ ನಮಃ | (ಆಗ್ನೇಯ) | ವಾಯವೇ ನಮಃ | (ವಾಯುವ್ಯ) |
| ಯಮಾಯ ನಮಃ | (ದಕ್ಷಿಣ) | ಕುಬೇರಾಯ ನಮಃ | (ಉತ್ತರ) |
| ನಿರ್ಋುತಯೇ ನಮಃ | (ನೈರುತ್ಯ) | ಈಶಾನಾಯ ನಮಃ | (ಈಶಾನ್ಯ) |

ಮಧ್ಯೇ ಶ್ರೀಮದನಂತಪದ್ಮನಾಭಸ್ವಾಮಿನೇ ನಮಃ ದಿಕ್ಪಾಲಕ ಪೂಜಾಂ ಸಮರ್ಪಯಾಮಿ॥

## ಪೀಠಪೂಜಾ

ಪೀಠಸ್ಯ ವಾಮಪಾರ್ಶ್ವೇ ಗುರವೇ ನಮಃ। ದಕ್ಷಿಣಪಾರ್ಶ್ವೇ ಗಣನಾಥಾಯ ನಮಃ । ಅಧೋಭಾಗೇ ಆಧಾರಶಕ್ತ್ಯೈ ನಮಃ । ಕೂರ್ಮಾಯ ನಮಃ । ಯಜ್ಞವರಾಹಾಯ ನಮಃ। ದಕ್ಷಿಣೇ ಕ್ಷಿರೋದಧಯೇ ನಮಃ। ಸಿಂಹಾಸನಾಯ ನಮಃ। ಸಿಂಹಾಸನಸ್ಯ ಆಗ್ನೇಯಕೋಣೇ ಕೂರ್ಮಾಯ ನಮಃ। ನೈಋುತಿಕೋಣೇ ಜ್ಞಾನಾಯ ನಮಃ। ವಾಯವ್ಯಕೋಣೇ ವೈರಾಗ್ಯಾಯ ನಮಃ। ಈಶಾನ್ಯಕೋಣೇ ಐಶ್ವರ್ಯಾಯ ನಮಃ। ಪೂರ್ವದಿಶಿ ಧರ್ಮಾಯ ನಮಃ। ಪಶ್ಚಿಮದಿಶಿ ವೈರಾಗ್ಯಾಯ ನಮಃ। ಉತ್ತರದಿಶಿ ಅನೈಶ್ವರ್ಯಾಯ ನಮಃ। ಪೀಠಮಧ್ಯೇ ಮೂಲಾಯ ನಮಃ। ನಾಳಾಯ ನಮಃ। ಪತ್ರೇಭ್ಯೋ ನಮಃ। ಕೇಸರೇಭ್ಯೋ ನಮಃ। ಕರ್ಣಿಕಾಯೈ ನಮಃ। ಕರ್ಣಿಕಾ ಮಧ್ಯೇ ಸಂ ಸತ್ವಾಯ ನಮಃ। ರಂ ರಜಸೇ ನಮಃ। ತಂ ತಮಸೇ ನಮಃ। ಸೂರ್ಯಮಂಡಲಾಧಿಪತಯೇ ಬ್ರಹ್ಮಣೇ ನಮಃ। ಸೋಮಮಂಡಲಾಯ ನಮಃ। ವಿಷ್ಣವೇ ನಮಃ। ವಹ್ನಿಮಂಡಲಾಯ ನಮಃ। ವಹ್ನಿಮಂಡಲಾಧಿಪತಯೇ ಈಶ್ವರಾಯ ನಮಃ॥

ಇತಿ ಪೀಠ ಪೂಜಾಂ ಸಮರ್ಪಯಾಮಿ॥ ಹೂ ಮಂತ್ರಾಕ್ಷತೆಗಳಿಂದ ಪೂಜಿಸುವುದು.

ಕುಸುಮಾಕ್ಷತಾನ್ ಗೃಹೀತ್ವಾ॥ ಹೂ ಮಂತ್ರಾಕ್ಷತೆ ತೆಗೆದುಕೊಂಡು ಈ ಕೆಳಗಿನ ಶ್ಲೋಕಗಳನ್ನು ಹೇಳುತ್ತಾ ಪೂಜಿಸಬೇಕು.

ತತಃ ಕ್ಷೀರಸಾಗರೇ ಫಣಾಸ್ಸಪ್ತಾನ್ವಿತ ಶೇಷಶಾಯಿನಮ್। ನೀಲೋತ್ಪಲದಳ ಶ್ಯಾಮಮ್। ಪಿಂಗಭ್ರೂಶ್ಮಶ್ರುಲೋಚನಮ್। ಚತುರ್ಭುಜಮ್। ಶಂಖಚಕ್ರಗದಾಪದ್ಮ–ಶಾರ್ಙ್ಗನಂದಕ ಮುಸಲಾದಿ ದಿವ್ಯಾಯುಧೈಃ ಪರಿವೇಷ್ಟಿತಮ್। ಗರುಡವಿಷ್ವಕ್ಸೇನಾದಿ–ಸಂಸೇವ್ಯಮಾನಮ್। ಶ್ರೀಭೂನೀಳಾ ಸಮೇತಮ್। ಕೌಸ್ತುಭಧರಮ್। ಹಾರನೂಪುರ





ಕೇಯೂರ ಮುಕುಟರತ್ನ ಕಾಂಚ್ಯಂಗುಳೀಯಕಾದಿಭೂಷಣೈರುಪಶೋಭಿತಮ್ । ಜಯವಿ ಯಾದಿ ದ್ವಾರಪಾಲಕೋ ಪೇತಮ್ । ಯಕ್ಷಕಿನ್ನರಗಂಧರ್ವವಿದ್ಯಾ-ಧರಗುಹ್ಯಾಕಾದಿ ದೇವಯೋನಿವಿಶೇಷ್ಯೈಃ ಸಂಸೇವ್ಯ ಮಾನಮ್ । ಬ್ರಹ್ಮೇಶಾನ-ಶಕ್ರಾದಿಸುರೈಃ ಸಂಪೂಜ್ಯಮಾನಮ್ । ನಿಖಿಲವೇದಶಾಸ್ತ್ರ ಪುರಾಣೈರುದ್ಗೀಯಮಾನಮ್। ಸನಕನಂದನ ಸನತ್ಕುಮಾರ ಸನತ್ಸುಜಾತಭೃಗ್ವಾದಿಮುನಿ ಸೇವಿತಮ್ । ಶ್ರೀಮದನಂತ-ಪದ್ಮನಾಭಸ್ವಾಮಿನಂ ಧ್ಯಾಯೇತ್ ॥

ಮತ್ತೆ ಹೂ ಮಂತ್ರಾಕ್ಷತೆ ಕೈಯಲ್ಲಿ ಹಿಡಿದು ಈ ಶ್ಲೋಕಗಳನ್ನು ಹೇಳಿ ಪೂಜಿಸಬೇಕು.

ಕೃತ್ವಾ ದರ್ಭಮಯಂ ದೇವಂ ವಾರಾಂ ನಿಧಿಸಮಪ್ರಭಮ್ ।
ಫಣಾಸ್ಸಪ್ತಾನ್ವಿತಂ ದೇವಂ ಪಿಂಗಳಾಕ್ಷಂ ಚತುರ್ಭುಜಮ್ ॥
ದಕ್ಷಿಣಾಗ್ರ ಕರೇ ಪದ್ಮಂ ಶಂಖಂ ತಸ್ಯಾಪ್ಯಧಃ ಕರೇ ।
ಚಕ್ರಮೂರ್ಧ್ವಕರೇ ವಾಮೇ ಗದಾಂ ತಸ್ಯ ಪ್ರಯತ್ನತಃ ॥
ದಧಾನಂ ಸರ್ವಲೋಕೇಶಂ ಸರ್ವಾಭರಣಭೂಷಿತಮ್ ।
ದುಗ್ಧಾಬ್ಧಿ ಮಧ್ಯೇ ಸಂಸ್ಥಾಪ್ಯ ತತ ಆವಾಹಯೇತ್ಸುಧೀಃ ॥

ಏವಂ ಸಾಂಗಂ ಸಾಯುಧಂ ಸವಾಹನಂ ಸಪರಿವಾರಂ ಶ್ರೀಮದನಂತಪದ್ಮನಾಭ-ಸ್ವಾಮಿನಂ ಧ್ಯಾಯೇತ್ ॥

**ಧ್ಯಾನ :**

ನವಾಮ್ರ ಪಲ್ಲವಾಭಾಸಂ ಪಿಂಗಭ್ರೂಶ್ಮಶ್ರುಲೋಚನಮ್ ।
ಪೀತಾಂಬರಧರಂ ದೇವಂ ಶಂಖಚಕ್ರ ಗದಾಧರಮ್ ।
ವಿಶ್ವಾಕಾರಂ ವಿಶ್ವಯೋನಿಂ ವಿಶ್ವಾಧಾರಂ ಪರಂ ಹರಿಮ್ ।
ಸಹಸ್ರಶಿರಸಂ ವಿಷ್ಣುಂ ಶೇಷಸಂಜ್ಞಂ ರಮಾಪತಿಮ್ ।
ಅಲಂಕೃತ ಸಮುದ್ರಸ್ಥಂ ವಿಶ್ವರೂಪಂ ವಿಚಿಂತಯೇತ್ ॥

ಓಂ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ । ತನ್ನೋ ರುದ್ರ ಪ್ರಚೋದಯಾತ್ ॥

ಶ್ರೀ ಮದನಂತಪದ್ಮನಾಭಸ್ವಾಮಿನೇ ನಮಃ। ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ। ಹೂಗಳನ್ನು ಪೂಜೆ ಮಾಡುವದು.

**ಆವಾಹನೆ :**

ಆಗಚ್ಛಾನಂತ ದೇವೇಶ ತೇಜೋರಾಶೇ ಜಗತ್ಪತೇ ।
ಇಮಾಂ ಮಯಾ ಕೃತಾಂ ಪೂಜಾಂ ಗೃಹಾಣ ಪುರುಷೋತ್ತಮ ।

ಓಂ ಸಹಸ್ರಶೀರ್ಷಾ ಪುರುಷಃ । ಸಹಸ್ರಾಕ್ಷಃ ಸಹಸ್ರಪಾತ್ । ಸ ಭೂಮಿಂ ವಿಶ್ವತೋ ವೃತ್ವಾ । ಅತ್ಯತಿಷ್ಠದ್ದಶಾಂಗುಲಮ್ ॥





ಶ್ರೀಮದನಂತಪದ್ಮನಾಭಸ್ವಾಮಿನೇ ನಮಃ। ಆವಾಹಯಾಮಿ ಆವಾಹನಂ ಸಮರ್ಪಯಾಮಿ ॥ ಹೂ ಮಂತ್ರಾಕ್ಷತೆಗಳಿಂದ ಪೂಜಿಸಿರಿ.

**ಸಿಂಹಾಸನ :**

ಯೋಗಾಸನಂ ಮಹಾದಿವ್ಯಂ ನಾನಾರತ್ನಸುಶೋಭಿತಮ್ ।
ಸುವರ್ಣೇನ ಯುತಂ ದೇವ ಗೃಹಾಣ ಕಮಲಾಪತೇ ॥

ಓಂ ಪುರುಷ ಏವೇದಗ್ಂ ಸರ್ವವ್ । ಯದ್ಭೂತಂ ಯಚ್ಚ ಭವ್ಯವ್ । ಉತಾಮೃತತ್ವಸ್ಯೇಶಾನಃ । ಯದನ್ನೇನಾತಿರೋಹತಿ ॥

ಕಮಲಾಪತಯೇ ನಮಃ। ರತ್ನಸಿಂಹಾಸನಂ ಸಮರ್ಪಯಾಮಿ ॥ ಹೂವುಗಳನ್ನು ಪೂಜೆ ಮಾಡುವುದು.

**ಪಾದ್ಯ :**

ದೇವ ದೇವ ಜಗನ್ನಾಥ ಪ್ರಣತಾರ್ತಿಹರ ಪ್ರಭೋ ।
ಗೃಹಾಣ ಪಾದ್ಯಂ ಪುಷ್ಪಾಢ್ಯಂ ಪರಮಾತ್ಮನ್ನಮೋಽಸ್ತು ತೇ ॥

ಓಂ ಏತಾವಾನಸ್ಯ ಮಹಿಮಾ । ಅತೋ ಜ್ಯಾಯಾಗ್‌ಶ್ಚ ಪೂರುಷಃ । ಪಾದೋಽಸ್ಯ ವಿಶ್ವಾ ಭೂತಾನಿ । ತ್ರಿಪಾದಸ್ಯಾಮೃತಂ ದಿವಿ ॥

ಮಹಿಮಾನ್ವಿತಾಯ ನಮಃ। ಪಾದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ ॥ ಒಂದು ಉದ್ದರಣೆ ನೀರು ತೆಗೆದುಕೊಂಡು ಕಲಶಗಳ ಕೆಳಭಾಗಕ್ಕೆ ತೋರಿಸಿ ಆ ನೀರನ್ನು ಅರ್ಘ್ಯಪಾತ್ರೆಗೆ ಹಾಕುವುದು.

**ಅರ್ಘ್ಯ :**

ಅನಂತಾನಂತ ದೇವೇಶ ಪುರಾಣ ಪುರುಷೋತ್ತಮ ।
ಅರ್ಘ್ಯಂ ಗೃಹಾಣ ಭಗವಾನ್ ಗಂಧಪುಷ್ಪಾಕ್ಷತೈರ್ಯುತಮ್ ॥

ಓಂ ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಽಸ್ಯೇಹಾಭವಾತ್ಪುನಃ । ತತೋ ವಿಶ್ವಙ್ವ್ಯಕ್ರಾಮತ್ । ಸಾಶನಾನಶನೇ ಅಭಿ ॥

ಅನಂತಾಯ ನಮಃ। ಅರ್ಘ್ಯಮರ್ಘ್ಯಂ ಸಮರ್ಪಯಾಮಿ ॥ ಒಂದು ಉದ್ದರಣೆ ನೀರು ತೆಗೆದುಕೊಂಡು ಕಲಶಕ್ಕೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕುವುದು.

**ಆಚಮನ :**

ಸುರಾಸುರಾಣಾಮಧಿಪ ಕ್ಷೀರಾಬ್ಧಿಶಯನಾಚ್ಯುತ ।
ಗೃಹಾಣಾಚಮನಂ ದೇವ ವಿಶ್ವರೂಪಧರ ಪ್ರಭೋ ॥

ಗಂಧಾಃ, ಸುಗಂಧಾಃ, ಪುಷ್ಪಾಣಿ, ಸುಪುಷ್ಪಾಣಿ ಗಂಧ, ಧೂಪ, ದೀಪ ಸಕಲಾರಾಧನೈ ಸ್ವರ್ಚಿತಂ। ವಿಷ್ಣೋ ಉಪಾಯನದಾನಂ ರಕ್ಷಸ್ವ.

ಇದಂ ಉಪಾಯನದಾನಂ ಶ್ರೀ ಸತ್ಯನಾರಾಯಣಸ್ವಾಮಿ
ಪ್ರೀತಿಂಕಾಮೇತಿ ತುಭ್ಯಂ ಸಂಪ್ರದೇ ನಮಮ ನಮಮ।
ಸತ್ಯಶ ಪ್ರತಿಗೃಹ್ಣಾತು ಸತ್ಯೇ ಶೋ ವೈ ದದಾತಿ ಚ।
ಸತ್ಯೇಶಃ ತಾರಕೋಭಾಭ್ಯಾಂ ಸತ್ಯೇಶಾಯ ನಮೋ ನಮಃ॥

## ಪುನಃ ಪೂಜಾಃ

ಆರಾಧಿತಾನಾಂ ದೇವಾನಾಂ ಪುನಃ ಪೂಜಾಂಕರಿಷ್ಯೇ ಶ್ರೀ ಸತ್ಯನಾರಾಯಣಸ್ವಾಮಿ ದೇವತಾಭ್ಯೋನಮಃ ಪೂಜಾಂತೇ ಛತ್ರಂ ಧಾರಯಾಮಿ। ಚಾಮರಂ ವೀಜಯಾಮಿ। ನೃತ್ಯಂ ದರ್ಶಯಾಮಿ। ನಾಟ್ಯಂ ದರ್ಶಯಾಮಿ। ಗೀತಂ ಶ್ರಾವಯಾಮಿ। ವಾದ್ಯಂ ಸಮರ್ಪಯಾಮಿ। ಆಂದೋಳಿಕಾರೋಹಣಂ ಸಮರ್ಪಯಾಮಿ। ಅಶ್ವಾರೋಹಣಂ ಸಮರ್ಪಯಾಮಿ। ಗಜಾರೋಹಣಂ ಸಮರ್ಪಯಾಮಿ। ಧ್ವಜಾರೋಹಣಂ ಸಮರ್ಪಯಾಮಿ। ಪುರಾಣಶ್ರವಣಂ ಶ್ರಾವಯಾಮಿ। ಪಂಚಾಂಗಶ್ರವಣಂ ಸಮರ್ಪಯಾಮಿ, ಸಮಸ್ತರಾಜೋಪಚಾರ, ದೇವೋಪಚಾರ, ಭಕ್ತ್ಯೋಪಚಾರ, ಶಕ್ತ್ಯೋಪಚಾರ, ಮಾನಸೋಪಚಾರ, ವ್ರತೋಪಚಾರ, ವೇದೋಪಚಾರ ಪೂಜಾಂ ಸಮರ್ಪಯಾಮಿ.

## ಭಗವತ್ ಅರ್ಪಣ (ಆತ್ಮ ಸಮರ್ಪಣ)

ಯಸ್ಯ ಸ್ಮೃತ್ಯಾಚ ನಾಮೋಕ್ತ್ಯಾ ತಪಃಪೂಜಾ ಕ್ರಿಯಾದಿಷು।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ।
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ।
ಯತ್ಪೂಜಿತಂ ಮಯಾದೇವ ಪರಿಪೂರ್ಣಂ ತದಸ್ತು ಮೇ

ಅನಯಾ ಪೂಜಾವಿಧಾನೇನ ಭಗವಾನ್ ಸರ್ವಾತ್ಮಕ ಶ್ರೀ ಸತ್ಯನಾರಾಯಣ ಸುಪ್ರೀತೋ ಸುಪ್ರಸನ್ನೋ ವರದೋ ಭವಂತು। ಪೂಜಾಕಾಲೇ ಮಧ್ಯೇ ಮಂತ್ರ ತಂತ್ರ ಸ್ವರ ವರ್ಣ ಪದ ಒತ್ತಕ್ಷರ ಧ್ಯಾನ ನ್ಯೂನಾತಿರಿಕ್ತ ಲೋಪದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯ ಮಂತ್ರಜಪಂ ಕರಿಷ್ಯೆ, ಅಚ್ಯುತಾಯನಮಃ ಅನಂತಾಯ ನಮಃ ಗೋವಿಂದಾಯನಮಃ ಅಚ್ಯುತಾಯನಮಃ ಅನಂತಾಯ ನಮಃ ಗೋವಿಂದಾಯನಮಃ ಅಚ್ಯುತಾಯನಮಃ ಅನಂತಾಯ ನಮಃ ಗೋವಿಂದಾಯನಮಃ ಅಚ್ಯುತ ಅನಂತ ಗೋವಿಂದೇಭ್ಯೋ ನಮಃ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾ ಪ್ರಕೃತೇ ಸ್ವಭಾವಾತ್। ಕರೋಮಿಯದ್ಯತ್ಸಕಲಂ ಪರಸ್ಮೈ ನಾರಾಯಣ ಇತಿ ಸಮರ್ಪಯಾಮಿ॥

## ಕ್ಷಮಾಪಣಂ

ಅಪರಾಧ ಸಹಸ್ರಾಣಿ ಕ್ರಿಯತೇಽಹರ್ನಿಶಂ ಮಯಾ ।
ತಾನಿ ಸರ್ವಾಣಿ ಮೇದೇವಾ ಕ್ಷಮಸ್ವ ಪುರುಷೋತ್ತಮ ॥
ಇತಿ ಕ್ಷಮಾಪಣಂ ಸಂಪ್ರಾರ್ಥ್ಯ ಪೂಜಾಂ ಸಮಾಪಯೇತ್ ॥
ಯಾಃ ಫಲನೀರ್ಯಾ ಅಫಲಾ ಅಪುಷ್ಪಾಯಾಶ್ಚ ಪುಷ್ಪಿಣೀಃ
ಬೃಹಸ್ಪತೀ ಪ್ರಸೂತಾ ಸ್ತಾನೋ ಮುಂಚಂತ್ವಗ್ಂ ಹಸಃ
(ಪ್ರಸಾದದ ಹೂವು ತೆಗೆದುಕೊಳ್ಳುವುದು).

ಅಕಾಲಂ ಮೃತ್ಯುಹರಣಂ ಸರ್ವ ವ್ಯಾಧಿ ನಿವಾರಣಂ ।
ಸಮಸ್ತ ದುರಿತೋಪ ಶಮನಂ ಶ್ರೀ ಸತ್ಯನಾರಾಯಣ ಪಾದೋದಕಂ ಪಾವನಂ ಶುಭಂ (ತೀರ್ಥವನ್ನು ಸೇವಿಸುವುದು)

ಸತ್ಯನಾರಾಯಣ ಪಾದಾರ್ಪಿತಂ ತತ್‌ಪುಷ್ಪಂ ಶಿರಸಿ ಧಾರಯೇತ್ ಕೋಟಿಜನ್ಮ ಕೃತ ಪುಣ್ಯಂ ತತ್‌ಕ್ಷಣೇನ ಲಭ್ಯತೇ ಕೋಟಿಜನ್ಮ ಕೃತಂ ಪಾಪಂ ಧಾರಯೇನ ವಿನಶ್ಯತಿ ॥

॥ಕೃಷ್ಣಾರ್ಪಣಮಸ್ತು॥

## ಉದ್ವಾಸನಂ

(ಕುಸುಮಾಕ್ಷತಾನ್ ಗೃಹೀತ್ವಾ) ಯಾಂತು ದೇವಗಣಾಸ್ಸರ್ವೇ ಪೂಜಾ–ಮಾದಾಯಮತ್ಕೃತಾಂ। ಇಷ್ಟಕಾಮ್ಯಾರ್ಥ ಸಿದ್ಧ್ಯರ್ಥಂ ಪುನರಾಗಮನಾಯ ಚ। ಶ್ರೀ ಸತ್ಯನಾರಾಯಣಸ್ವಾಮಿನೇನಮಃ ಯಥಾಸ್ಥಾನ ಮುದ್ವಾಸಯಾಮಿ। (ಈ ಮಂತ್ರವನ್ನು ಪಠಿಸಿ ಸ್ವಾಮಿಯನ್ನು ಸ್ವಲ್ಪ ಬಲಗಡೆಗೆ ಸರಿಸುವುದು).

॥ಶ್ರೀಸತ್ಯನಾರಾಯಣವ್ರತ ಪೂಜಾವಿಧಿ ಸಮಾಪ್ತಿ॥

ಸ್ಕಾಂದಪುರಾಣದ ರೇವಾಖಂಡದ

# ಶ್ರೀ ಸತ್ಯನಾರಾಯಣ ವ್ರತ ಕಥೆ

ನೈಮಿಶಾರಣ್ಯ ವಾಸಿಗಳಾದ ಸಮಸ್ತ ಋಷಿಗಳು ಒಂದು ಕಾಲದಲ್ಲಿ ಪೌರಾಣಿಕೋತ್ತಮರಾದ ಸೂತಮಹರ್ಷಿಯನ್ನು ನೋಡಿ ಕೇಳುವಂಥವರಾದರು. ಎಲೈ ಮುನಿವರ್ಯನೇ! ಯಾವ ವ್ರತಾಚಾರಣೆಯಿಂದ ಅಥವಾ ಯಾವ ತಪಸ್ಸಿನಿಂದ ಅಭೀಷ್ಟವನ್ನು ಹೊಂದಬಹುದು ? ಆ ಸಮಸ್ತವನ್ನೂ ಕೇಳಲಪೇಕ್ಷಿಸುತ್ತಿರುವ ನಮ್ಮಗಳಿಗೆ ಕೃಪೆಯಿಂದ ಹೇಳಬೇಕೆಂದು ಪ್ರಾರ್ಥಿಸಿದರು. ಈ ರೀತಿ ಪ್ರಶ್ನೆ ಮಾಡಿದ ಶೌನಕಾದಿಗಳನ್ನು ಕುರಿತು ಸೂತರು ನುಡಿಯುವರು : ''ಎಲೈ ಮುನಿಗಳಿರಾ ! ಆಲಿಸಿರಿ. ಭಗವಂತನಾದ ಶ್ರೀ ಮನ್ನಾರಾಯಣನು ನಾರದರಿಂದ ಪೂರ್ವದಲ್ಲಿ ಇದೇ ರೀತಿ ಕೇಳಲ್ಪಟ್ಟವನಾಗಿ ದೇವರ್ಷಿಯಾದ ನಾರದರಿಗೋಸ್ಕರ ಯಾವುದನ್ನು ಹೇಳಿದನೋ ಆ ಸಮಸ್ತವನ್ನೂ

ಹಾಗೆಯೇ ನುಡಿಯುವೆನು. ಸಾವಧಾನ ಚಿತ್ತರಾಗಿ ಕೇಳಿರಿ. ಲೋಕಾನುಗ್ರಹ ಮಾಡಬೇಕೆಂಬ ಬಯಕೆಯಿಂದ ನಾರದರು ಸಮಸ್ತ ಲೋಕಗಳನ್ನು ಸುತ್ತುತ್ತಾ ಭೂಲೋಕಕ್ಕೆ ಬಂದರು. ಅನಂತರ ಅಲ್ಲಿ ನಾನಾ ವಿಧವಾದ ಕಷ್ಟಗಳಿಂದ ಕೂಡಿದಂಥಾ, ಅನೇಕ ಯೋನಿಗಳಲ್ಲಿ ಉದ್ಭವಿಸಿದಂಥಾ, ತಮ್ಮ ಪೂರ್ವಾಜಿತ ಕರ್ಮಫಲಗಳಿಂದ ಕಷ್ಟಪಡುತ್ತಲಿರುವಂಥಾ ಸಮಸ್ತ ಪ್ರಜೆಗಳನ್ನೂ ನೋಡಿ ಈ ಲೋಕದ ದುಃಖ ಪರಿಹಾರವು ಯಾವ ಉಪಾಯದಿಂದ ನಿಶ್ಚಯಾಗಿ ಉಂಟಾಗುವುದೋ ಎಂದು ತಮ್ಮ ಮನಸ್ಸಿನಲ್ಲಿ ಯೋಚಿಸಿ ಆಗ ವೈಕುಂಠವನ್ನು ತಲುಪಿದರು. ಅಲ್ಲಿ ಶುಭ್ರವರ್ಣವುಳ್ಳವನಾಗಿಯೂ, ನಾಲ್ಕು ತೋಳುಗಳುಳ್ಳವನಾಗಿಯೂ, ಶಂಖು, ಗದಾ, ಪದ್ಮ ವನಮಾಲೆಗಳಿಂದ ಭೂಷಿಸಲ್ಪಟ್ಟವನಾಗಿಯೂ ಇರುವ ಕಮಲಾಪತಿಯನ್ನು ಕಂಡು ಸ್ತುತಿಸುವುದಕ್ಕೆ ಉಪಕ್ರಮಿಸಿದರು. 'ಎಲೈ ಅನಂತವಾದ ಪರಾಕ್ರಮವುಳ್ಳಂಥಾ, ವಾಕ್‌ಮನಸ್ಸುಗಳಿಗೆ ಅಗೋಚರವಾದ ಆಕಾರವುಳ್ಳಂಥಾ, ಆದಿಯೂ ಮಧ್ಯವೂ ಕೊನೆಯೂ ಇಲ್ಲದಂಥಾ, ಗುಣಸ್ವರೂಪನಾದಂಥಾ, ಸಕಲ ಭೂತಗಳಿಗೂ ಮೊದಲನೆಯವನಾದಂಥಾ, ಭಕ್ತರ ಸಂಕಟವನ್ನು ಹೋಗಲಾಡಿಸತಕ್ಕಂಥಾ ಎಲೈ ಸ್ವಾಮಿಯೇ ! ನಿನಗೆ ನಮಸ್ಕಾರವು.' ಈ ಪ್ರಕಾರವಾಗಿ ನಾರದ ಮಹರ್ಷಿಯು ಸ್ತುತಿಸುವುದನ್ನು ಕೇಳಿ ಶ್ರೀಮನ್ನಾರಾಯಣನು ಇಂತೆಂದನು : 'ಎಲೈ ನಾರದ ಮಹರ್ಷಿಯೇ, ನಿನ್ನ ಮನಸ್ಸಿನಲ್ಲೇನಿರುವುದು ? ಏತಕ್ಕೋಸ್ಕರ ಬಂದಂಥಾವನಾದೆ ? ಅದನ್ನು ಹೇಳಿದೆಯಾದರೆ ನಿನಗೆ ತಕ್ಕ ಸಮಾಧಾನವನ್ನು ಹೇಳುವೆನು : 'ಈ ರೀತಿ ಭಗವಂತನು ನುಡಿಯಲಾಗಿ, ನಾರದರು ಹೇಳುವರು : 'ಎಲೈ ಭಕ್ತವತ್ಸಲನೇ, ಭೂಲೋಕದಲ್ಲಿ ಹುಟ್ಟಿದಂಥಾ ಸಕಲ ಮಾನವರೂ ತಮ್ಮ ತಮ್ಮ ಪಾಪಕರ್ಮಗಳಿಂದ ದಹಿಸಲ್ಪಡುತ್ತಿರುವರು. ಎಲೈ ಸ್ವಾಮಿಯೇ ! ಸುಲಭದಲ್ಲಿ ಈ ಲೋಕಸಂಕಟವು ಹೇಗೆ ಪರಿಹಾರವಾಗುವುದೋ ಆ ಸಮಸ್ತವನ್ನೂ ಕೇಳಲಪೇಕ್ಷಿಸುತ್ತಿರುವೆನು. ನನ್ನಲ್ಲಿ ನೀನು ದಯೆತೋರಿ ಹೇಳುವವನಾಗು.'

ಈ ರೀತಿಯಾಗಿ ಕೇಳಿದ ನಾರದರನ್ನು ನೋಡಿ ಭಗವಂತನು ಹೇಳುವನು : 'ನಾರದರೇ ! ಪ್ರಪಂಚಾನುಗ್ರಹಾಕಾಂಕ್ಷೆಯುಳ್ಳ ನೀನು ಚೆನ್ನಾಗಿ ಕೇಳಿದೆ. ಯಾವಕರ್ಮ ಮಾಡಿದರೆ ಮನುಷ್ಯನು ಅಜ್ಞಾನದಿಂದ ಬಿಡಲ್ಪಟ್ಟುವಿಮುಕ್ತನಾಗುವನೋ ಆ ರಹಸ್ಯ ಹೇಳುವೆನು ಕೇಳು. ಸ್ವರ್ಗ, ಮರ್ತ್ಯಲೋಕಗಳಲ್ಲಿ ದುರ್ಲಭವಾದ ಅತಿ ಪುಣ್ಯಕರವಾದ ಒಂದು ವ್ರತವುಂಟು. ಎಲೈ ಮಗುವೇ ! ನನಗೆ ನಿನ್ನಲ್ಲಿರುವ ವಾತ್ಸಲ್ಯದಿಂದ ಈಗ ಅದನ್ನು ಪ್ರಕಾಶಪಡಿಸುವೆನು. ವಿಧ್ಯುಕ್ತವಾಗಿ ಸ್ವಲ್ಪವೂ ಲೋಪವಿಲ್ಲದಂತೆ ಸತ್ಯನಾರಾಯಣ ವ್ರತವನ್ನು ಮಾಡಿದಲ್ಲಿ ಇಹಲೋಕದಲ್ಲಿ ಸಮಸ್ತ ಸುಖವನ್ನು ಅನುಭವಿಸಿ ಪರಲೋಕದಲ್ಲಿ ಮುಕ್ತಿಯನ್ನು ಹೊಂದುವರು' ಎಂಬುದಾಗಿ ನುಡಿದ ಭಗವದ್ವಾಕ್ಯವನ್ನಾಲಿಸಿ ನಾರದ ಮಹರ್ಷಿಯು ಇಂತೆಂದನು : 'ಎಲೈ ಜಗದೊಡೆಯನೇ! ಈ ಸತ್ಯನಾರಾಯಣ ವ್ರತವನ್ನು ಮಾಡಲು ಫಲವೇನು ? ಮತ್ತು ಇದರ ವಿಧಾನವೆಂತು ? ಯಾರಿಂದ ಪೂರ್ವದಲ್ಲಿ ಈ

ವ್ರತವು ಮಾಡಲ್ಪಟ್ಟಿತು ? ಈ ವ್ರತವನ್ನು ಮಾಡುವುದಕ್ಕೆ ಕಾಲ ಯಾವುದು ? ಇವೆಲ್ಲವನ್ನೂ ವಿಸ್ತಾರವಾಗಿ ಹೇಳಬೇಕೆಂದು' ಕೇಳಿದ ನಾರದರಿಗೆ ಭಗವಂತನು ಹೇಳುವನು :

'ಈ ವ್ರತವು ದುಃಖ ಶೋಕಾದಿಗಳನ್ನು ಪರಿಹರಿಸುವುದು. ಧನಧಾನ್ಯಗಳನ್ನು ಸಮೃದ್ಧಿಪಡಿಸುವುದು. ಸಕಲ ಸೌಭಾಗ್ಯ ಸಂತಾನಗಳನ್ನುಂಟುಮಾಡುವುದು. ಎಲ್ಲಾ ಕಡೆಯಲ್ಲೂ ಜಯವನ್ನುಂಟುಮಾಡುವುದು. ಯಾವ ದಿನಗಳಲ್ಲಿ ಮನುಷ್ಯನಿಗೆ ಈ ವ್ರತವನ್ನು ಮಾಡಬೇಕೆಂಬ ಅಪೇಕ್ಷೆ ಉಂಟಾಗುವುದೋ ಆ ದಿವಸ ಭಕ್ತಿಶ್ರದ್ಧೆಗಳಿಂದ ಕೂಡಿ ಸಾಯಂಕಾಲದಲ್ಲಿ ಶ್ರೀ ಸತ್ಯನಾರಾಯಣ ಸ್ವಾಮಿಯನ್ನರ್ಚಿಸಬೇಕು. ಧರ್ಮದಲ್ಲೇ ದೃಷ್ಟಿಯುಳ್ಳವನಾಗಿ, ವಿಪ್ರರಿಂದೊಡಗೂಡಿ ಶ್ರೇಷ್ಠವಾದ ಹಾಗಪಾಲುಭಕ್ಷ್ಯಗಳನ್ನೂ, ಬಾಳೆಹಣ್ಣು ತುಪ್ಪ, ಹಾಲು, ರವೆ, ತಂಬಿಟ್ಟು, ಶಕ್ತಿಯಿಲ್ಲದಿದ್ದರೆ ಬೆಲ್ಲ ಸಕ್ಕರೆಗಳಿಂದ ಮಿಶ್ರವಾದ ಅಕ್ಕಿ ಹಿಟ್ಟಿನ ತಂಬಿಟ್ಟು ಇವುಗಳೆಲ್ಲವೂ (ಕಾಲುಭಾಗ) ಹಾಗೂ ಪಾಲು ಸೇರಿಸಿ ನೈವೇದ್ಯವನ್ನು ಮಾಡಬೇಕು. ಆ ಬಳಿಕ ಫಲದಕ್ಷಿಣೆಗಳನ್ನೂ ಬ್ರಾಹ್ಮಣರಿಗರ್ಪಿಸಿ ಕಥೆಯನ್ನು ಕೇಳಬೇಕು. ಅನಂತರ ಬಂಧುಗಳಿಗೂ ಇಷ್ಟಮಿತ್ರರಿಗೂ ಭೋಜನವನ್ನು ಮಾಡಿಸಿ ತಾನು ಭೋಜನವನ್ನು ಮಾಡಬೇಕು. ಈ ರೀತಿಯಲ್ಲಿ ಈ ವ್ರತವನ್ನು ದೇವಾಲಯ, ನದೀ ತೀರ ಮೊದಲಾದ ಪ್ರದೇಶಗಳಲ್ಲಿ ಮಾಡಿದ ಬಳಿಕ ನೃತ್ಯಗೀತಾದಿಗಳಿಂದ ಸ್ವಾಮಿಯನ್ನು ಧ್ಯಾನಿಸಿ ಸ್ವಗೃಹವನ್ನು ಕುರಿತು ಬರಬೇಕು. ಈ ಪ್ರಕಾರ ನಾಲ್ಕು ವರ್ಷಗಳು ಈ ವ್ರತವನ್ನಾಚರಿಸಿ ಆದಿಯಲ್ಲಾಗಲೀ, ಮಧ್ಯದಲ್ಲಾಗಲೀ, ಕೊನೆಯಲ್ಲಾಗಲೀ ಉದ್ಯಾಪನೆಯನ್ನು ಮಾಡಿದರೆ ಪೂರ್ಣಫಲ ಪ್ರಾಪ್ತಿಯಾಗುವುದು. ಈ ಮೇರೆಗೆ ಮಾಡಲು ಖಂಡಿತವಾಗಿ ಮನುಷ್ಯರಿಗೆ ಅಭೀಷ್ಟ ಸಿದ್ಧಿಯುಂಟಾಗುವುದು. ಈ ಕಲಿಯುಗದಲ್ಲಿ ಇದಕ್ಕಿಂತಲೂ ಸುಖಕರವಾದ ಸುಲಭೋಪಾಯವು ಇಲ್ಲವೆಂದು' ಶ್ರೀಮನ್ನಾರಾಯಣನು ನಾರದರಿಗೆ ಹೇಳಿದನೆಂದು ಶೌನಕಾದಿಗಳಿಗೆ ಸೂತ ಮಹರ್ಷಿಯು ಹೇಳಿದರೆಂಬಲ್ಲಿಗೆ ಮೊದಲನೇ ಅಧ್ಯಾಯ ಮುಗಿದುದು.

*(ದೇವರಿಗೆ ಹಣ್ಣು ಕಾಯಿ ಇತ್ಯಾದಿ ನೈವೇದ್ಯ ಸಮರ್ಪಿಸಿ ಆರತಿ ಬೆಳಗಬೇಕು).

**ನೀರಾಜನಮಂತ್ರ :**

ಓಂ ಸಾಮ್ರಾಜ್ಯಂ ಭೋಜ್ಯಂ ಸ್ವಾರಾಜ್ಯಂ ವೈರಾಜ್ಯಂ । ಪಾರಮೇಷ್ಠ್ಯಂ ರಾಜ್ಯಂ ಮಹಾರಾಜ್ಯಮಾಧಿಪತ್ಯಂ । ಅಯಂ ಸಮಂತ ಪರ್ಯಾಯೀ ಸ್ಯಾತ್ ಸಾರ್ವಭೌಮಸ್ಸಾರ್ವಾಯುಷಽ। ಆಂತಾದಾ ಪರಾರ್ಧಾತ್ ಪೃಥಿವ್ಯೈ ಸಮುದ್ರಪರ್ಯಂತಾಯಾ । ಏಕರಾದಿತಿ ॥ ಶ್ರೀ ಸತ್ಯನಾರಾಯಣಸ್ವಾಮಿ ದೇವತಾಭ್ಯೋ ನಮಃ ನೀರಾಜನಂ ಸಮರ್ಪಯಾಮಿ ॥ಶ್ರೀಃ॥

ಅನೇನ ಪ್ರಥಮಾಧ್ಯಾಯ ಕಥಾ ಶ್ರವಣೇನ ಶ್ರೀ ಸತ್ಯನಾರಾಯಣಸ್ವಾಮಿ ಪ್ರೀಯತಾಂ ॥



## ಎರಡನೆಯ ಅಧ್ಯಾಯ

ಸೂತಮುನಿಗಳು ಮುಂದುವರೆಸುವರು –

ನಂತರ ವಿಷ್ಣುವು ನಾರದರನ್ನು ಕುರಿತು ಎಲೈ ನಾರದ ಮಹರ್ಷಿಯೇ ! ಪೂರ್ವದಲ್ಲಿ ನೀನು ಕೇಳಿದಂತೆ ಈ ವ್ರತವು ಯಾರಿಂದ ಆಚರಿಸಲ್ಪಟ್ಟಿತೋ ಆ ವಿಷಯವನ್ನು ಕುರಿತು ಪುರಾತನವಾದ ಒಂದು ಇತಿಹಾಸವುಂಟು. ಅದನ್ನು ಹೇಳುವೆನು ಕೇಳುವವನಾಗು. ಅತಿ ಮನೋಹರವಾದ ಕಾಶೀ ಕ್ಷೇತ್ರದಲ್ಲಿ ಅತ್ಯಂತ ದರಿದ್ರನಾದ ಒಬ್ಬ ಬ್ರಾಹ್ಮಣನಿದ್ದನು. ಆತನು ಪ್ರತಿದಿನದಲ್ಲಿಯೂ ಹಸಿವು ಬಾಯಾರಿಕೆಗಳಿಂದ ಬಾಧಿತನಾಗಿ ಎಲ್ಲೆಲ್ಲೂ ಸುತ್ತುತ್ತಲಿದ್ದನು. ದೀನರಲ್ಲಿ ಅತ್ಯಂತ ದಯೆಯುಳ್ಳ ವಿಷ್ಣುವು ಬ್ರಾಹ್ಮಣನ ರೂಪದಲ್ಲಿ ಬಂದು ಆ ದೀನನನ್ನು ದಯೆಯಿಂದ ಕೇಳಿದನು.

ಎಲೈ ಬ್ರಾಹ್ಮಣನೇ ! ಪ್ರತಿದಿನದಲ್ಲೂ ದುಃಖಿತನಾಗಿ ಏತಕ್ಕೋಸ್ಕರ ಈ ಭೂಮಿಯನ್ನು ಸುತ್ತುತ್ತಿರುವೆ ? ಎಲೈ ವಿಪ್ರೋತ್ತಮನೇ ? ಈ ವಿಷಯವನ್ನು ಕೇಳಲಪೇಕ್ಷಿಸುತ್ತಿರುವೆನು ! ಹೇಳುವವನಾಗೆನ್ನಲು, ಈ ಭೂಸುರನಿಂತೆಂದನು ; ಎಲೈ ಪ್ರಭುವೇ, ನಾನು ಅತಿ ದರಿದ್ರ ಬ್ರಾಹ್ಮಣನು, ಭಿಕ್ಷಾರ್ಥವಾಗಿ ತಿರುಗುತ್ತಲಿರುವೆನು. ನಿನಗೇನಾದರೂ ಈ ದಾರಿದ್ರ್ಯಹರಣೋಪಾಯ ತಿಳಿದಿದ್ದರೆ ಕೃಪೆಯಿಂದ ಹೇಳು ಎನ್ನಲು, ವೃದ್ಧ ಬ್ರಾಹ್ಮಣನು ಹೇಳುವನು ; ಎಲೈ ಬ್ರಾಹ್ಮಣನೇ ! ಸತ್ಯನಾರಾಯಣನೆಂದು ಹೇಳಲ್ಪಡುವ ವಿಷ್ಣುವು ಕೋರಿದ ಇಷ್ಟಾರ್ಥಗಳನ್ನು ಕೊಡುವನು. ನೀನು ಆ ವ್ರತವನ್ನು ಮಾಡಿ ಸತ್ಯನಾರಾಯಣನನ್ನು ಪೂಜಿಸು. ಯಾವ ವ್ರತ ಮಾಡಿ ಮಾನವನು ಸರ್ವ ದುಃಖಗಳಿಂದಲೂ ಮುಕ್ತನಾಗುವನೋ ಅಂಥಾ ಉತ್ತಮವಾದ ವ್ರತವನ್ನೂ, ತದ್ವಿಧಾನವನ್ನೂ ಬ್ರಾಹ್ಮಣನಿಗೆ ಹೇಳಿ ವೃದ್ಧ ಬ್ರಾಹ್ಮಣ ರೂಪಿಯಾದ ಸತ್ಯನಾರಾಯಣಸ್ವಾಮಿಯು ಅಂತರ್ಧಾನನಾದನು. ನಂತರ ಬ್ರಾಹ್ಮಣನು ವ್ರತವನ್ನು ಮಾಡಬೇಕೆಂದು ಚಿಂತಿಸುತ್ತಾ ರಾತ್ರಿ ನಿದ್ರೆಯನ್ನು ಕೂಡ ಮಾಡಲಿಲ್ಲ.

ಮಾರನೇ ದಿವಸ ಬೆಳಿಗ್ಗೆ ಎದ್ದು ಸತ್ಯನಾರಾಯಣ ವ್ರತವನ್ನು ಮಾಡುತ್ತೇನೆಂದು ಸಂಕಲ್ಪಮಾಡಿ ಭಿಕ್ಷೆಗೆ ಹೋದನು. ಆ ದಿನದಲ್ಲಿ ಬ್ರಾಹ್ಮಣನು ವಿಶೇಷವಾದ ಹಣವನ್ನು ಹೊಂದಿದನು. ಆ ಹಣದಿಂದ ಬಂಧುಗಳೊಂದಿಗೆ ಶ್ರೀ ಸತ್ಯನಾರಾಯಣ ವ್ರತವನ್ನು ಆಚರಿಸಿದನು. ಆ ದರಿದ್ರ ಬ್ರಾಹ್ಮಣನು ವ್ರತಪ್ರಭಾವದಿಂದ ಸಮಸ್ತ ಸಂಪತ್ತುಳ್ಳವನಾಗಿ, ದುಃಖರಹಿತನಾಗಿ ಅಂದಿನಿಂದ ಪ್ರತಿತಿಂಗಳೂ ವ್ರತವನ್ನು ತಪ್ಪದೆ ಶ್ರದ್ಧೆಯಿಂದ ಮಾಡುತ್ತಿದ್ದನು. ಈ ಪ್ರಕಾರ ಬ್ರಾಹ್ಮಣೋತ್ತಮನು ಸತ್ಯನಾರಾಯಣ ಸ್ವಾಮಿಯ ವ್ರತವನ್ನು ಮಾಡುವವನಾಗಿ ಸಕಲ ವಿಧವಾದ ಪಾಪಗಳಿಂದ ಬಿಡಲ್ಪಟ್ಟು ಇತರರಿಂದ ಹೊಂದಲು ಅಸಾಧ್ಯವಾದ ಮುಕ್ತಿಯನ್ನು ಹೊಂದಿದನು. ಎಲೈ ನಾರದ ಮಹರ್ಷಿಯೇ ! ಯಾವ ಮನುಷ್ಯನು ಭೂಮಿಯಲ್ಲಿ ಈ ವ್ರತವನ್ನು ಮಾಡುವನೋ ಆ ಮನುಷ್ಯನ ಸಕಲ

ದುಃಖಗಳೂ ನಾಶವಾಗುತ್ತವೆ ಎಂದು ಶ್ರೀ ಮನ್ನಾರಾಯಣನು ಹೇಳಿದನು. ಎಲೈ ಋಷಿಗಳಿರಾ ! ಈ ರೀತಿಯಾಗಿ ಶ್ರೀ ವಿಷ್ಣುವು ಮಹಾತ್ಮನಾದ ನಾರದರಿಗೋಸ್ಕರ ಹೇಳಿದ ವಿಷಯವು ನಿಮಗೆ ನನ್ನಿಂದ ಹೇಳಲ್ಪಟ್ಟಿತು. ಮತ್ತೇನನ್ನು ಹೇಳಲಿ ಎಂಬುದಾಗಿ ಶೌನಕಾದಿಗಳನ್ನು ಕುರಿತು ಸೂತಮಹರ್ಷಿಯು ಕೇಳಲಾಗಿ, ಋಷಿಗಳು ನುಡಿಯುವರು –

ಎಲೈ ಮಹರ್ಷಿಯೇ ! ಈ ವ್ರತವನ್ನು ಆ ಬ್ರಾಹ್ಮಣನಿಂದ ಕೇಳಿ ಭೂಮಿಯಲ್ಲಿ ಮತ್ತ್ಯಾರಿಂದ ಆಚರಿಸಲ್ಪಟ್ಟಿತು ? ಆ ಸಮಸ್ತವನ್ನು ಕೇಳಬೇಕೆಂಬ ಅಪೇಕ್ಷೆ ನಮಗೆ ಹುಟ್ಟಿದೆ ಎನ್ನಲು, ಸೂತರು ಹೇಳುವರು; ಎಲೈ ಮುನಿವರ್ಯರೇ ! ಭೂಮಿಯಲ್ಲಿ ಈ ವ್ರತವು ಯಾರಿಂದ ಪೂರ್ವದಲ್ಲಿ ಮಾಡಲ್ಪಟ್ಟಿತೋ ಆ ಸಂಗತಿ ಕೇಳಿರಿ. ಒಂದಾನೊಂದು ಸಮಯದಲ್ಲಿ ಪೂರ್ವೋಕ್ತನಾದ ಆ ಬ್ರಾಹ್ಮಣನು ವಿಶೇಷವಾಗಿ ಪೂಜೋಪಕರಣಗಳಿಂದ, ನೆಂಟರಿಷ್ಟರಿಂದಲೂ ಕೂಡಿದವನಾಗಿ ವ್ರತವನ್ನು ಮಾಡಲು ಯತ್ನಿಸಿದನು. ಆ ವೇಳೆಯಲ್ಲಿಯೇ ಕಟ್ಟಿಗೆ ಮಾರುವವನೊಬ್ಬನು ಬಂದನು. ಆತನು ಮನೆಯ ಹೊರಗಡೆಯೇ ಹೊರೆಯನ್ನು ಇಳಿಸಿ ಬ್ರಾಹ್ಮಣನ ಮನೆಯನ್ನು ಪ್ರವೇಶಿಸಿದನು. ಬಹಳ ದಾಹದಿಂದ ಪೀಡಿತನಾದರೂ ಕೂಡ ಬ್ರಾಹ್ಮಣನಿಂದ ಮಾಡಲ್ಪಡುತ್ತಿದ್ದ ವ್ರತವನ್ನು ನೋಡಿ ಏನೋ ಒಂದು ವಿಧವಾದ ಭಕ್ತಿಯುಂಟಾಗಲು, ಸಾಷ್ಟಾಂಗವೆರಗಿ ಬ್ರಾಹ್ಮಣನನ್ನು ಕುರಿತು ಎಲೈ ಸ್ವಾಮಿಯೇ ! ನಿಮ್ಮಿಂದ ಆಚರಿಸಲ್ಪಡುತ್ತಿರುವ ಈ ವ್ರತ ಯಾವುದು ? ಇದನ್ನಾಚರಿಸಿದರೆ ಎಂಥಾ ಫಲ ಹೊಂದಬಹುದು ? ವಿಷದವಾಗಿ ನನಗೆ ತಿಳಿಸಬೇಕೆಂದು ಪ್ರಾರ್ಥಿಸುತ್ತಿರುವ ಕಟ್ಟಿಗೆ ಮಾರುವವನನ್ನು ಕುರಿತು ಬ್ರಾಹ್ಮಣನು ಹೇಳುತ್ತಾನೆ.

ಇದು ಶ್ರೀ ಸತ್ಯನಾರಾಯಣಸ್ವಾಮಿಯ ವ್ರತವು. ಕೋರಿದ ಇಷ್ಟಾರ್ಥಗಳನ್ನೆಲ್ಲಾ ಕೊಡುವಂಥಾದ್ದು. ನನಗೆ ಈ ವ್ರತಾನುಗ್ರಹದಿಂದಲೇ ಧನಧಾನ್ಯಾದಿಯಾಗಿ ಸಂಪತ್ತುಗಳು ಉಂಟಾಯಿತೆಂದು ಹೇಳಲು, ಕಟ್ಟಿಗೆ ಮಾರುವವನು ಅತ್ಯಂತ ಸಂತೋಷದಿಂದ ಆ ಸ್ವಾಮಿಯ ಪ್ರಸಾದ ಭಕ್ಷಿಸಿ ಜಲಪಾನಮಾಡಿ, ಆ ದಿವಸ ಕಟ್ಟಿಗೆ ಮಾರಿದ ಹಣದಲ್ಲಿ ಶ್ರೀ ಸತ್ಯನಾರಾಯಣ ವ್ರತವನ್ನು ಮಾಡಬೇಕೆಂದು ಆ ಸ್ವಾಮಿಯನ್ನು ಚಿಂತಿಸುತ್ತಾ ಅಲ್ಲಿಂದ ಹೊರಟುಹೋದನು. ಈ ಪ್ರಕಾರ ಮನದಲ್ಲಿ ಧ್ಯಾನಿಸಿ ತಲೆಯ ಮೇಲೆ ಹೊರೆಯನ್ನಿಟ್ಟುಕೊಂಡು ಆ ಪಟ್ಟಣದಲ್ಲಿ ಪುಣ್ಯವಂತರಾದ ಧನಿಕರು ಎಲ್ಲಿರುವರೋ ಅಲ್ಲಿಗೆ ಹೋದನು. ಆ ದಿವಸ ಎಂದಿಗಿಂತಲೂ ದ್ವಿಗುಣವಾದ ಲಾಭವನ್ನು ಪಡೆದನು. ಬಳಿಕ ಸಂತೋಷಪಟ್ಟು ಆ ಹಣದಿಂದ ಚೆನ್ನಾಗಿ ಪಕ್ವವಾಗಿರುವ ಬಾಳೆಹಣ್ಣು ಸಕ್ಕರೆ, ಬೆಲ್ಲ, ಹಾಲು, ಮೊಸರು, ಗೋದಿಹಿಟ್ಟು ಇವೆಲ್ಲವನ್ನೂ ಕಾಲುಪಾಲು ಹೆಚ್ಚಾಗಿರುವಂತೆ ತೆಗೆದುಕೊಂಡು ತನ್ನ ಮನೆಯಲ್ಲಿ ಸೇರಿ ಬಂಧುಗಳೆಲ್ಲರನ್ನೂ ಕರೆಸಿ ವಿದ್ಯುಕ್ತವಾಗಿ ವ್ರತವನ್ನು ಮಾಡಲು, ವ್ರತದ ಪ್ರಭಾವದಿಂದ ಸಕಲ ಸಂಪತ್ತುಗಳನ್ನು ಪಡೆದು ಅಂತ್ಯದಲ್ಲಿ ಶ್ರೀ ಸತ್ಯನಾರಾಯಣಸ್ವಾಮಿಯ ಲೋಕವನ್ನು ಪಡೆದನು.

*(ದೇವರಿಗೆ ಹಣ್ಣು ಕಾಯಿ ಇತ್ಯಾದಿ ನೈವೇದ್ಯ ಸಮರ್ಪಿಸಿ ಆರತಿ ಬೆಳಗಬೇಕು).

**ನೀರಾಜನಮಂತ್ರ :**

ಸೋಮೋ ವಾ ಏತಸ್ಯ ರಾಜ್ಯ ಮಾಧತ್ತೇ । ಯೋ ರಾಜಾಸನ್ ರಾಜ್ಯೋವಾ ಸೋಮೇನ ಯಜತೇ । ದೇವಾಸುವಾ ಮೇತಾನಿ ಹವೀಗ್ಂಷಿ ಭವತಿ । ಏತಾವಂತೋ ವೈ ದೇವಾನಾಗ್ಂಸವಾಃ । ತ ಏವಾಸ್ಮೈಸವಾನ್ ಪ್ರಯಚ್ಛಂತಿ ತ ಏವಂ ಪುನಸ್ಸುವಂತೇ ರಾಜ್ಯಾಯ ದೇವಸೂರಾಜಾ ಭವತಿ ॥

ಶ್ರೀ ಸತ್ಯನಾರಾಯಣಸ್ವಾಮಿ ದೇವತಾಭ್ಯೋ ನಮಃ ಮಂಗಳ ನೀರಾಜನಂ ಸಮರ್ಪಯಾಮಿ ॥ಓಂ॥

ಅನೇನ ದ್ವಿತೀಯಾಧ್ಯಾಯ ಕಥಾ ಶ್ರವಣೇನ ಶ್ರೀ ಸತ್ಯನಾರಾಯಣಸ್ವಾಮಿ ಪ್ರೀಯತಾಂ ॥

## ಮೂರನೆಯ ಅಧ್ಯಾಯ

ಸೂತಮುನಿಗಳು ಹೇಳುತ್ತಾರೆ – ಎಲೈ ಮುನಿಶ್ರೇಷ್ಠರೇ ! ಪುನಃ ಶ್ರೀ ಸತ್ಯನಾರಾಯಣ ವ್ರತಮಹಾತ್ಮ್ಯೆಯನ್ನು ಹೇಳುತ್ತೇನೆ ಕೇಳುವಂಥವರಾಗಿ; ಪೂರ್ವಕಾಲದಲ್ಲಿ ಉಲ್ಕಮುಖನೆಂಬ ರಾಜನಿದ್ದನು. ಜಿತೇಂದ್ರಿಯನಾಗಿಯೂ ಸತ್ಯವಾದಿಯಾಗಿಯೂ, ಒಳ್ಳೆಯ ಬುದ್ಧಿಶಾಲಿಯಾಗಿಯೂ ಇದ್ದ ಆತನು ಪ್ರತಿ ದಿವಸವೂ ದೇವಾಲಯಕ್ಕೆ ಹೋಗಿ ದೇವತಾರಾಧನೆ ಮಾಡಿ ಬ್ರಾಹ್ಮಣರಿಗೆ ದ್ರವ್ಯವನ್ನು ಕೊಟ್ಟು ಸಂತೋಷಪಡಿಸುತ್ತಾ ಇದ್ದನು. ಒಂದಾನೊಂದು ಸಮಯದಲ್ಲಿ ಆತನ ಪತ್ನಿಯಾಗಿಯೂ, ಸುಂದರಳಾಗಿಯೂ, ಕಮಲದಂತೆ ಮುಖವುಳ್ಳವಳಾಗಿಯೂ, ಪತಿವ್ರತೆಯೂ ಆದ ಭದ್ರಶೀಲಾ ಎಂಬ ಸ್ತ್ರೀಯು ಪತಿಯುಕ್ತಳಾಗಿ ನದೀತೀರದಲ್ಲಿ ಸತ್ಯನಾರಾಯಣ ವ್ರತವನ್ನು ಮಾಡಿದಳು. ಆ ಸಮಯದಲ್ಲಿ ಅಲ್ಲಿಗೆ ಒಬ್ಬ ವರ್ತಕನು ವ್ಯಾಪಾರಕ್ಕೋಸ್ಕರ ಬಹು ದ್ರವ್ಯಯುಕ್ತನಾಗಿ ಬಂದು, ನಾವೆಯನ್ನು ದಡದಲ್ಲಿ ಬಿಟ್ಟು ರಾಜದರ್ಶನಾರ್ಥಿಯಾಗಿ ಬಂದು, ವ್ರತವನ್ನು ಮಾಡುತ್ತಿರುವ ರಾಜನನ್ನು ಕಂಡು ವಿನಯದಿಂದ ಕೈ ಮುಗಿದು ಕೇಳಿದವನಾದನು.

ಎಲೈ ರಾಜನೇ ! ಭಕ್ತಿಯುಕ್ತನಾಗಿ ಮನಶ್ಶುದ್ಧಿಯಿಂದ ನೀನು ಮಾಡುತ್ತಲಿರುವುದೇನು ? ಆ ಸಮಸ್ತವನ್ನೂ ದಯೆಯಿಂದ ನನಗೆ ಹೇಳಬೇಕೆನ್ನಲು, ರಾಜನು ಹೇಳುತ್ತಾನೆ – ಎಲೈ ವ್ಯಾಪಾರಿಯೇ ! ಬಂಧುಗಳಿಂದದೊಡಗೂಡಿ ಪುತ್ರಾಸಕ್ತನಾದ ನಾನು ಸಕಲ ಇಷ್ಟಾರ್ಥಗಳನ್ನು ಕೊಡುವ ಶ್ರೀ ಸತ್ಯನಾರಾಯಣ ಸ್ವಾಮಿಯ ಪೂಜೆಯನ್ನು ಮಾಡುತ್ತಲಿರುವೆನು ಎಂದು ಹೇಳಿದ ರಾಜನ ಮಾತನ್ನು ಕೇಳಿ, ಎಲೈ ರಾಜನೇ ! ನನಗೂ ಸಂತಾನವಿಲ್ಲದ ಕಾರಣ ಈ ವ್ರತಪ್ರಭಾವದಿಂದ ನಿಶ್ಚಯವಾಗಿ ಸಂತಾನವುಂಟಾಗುವುದೆಂದು ನಂಬಿದ್ದೇನೆಯಾಗಿ ಈ ವ್ರತ ವಿಧಾನವನ್ನು ತಿಳಿಸಬೇಕೆಂದು ಕೋರಿ, ರಾಜನಿಂದ ಆ ವಿಧಾನವನ್ನು ತಿಳಿದುಕೊಂಡು ವ್ಯಾಪಾರದಿಂದ ಹಿಂತಿರುಗಿ

ಬಹು ಸಂತೋಷದಿಂದ ಮನೆಯನ್ನು ಸೇರಿದನು. ಸಂತಾನಪ್ರದವಾದ ಈ ವ್ರತ ಮಹಾತ್ಮೆ ಎಲ್ಲವನ್ನೂ ತನ್ನ ಸತಿಗೆ ಹೇಳಿ, ಯಾವಾಗ ನಮಗೆ ಸಂತಾನಪ್ರಾಪ್ತಿಯಾಗುವುದೋ ಆಗ್ಗೆ ಈ ವ್ರತವನ್ನು ತಪ್ಪದೆ ಮಾಡುವೆನೆಂದು ಹರಸಿಕೊಂಡನು.

ಹೀಗಿರಲು ಒಂದು ದಿನ ಋತುಸ್ನಾತಳಾಗಿ ಲೀಲಾವತಿಯು ಪತಿಯೊಡನೆ ಸಂತೋಷಗೊಂಡಿರಲು, ಶ್ರೀ ಸತ್ಯನಾರಾಯಣಸ್ವಾಮಿ ಪ್ರಭಾವದಿಂದ ಆ ದಿನದಿಂದಲೇ ಗರ್ಭವನ್ನು ಧರಿಸಿ ಹತ್ತನೇ ತಿಂಗಳಲ್ಲಿ ಪುತ್ರಿಕಾರತ್ನವನ್ನು ಪಡೆದಳು. ಶುಕ್ಲಪಕ್ಷದ ಚಂದ್ರನೋಪಾದಿಯಲ್ಲಿ ಆ ಕನ್ಯಾಮಣಿ ದಿನದಿನಕ್ಕೂ ವೃದ್ಧಿಯನ್ನು ಪಡೆಯುತ್ತಾ ಕಲಾವತಿ ಎಂದು ನಾಮಕರಣ ಮಾಡಲ್ಪಟ್ಟಳು. ಆಗ ಲೀಲಾವತಿ ಎಂಬ ವರ್ತಕನ ಭಾರ್ಯೆಯು ಪತಿಯನ್ನು ಪ್ರಿಯವಚನಗಳಿಂದ ಇಂತೆಂದಳು –

ಎಲೈ ಸ್ವಾಮಿಯೇ, ಪೂರ್ವದಲ್ಲಿ ಸಂಕಲ್ಪಿಸಿದ ವ್ರತವನ್ನು ಇನ್ನೂ ಏತಕ್ಕಾಗಿ ಮಾಡಲಿಲ್ಲ ಎನ್ನಲಾಗಿ, ವರ್ತಕನು ಎಲೌ ಪ್ರಿಯಳೇ, ಈಕೆಯ ವಿವಾಹಕಾಲದಲ್ಲಿ ಮಾಡುವೆನೆಂದು ಸತಿಯನ್ನು ಸಮಾಧಾನಪಡಿಸಿ ವ್ಯಾಪಾರಕ್ಕಾಗಿ ಹೊರಟುಹೋದನು. ಕಲಾವತಿ ಎಂಬ ಕನ್ಯೆಯು ತಂದೆಯ ಮನೆಯಲ್ಲಿ ಬೆಳೆಯುತ್ತಿದ್ದಳು. ಬಳಿಕ ವರ್ತಕನು ವಿವಾಹ ವಯಸ್ಕಳಾದ ಮಗಳನ್ನು ನೋಡಿ ತನ್ನ ಆಪ್ತರೊಡನೆ ಆಲೋಚಿಸಿ ಅವರ ಧರ್ಮ ಪದ್ಧತಿಯಂತೆ ಚಾರರನ್ನು ಕರೆದು ಜಾಗ್ರತೆಯಾಗಿ ಮಗಳ ವಿವಾಹಕ್ಕಾಗಿ ಅನುರೂಪನಾದ ವರನನ್ನು ಹುಡುಕಿಕೊಂಡು ಬರುವಂತೆ ಕಳುಹಿಸಿದನು. ಈ ರೀತಿ ಆಜ್ಞಾಪಿಸಲ್ಪಟ್ಟ ಚಾರರು ಹೊರಟು ಕಾಂಚನವೆಂಬ ಪಟ್ಟಣವನ್ನು ಸೇರಿ, ಅಲ್ಲಿಂದ ಒಬ್ಬ ವರ್ತಕನ ಕುಮಾರನನ್ನು ಕರೆತಂದರು. ಗುಣಾಢ್ಯನಾಗಿಯೂ, ಸುಂದರನಾಗಿಯೂ, ಬಾಲನಾಗಿಯೂ ಇರುವ ಆ ವರ್ತಕನ ಕುಮಾರನಾದ ವರನನ್ನು ನೋಡಿ ಆನಂದಚಿತ್ತನಾಗಿ ವರನಿಗೆ ತಮ್ಮ ಮಗಳನ್ನು ಧಾರೆ ಎರೆದುಕೊಟ್ಟರು.

ಧನಮದದಿಂದ ಕೂಡಿದ ವರ್ತಕನು ವಿವಾಹ ಕಾಲದಲ್ಲೂ ವ್ರತವನ್ನು ಆಚರಿಸಲಿಲ್ಲ. ಇದರಿಂದ ಸ್ವಾಮಿಗೆ ಅವನಲ್ಲಿ ಕ್ರೋಧ ವುಂಟಾಯಿತು. ಆ ಬಳಿಕ ವ್ಯಾಪಾರದಲ್ಲಿ ಬುದ್ಧಿಶಾಲಿಯಾದ ಆ ವರ್ತಕನು ಕಾಲವಶದಿಂದಲೂ, ಸ್ವಕರ್ಮ ವಶದಿಂದಲೂ ಪ್ರೇರೇಪಿಸಲ್ಪಟ್ಟು ಅಳಿಯನಿಂದೊಡಗೂಡಿ ವ್ಯಾಪಾರಕ್ಕಾಗಿ ಜಾಗ್ರತೆಯಿಂದ ಹೊರಟು ಸಮುದ್ರ ದಡದಲ್ಲಿ ಮನೋಹರವಾದ ರತ್ನಸಾರವೆಂಬ ಪಟ್ಟಣದ ಬಳಿ ಶ್ರೀಮಂತನಾದ ಅಳಿಯನೊಡನೆ ವ್ಯಾಪಾರ ಮಾಡುತ್ತಿದ್ದನು. ಒಂದು ದಿನ ರಮಣೀಯವಾದ ಆ ಪಟ್ಟಣದ ಒಡೆಯನಾದ ಚಂದ್ರಕೇತುವೆಂಬ ರಾಜೇಂದ್ರನ ಗೃಹವನ್ನು ಕುರಿತು ಇವರೀರ್ವರೂ ಹೋಗಲು, ಆ ಕಾಲದಲ್ಲಿ, ಮಾಡಿದ ಪ್ರತಿಜ್ಞೆಯನ್ನು ಮರೆತ ಆ ವರ್ತಕನನ್ನು ನೋಡಿ ಸತ್ಯನಾರಾಯಣ ಸ್ವಾಮಿಯು ''ಎಲೈ ನಿನಗೆ ಸಹಿಸಲಶಕ್ಯವಾದ ಬಹು ದುಃಖ ಉಂಟಾಗಲಿ'' ಎಂದು ಶಾಪವನ್ನಿತ್ತನು.

**ನೀರಾಜನಮಂತ್ರ :**

ಸೋಮೋ ವಾ ಏತಸ್ಯ ರಾಜ್ಯ ಮಾಧತ್ತೇ । ಯೋ ರಾಜಾಸನ್ ರಾಜ್ಯೋವಾ ಸೋಮೇನ ಯಜತೇ । ದೇವಾಸುವಾ ಮೇತಾನಿ ಹವೀಗ್ಂಷಿ ಭವತಿ । ಏತಾವಂತೋ ವೈ ದೇವಾನಾಗ್ಂಸವಾಃ । ತ ಏವಾಸ್ಮೈಸವಾನ್ ಪ್ರಯಚ್ಛಂತಿ ತ ಏವಂ ಪುನಸ್ಸುವಂತೇ ರಾಜ್ಯಾಯ ದೇವಸೂರಾಜಾ ಭವತಿ ॥

ಶ್ರೀ ಸತ್ಯನಾರಾಯಣಸ್ವಾಮಿ ದೇವತಾಭ್ಯೋ ನಮಃ ಮಂಗಳ ನೀರಾಜನಂ ಸಮರ್ಪಯಾಮಿ ॥ಓಂ॥

ಅನೇನ ದ್ವಿತೀಯಾಧ್ಯಾಯ ಕಥಾ ಶ್ರವಣೇನ ಶ್ರೀ ಸತ್ಯನಾರಾಯಣಸ್ವಾಮಿ ಪ್ರೀಯತಾಂ ॥

## ಮೂರನೆಯ ಅಧ್ಯಾಯ

ಸೂತಮುನಿಗಳು ಹೇಳುತ್ತಾರೆ – ಎಲೈ ಮುನಿಶ್ರೇಷ್ಠರೇ ! ಪುನಃ ಶ್ರೀ ಸತ್ಯನಾರಾಯಣ ವ್ರತಮಹಾತ್ಮ್ಯೆಯನ್ನು ಹೇಳುತ್ತೇನೆ ಕೇಳುವಂಥವರಾಗಿ; ಪೂರ್ವಕಾಲದಲ್ಲಿ ಉಲ್ಕಮುಖನೆಂಬ ರಾಜನಿದ್ದನು. ಜಿತೇಂದ್ರಿಯನಾಗಿಯೂ ಸತ್ಯವಾದಿಯಾಗಿಯೂ, ಒಳ್ಳೆಯ ಬುದ್ಧಿಶಾಲಿಯಾಗಿಯೂ ಇದ್ದ ಆತನು ಪ್ರತಿ ದಿವಸವೂ ದೇವಾಲಯಕ್ಕೆ ಹೋಗಿ ದೇವತಾರಾಧನೆ ಮಾಡಿ ಬ್ರಾಹ್ಮಣರಿಗೆ ದ್ರವ್ಯವನ್ನು ಕೊಟ್ಟು ಸಂತೋಷಪಡಿಸುತ್ತಾ ಇದ್ದನು. ಒಂದಾನೊಂದು ಸಮಯದಲ್ಲಿ ಆತನ ಪತ್ನಿಯಾಗಿಯೂ, ಸುಂದರಳಾಗಿಯೂ, ಕಮಲದಂತೆ ಮುಖವುಳ್ಳವಳಾಗಿಯೂ, ಪತಿವ್ರತೆಯೂ ಆದ ಭದ್ರಶೀಲಾ ಎಂಬ ಸ್ತ್ರೀಯು ಪತಿಯುಕ್ತಳಾಗಿ ನದೀತೀರದಲ್ಲಿ ಸತ್ಯನಾರಾಯಣ ವ್ರತವನ್ನು ಮಾಡಿದಳು. ಆ ಸಮಯದಲ್ಲಿ ಅಲ್ಲಿಗೆ ಒಬ್ಬ ವರ್ತಕನು ವ್ಯಾಪಾರಕ್ಕೋಸ್ಕರ ಬಹು ದ್ರವ್ಯಯುಕ್ತನಾಗಿ ಬಂದು, ನಾವೆಯನ್ನು ದಡದಲ್ಲಿ ಬಿಟ್ಟು ರಾಜದರ್ಶನಾರ್ಥಿಯಾಗಿ ಬಂದು, ವ್ರತವನ್ನು ಮಾಡುತ್ತಿರುವ ರಾಜನನ್ನು ಕಂಡು ವಿನಯದಿಂದ ಕೈ ಮುಗಿದು ಕೇಳಿದವನಾದನು.

ಎಲೈ ರಾಜನೇ ! ಭಕ್ತಿಯುಕ್ತನಾಗಿ ಮನಶ್ಶುದ್ಧಿಯಿಂದ ನೀನು ಮಾಡುತ್ತಲಿರುವುದೇನು ? ಆ ಸಮಸ್ತವನ್ನೂ ದಯೆಯಿಂದ ನನಗೆ ಹೇಳಬೇಕೆನ್ನಲು, ರಾಜನು ಹೇಳುತ್ತಾನೆ – ಎಲೈ ವ್ಯಾಪಾರಿಯೇ ! ಬಂಧುಗಳಿಂದದೊಡಗೂಡಿ ಪುತ್ರಾಸಕ್ತನಾದ ನಾನು ಸಕಲ ಇಷ್ಟಾರ್ಥಗಳನ್ನು ಕೊಡುವ ಶ್ರೀ ಸತ್ಯನಾರಾಯಣ ಸ್ವಾಮಿಯ ಪೂಜೆಯನ್ನು ಮಾಡುತ್ತಲಿರುವೆನು ಎಂದು ಹೇಳಿದ ರಾಜನ ಮಾತನ್ನು ಕೇಳಿ, ಎಲೈ ರಾಜನೇ ! ನನಗೂ ಸಂತಾನವಿಲ್ಲದ ಕಾರಣ ಈ ವ್ರತಪ್ರಭಾವದಿಂದ ನಿಶ್ಚಯವಾಗಿ ಸಂತಾನವುಂಟಾಗುವುದೆಂದು ನಂಬಿದ್ದೇನೆಯಾಗಿ ಈ ವ್ರತ ವಿಧಾನವನ್ನು ತಿಳಿಸಬೇಕೆಂದು ಕೋರಿ, ರಾಜನಿಂದ ಆ ವಿಧಾನವನ್ನು ತಿಳಿದುಕೊಂಡು ವ್ಯಾಪಾರದಿಂದ ಹಿಂತಿರುಗಿ

ಬಹು ಸಂತೋಷದಿಂದ ಮನೆಯನ್ನು ಸೇರಿದನು. ಸಂತಾನಪ್ರದವಾದ ಈ ವ್ರತ ಮಹಾತ್ಮೆ ಎಲ್ಲವನ್ನೂ ತನ್ನ ಸತಿಗೆ ಹೇಳಿ, ಯಾವಾಗ ನಮಗೆ ಸಂತಾನಪ್ರಾಪ್ತಿಯಾಗುವುದೋ ಆಗ್ಗೆ ಈ ವ್ರತವನ್ನು ತಪ್ಪದೆ ಮಾಡುವೆನೆಂದು ಹರಸಿಕೊಂಡನು.

ಹೀಗಿರಲು ಒಂದು ದಿನ ಋತುಸ್ನಾತಳಾಗಿ ಲೀಲಾವತಿಯು ಪತಿಯೊಡನೆ ಸಂತೋಷಗೊಂಡಿರಲು, ಶ್ರೀ ಸತ್ಯನಾರಾಯಣಸ್ವಾಮಿ ಪ್ರಭಾವದಿಂದ ಆ ದಿನದಿಂದಲೇ ಗರ್ಭವನ್ನು ಧರಿಸಿ ಹತ್ತನೇ ತಿಂಗಳಲ್ಲಿ ಪುತ್ರಿಕಾರತ್ನವನ್ನು ಪಡೆದಳು. ಶುಕ್ಲಪಕ್ಷದ ಚಂದ್ರನೋಪಾದಿಯಲ್ಲಿ ಆ ಕನ್ಯಾಮಣಿ ದಿನದಿನಕ್ಕೂ ವೃದ್ಧಿಯನ್ನು ಪಡೆಯುತ್ತಾ ಕಲಾವತಿ ಎಂದು ನಾಮಕರಣ ಮಾಡಲ್ಪಟ್ಟಳು. ಆಗ ಲೀಲಾವತಿ ಎಂಬ ವರ್ತಕನ ಭಾರ್ಯೆಯು ಪತಿಯನ್ನು ಪ್ರಿಯವಚನಗಳಿಂದ ಇಂತೆಂದಳು –

ಎಲೈ ಸ್ವಾಮಿಯೇ, ಪೂರ್ವದಲ್ಲಿ ಸಂಕಲ್ಪಿಸಿದ ವ್ರತವನ್ನು ಇನ್ನೂ ಏತಕ್ಕಾಗಿ ಮಾಡಲಿಲ್ಲ ಎನ್ನಲಾಗಿ, ವರ್ತಕನು ಎಲೌ ಪ್ರಿಯಳೇ, ಈಕೆಯ ವಿವಾಹಕಾಲದಲ್ಲಿ ಮಾಡುವೆನೆಂದು ಸತಿಯನ್ನು ಸಮಾಧಾನಪಡಿಸಿ ವ್ಯಾಪಾರಕ್ಕಾಗಿ ಹೊರಟುಹೋದನು. ಕಲಾವತಿ ಎಂಬ ಕನ್ಯೆಯು ತಂದೆಯ ಮನೆಯಲ್ಲಿ ಬೆಳೆಯುತ್ತಿದ್ದಳು. ಬಳಿಕ ವರ್ತಕನು ವಿವಾಹ ವಯಸ್ಕಳಾದ ಮಗಳನ್ನು ನೋಡಿ ತನ್ನ ಆಪ್ತರೊಡನೆ ಆಲೋಚಿಸಿ ಅವರ ಧರ್ಮ ಪದ್ಧತಿಯಂತೆ ಚಾರರನ್ನು ಕರೆದು ಜಾಗ್ರತೆಯಾಗಿ ಮಗಳ ವಿವಾಹಕ್ಕಾಗಿ ಅನುರೂಪನಾದ ವರನನ್ನು ಹುಡುಕಿಕೊಂಡು ಬರುವಂತೆ ಕಳುಹಿಸಿದನು. ಈ ರೀತಿ ಆಜ್ಞಾಪಿಸಲ್ಪಟ್ಟ ಚಾರರು ಹೊರಟು ಕಾಂಚನವೆಂಬ ಪಟ್ಟಣವನ್ನು ಸೇರಿ, ಅಲ್ಲಿಂದ ಒಬ್ಬ ವರ್ತಕನ ಕುಮಾರನನ್ನು ಕರೆತಂದರು. ಗುಣಾಢ್ಯನಾಗಿಯೂ, ಸುಂದರನಾಗಿಯೂ, ಬಾಲನಾಗಿಯೂ ಇರುವ ಆ ವರ್ತಕನ ಕುಮಾರನಾದ ವರನನ್ನು ನೋಡಿ ಆನಂದಚಿತ್ತನಾಗಿ ವರನಿಗೆ ತಮ್ಮ ಮಗಳನ್ನು ಧಾರೆ ಎರೆದುಕೊಟ್ಟರು.

ಧನಮದದಿಂದ ಕೂಡಿದ ವರ್ತಕನು ವಿವಾಹ ಕಾಲದಲ್ಲೂ ವ್ರತವನ್ನು ಆಚರಿಸಲಿಲ್ಲ. ಇದರಿಂದ ಸ್ವಾಮಿಗೆ ಅವನಲ್ಲಿ ಕ್ರೋಧ ವುಂಟಾಯಿತು. ಆ ಬಳಿಕ ವ್ಯಾಪಾರದಲ್ಲಿ ಬುದ್ಧಿಶಾಲಿಯಾದ ಆ ವರ್ತಕನು ಕಾಲವಶದಿಂದಲೂ, ಸ್ವಕರ್ಮ ವಶದಿಂದಲೂ ಪ್ರೇರೇಪಿಸಲ್ಪಟ್ಟು ಅಳಿಯನಿಂದೊಡಗೂಡಿ ವ್ಯಾಪಾರಕ್ಕಾಗಿ ಜಾಗ್ರತೆಯಿಂದ ಹೊರಟು ಸಮುದ್ರ ದಡದಲ್ಲಿ ಮನೋಹರವಾದ ರತ್ನಸಾರವೆಂಬ ಪಟ್ಟಣದ ಬಳಿ ಶ್ರೀಮಂತನಾದ ಅಳಿಯನೊಡನೆ ವ್ಯಾಪಾರ ಮಾಡುತ್ತಿದ್ದನು. ಒಂದು ದಿನ ರಮಣೀಯವಾದ ಆ ಪಟ್ಟಣದ ಒಡೆಯನಾದ ಚಂದ್ರಕೇತುವೆಂಬ ರಾಜೇಂದ್ರನ ಗೃಹವನ್ನು ಕುರಿತು ಇವರೀರ್ವರೂ ಹೋಗಲು, ಆ ಕಾಲದಲ್ಲಿ, ಮಾಡಿದ ಪ್ರತಿಜ್ಞೆಯನ್ನು ಮರೆತ ಆ ವರ್ತಕನನ್ನು ನೋಡಿ ಸತ್ಯನಾರಾಯಣ ಸ್ವಾಮಿಯು ''ಎಲೈ ನಿನಗೆ ಸಹಿಸಲಶಕ್ಯವಾದ ಬಹು ದುಃಖ ಉಂಟಾಗಲಿ'' ಎಂದು ಶಾಪವನ್ನಿತ್ತನು.

ಒಂದು ದಿನ ಕಳ್ಳರು ರಾಜದ್ರವ್ಯವನ್ನಪಹರಿಸಿ ಆ ವರ್ತಕರಿರುವ ಪ್ರದೇಶದ ಕಡೆಗೆ ಬರುತ್ತಿದ್ದರು. ಅಷ್ಟರಲ್ಲಿಯೇ ರಾಜಭಟರು ಕಳ್ಳರನ್ನು ಹುಡುಕುತ್ತಾ ಬರುತ್ತಿರುವುದನ್ನು ಈಚೋರರು ಕಂಡು ಬಹು ಭಯವನನು ಹೊಂದಿ ಅಲ್ಲಿಯೇ ದ್ರವ್ಯವನ್ನು ಬಿಟ್ಟು ಕಣ್ಣಿಗೆ ಕಾಣದೆ ಓಡಿ ಹೋದರು. ಆಗ ರಾಜಭಟರು ಈ ವರ್ತಕರ ಬಳಿಗೆ ಬಂದು ಅಲ್ಲಿ ರಾಜಧನವಿರುವುದನ್ನು ಕಂಡು, ಇವರೇ ಚೋರರೆಂದು ಅವರೀರ್ವರನ್ನೂ ಹಗ್ಗಗಳಿಂದ ಕಟ್ಟಿ ಕಳ್ಳರು ಸಿಕ್ಕಿದರೆಂಬ ಸಂತೋಷದಿಂದ ಎಳೆಯುತ್ತಾ ರಾಜನ ಸಮೀಪವನ್ನು ಹೊಂದಿ ಇಂತೆಂದರು – ಎಲೈ ಪ್ರಭುವೇ ! ದ್ರವ್ಯ ಸಮೇತರಾದ ಇಬ್ಬರು ಕಳ್ಳರನ್ನು ಬಂಧಿಸಿರುತ್ತೇವೆ. ವಿಚಾರಿಸಿ ಶಿಕ್ಷೆಯನ್ನು ಅಪ್ಪಣೆಕೊಡಿಸ ಬೇಕೆಂಬುದಾಗಿ ಹೇಳಲು, ಬಳಿಕ ವರ್ತಕರೀರ್ವರೂ ವಿಚಾರಣೆ ಇಲ್ಲದೇನೆ ರಾಜಾಜ್ಞೆಯಂತೆ ಹಗ್ಗಗಳಿಂದ ಕಟ್ಟಲ್ಪಟ್ಟು, ಕಾರಾಗೃಹದಲ್ಲಿ ಇರಿಸಲ್ಪಟ್ಟರು. ಶ್ರೀ ಸತ್ಯನಾರಾಯಣಸ್ವಾಮಿಯ ಮಹಿಮೆಯಿಂದ ಇವರಾಡುವ ಮಾತುಗಳು ಯಾರಿಗೂ ಕೇಳಿಸುತ್ತಿರಲಿಲ್ಲ. ಚಂದ್ರಕೇತುವೆಂಬ ರಾಜನಿಂದ ಇವರಲ್ಲಿದ್ದ ಸಂಪತ್ತು ಗ್ರಹಿಸಲ್ಪಟ್ಟಿತು. ಇದಲ್ಲದೆ ಸ್ವಾಮಿಯ ಶಾಪದಿಂದ ಅವರ ಮನೆಗಳಲ್ಲಿ ಹೆಂಗಸರಿಗೆ ಬಹು ವ್ಯಸನವುಂಟಾಯಿತು. ಮನೆಯಲ್ಲಿದ್ದ ದ್ರವ್ಯವೆಲ್ಲವೂ ಕಳ್ಳರಿಂದ ಅಪಹರಿಸಲ್ಪಟ್ಟಿತು. ಆದಿವ್ಯಾಧಿಗಳಿಂದಲೂ, ಹಸಿವು ಬಾಯಾರಿಕೆಗಳಿಂದಲೂ, ಅನ್ನಾಂಕಾಂಕ್ಷಿಗಳಾಗಿ ವರ್ತಕರ ಭಾರ್ಯೆಯರು ಆಹಾರಕ್ಕಾಗಿ ಮನೆಮನೆಗಳನ್ನು ಸುತ್ತುತ್ತಿದ್ದರು. ಒಂದು ದಿನ ಕಲಾವತಿಯೆಂಬ ಆ ಕನ್ಯೆಯು ಕ್ಷುಧಾರ್ತಳಾಗಿ ಒಬ್ಬ ಬ್ರಾಹ್ಮಣನ ಮನೆಯನ್ನು ಹೊಂದಿ, ಅಲ್ಲಿ ಸತ್ಯನಾರಾಯಣ ವ್ರತವನ್ನು ಮಾಡುತ್ತಿದ್ದ ಅವರನ್ನು ಕಂಡು, ಪೂಜೆಯಾಗುವವರೆಗೂ ಅಲ್ಲಿಯೇ ಇದ್ದು ಸ್ವಾಮಿಗೆ ಹರಿಸಿಕೊಂಡು ಪ್ರಸಾದವನ್ನು ಭಕ್ಷಿಸಿ ರಾತ್ರಿಯನ್ನು ಕಳೆದು ತನ್ನ ಮನೆಯನ್ನು ಸೇರಿದಳು. ತಾಯಿಯು ಕಲಾವತಿಯುನ್ನು ಕಂಡು ಅತಿ ಪ್ರೀತಿಯಿಂದ ಮಗಳೇ ರಾತ್ರಿ ಎಲ್ಲಿದ್ದೆ ? ನಿನ್ನ ಮನಸ್ಸಿನಲ್ಲಿರುವುದನ್ನು ಹೇಳು ಎನ್ನಲು ಕಲಾವತಿಯು ತಾಯಿಯನ್ನು ಕಂಡು ಎಲೈ ತಾಯಿಯೇ ! ಒಬ್ಬ ಬ್ರಾಹ್ಮಣನು ಗೃಹದಲ್ಲಿ ಇಷ್ಟಾರ್ಥವನ್ನುಂಟು ಮಾಡುವ ಸತ್ಯನಾರಾಯಣ ವ್ರತವನ್ನು ಮಾಡುತ್ತಿದ್ದನು. ಅದನ್ನು ನೋಡುತ್ತಿದ್ದೆನು ಎಂದು ಹೇಳಿದ ಮಗಳ ಮಾತನ್ನು ಕೇಳಿ ಆ ವ್ರತವನ್ನು ಮಾಡಲು ತಾನೂ ಯತ್ನಿಸಿ ಬಹು ಸಂತೋಷದೊಡನೆ ಇಷ್ಟಮಿತ್ರಬಂಧುಗಳಿಂದೊಡಗೂಡಿ ವರ್ತಕನ ಭಾರ್ಯೆ ಲೀಲಾವತಿಯು ಸತ್ಯನಾರಾಯಣ ವ್ರತವನ್ನು ಮಾಡಿ, ಎಲೈ ಸ್ವಾಮಿಯೇ ? ನನ್ನ ಪತ್ನಿಯೂ, ಅಳಿಯನೂ ಜಾಗ್ರತೆಯಾಗಿ ಬರುವಂತೆ ಅನುಗ್ರಹಿಸಿ, ನನ್ನ ಪತಿಯ ಮತ್ತು ಅಳಿಯನ ಅಪರಾಧಗಳನ್ನು ಕ್ಷಮಿಸು ಎಂಬುದಾಗಿ ಹರಸಿಕೊಂಡಳು.

ವ್ರತವನ್ನು ಮಾಡಿದ್ದರಿಂದ ಸಂತುಷ್ಟನಾದ ಸತ್ಯನಾರಾಯಣ ಸ್ವಾಮಿಯು ಚಂದ್ರಕೇತುವೆಂಬ ರಾಜನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು, ಎಲೈ ರಾಜನೇ ! ನಾಳೆ ಪ್ರಾತಃಕಾಲದಲ್ಲಿ ನೀನು ಬಂಧನದಲ್ಲಿಟ್ಟಿರುವ ವರ್ತಕರು ನಿನ್ನಿಂದ ಗ್ರಹಿಸಲ್ಪಟ್ಟಿರುವ

ಅವರ ದ್ರವ್ಯದೊಡನೆ ಬಿಡಲ್ಪಡಲಿ; ಇಲ್ಲದಿದ್ದರೆ ರಾಜ್ಯ, ಧನ, ಪುತ್ರಸಮೇತನಾದ ನಿನ್ನನ್ನು ನಾಶಮಾಡುತ್ತೇನೆಂದು ಹೇಳಿ ಅಂತರ್ಧಾನವನ್ನು ಹೊಂದಿದನು. ಆ ಮಾರನೇ ದಿನ ರಾಜನು ಸಿಂಹಾಸನಾರೂಢನಾಗಿ ಸಭಾಜನರಿಗೆ ತನ್ನ ಸ್ವಪ್ನ ವೃತ್ತಾಂತವನ್ನು ತಿಳಿಸಿ, ಬಂಧನದೊಳಿರುವ ವರ್ತಕರನ್ನು ಜಾಗ್ರತೆಯಿಂದ ಬಿಡುಗಡೆ ಮಾಡುವಂತೆ ಆಜ್ಞಾಪಿಸಿದನು. ರಾಜಾಜ್ಞೆಯಂತೆ ಸೇವಕರು ಬಂಧನಗೃಹದಿಂದ ಅವರನ್ನು ರಾಜನ ಸಮೀಪಕ್ಕೆ ಕರೆತಂದು ನಿಲ್ಲಿಸಿ ಪ್ರಭುವೇ ? ಅಪ್ಪಣೆಯಂತೆ ನಡೆಸಿದ್ದೇವೆ ಎಂದು ವಿನಯಪೂರ್ವಕವಾಗಿ ನುಡಿದು ಪೂರ್ಣವೃತ್ತಾಂತವನ್ನು ಸ್ಮರಿಸಿ ಹೇಳಲು ಭಯಾತುರರಾಗಿರಲು ರಾಜನು ವರ್ತಕರನ್ನು ಕುರಿತು ವಿಶ್ವಾಸದೊಡನೆ ಇಂತೆಂದನು.

ಎಲೈ ವರ್ತಕರೇ ! ದೈವಯತ್ನದಿಂದ ನಿಮಗೆ ಈ ದುಃಖವು ಪ್ರಾಪ್ತವಾಯಿತು. ಇನ್ನು ನೀವು ಭಯಪಡಬೇಕಾದ್ದಿಲ್ಲವೆಂದು ಹೇಳಿ ಅವರ ಸಂಕೋಲೆಗಳನ್ನು ತೆಗೆಸಿ ವಸ್ತ್ರಾಭರಣಗಳಿಂದಲಂಕರಿಸಿ, ಸಂತೋಷಗೊಳಿಸಿ ಪೂರ್ವದಲ್ಲಿ ಅಪಹರಿಸಿದ್ದ ಅವರ ದ್ರವ್ಯಕ್ಕೆ ಎರಡರಷ್ಟು ದ್ರವ್ಯವನ್ನು ಕೊಟ್ಟು, ವರ್ತಕರೇ ! ಸಂತೋಷದೊಡನೆ ಇನ್ನು ನಿಮ್ಮ ಸ್ಥಳಕ್ಕೆ ಹೋಗಿ ಬನ್ನಿ ಎನ್ನಲು, ವರ್ತಕರು ರಾಜನಿಗೆ ನಮಸ್ಕರಿಸಿ ಹೋಗಿಬರುವೆವೆಂದು ನುಡಿದು ಸ್ವಸ್ಥಾನವನ್ನು ಕುರಿತು ಹೊರಡಲು ಯತ್ನಿಸಿದರು ಎಂದು ಸೂತಮುನಿಗಳು ಶೌನಕಾದಿಗಳಿಗೆ ಹೇಳಿದರು.

ಮೂರನೇ ಅಧ್ಯಾಯ ಸಮಾಪ್ತವಾದುದು.

*(ದೇವರಿಗೆ ಹಣ್ಣು ಅಥವಾ ಕಾಯಿ ನೈವೇದ್ಯ ಮಾಡಿ ಕರ್ಪೂರಾರತಿ ಬೆಳಗಬೇಕು).

**ನೀರಾಜನಮಂತ್ರ :**

ಓಂ ಸಾಂಗ್ರಹಣ್ಯೇಷ್ಟ್ಯಾಯಜತೇ । ಇಮಾಂಜನತಾಗ್ಂ ಸಂಗೃಹ್ಣಾ ನೀತಿ । ದ್ವಾರಶಾರತ್ನೀ ರಶನಾ ಭವತಿ । ದ್ವಾದಶಮಾಸಾ ಸಂವತ್ಸರಃ ಸಂವತ್ಸರ ಮೇವಾ ವರುಂಧೇ । ಮೌಂಜೀ ಭವತಿ । ಊರ್ಗ್ವೈ ಮುಂಜಾಃ । ಊರ್ಜ ಮೇವಾವರುಂಧೇ ಚಿತ್ರಾ ನಕ್ಷತ್ರಂ ಭವತಿ । ಚಿತ್ರಂ ವಾ ಏತತ್ಕರ್ಮ । ಯಶ್ವಮೇಧಸ್ಸಮೃದ್ಧ್ಯೈ ॥ ಶ್ರೀ ಸತ್ಯನಾರಾಯಣ ಸ್ವಾಮಿ ದೇವತಾಭ್ಯೋ ನಮಃ ಮಂಗಳಂ ನೀರಾಜನಂ ಸಮರ್ಪಯಾಮಿ ॥ ॥ಓಂ ತತ್ಸತ್॥

ಅನೇನ ತೃತೀಯಾಧ್ಯಾಯ ಕಥಾಶ್ರವಣೇನ ಶ್ರೀ ಸತ್ಯನಾರಾಯಣಸ್ವಾಮಿ ಪ್ರೀಯತಾಂ ॥

॥ಧರ್ಮಸ್ಯವಿಜಯೋ ಭೂಯತ್ ॥

ಅತಿ ಶೋಕದಿಂದ ಸಂತಪ್ತರಾಗಿ ಆಲೋಚನೆ ಮಾಡುವಂಥವರಾದರು. ಈ ಹಡಗು ಅದೃಶ್ಯವಾಗಿರುವುದು; ಸತ್ಯನಾರಾಯಣನೇ ಮಾಡಿದ್ದಾನೆ, ಅಥವಾ ನಾನು ಸತ್ಯನಾರಾಯಣ ದೇವರ ಮಾಯಾಪಾಶದಿಂದ ಭ್ರಾಂತನಾಗಿ ಇರುವೆನೋ ಏನೋ ? ಇದು ಯಾವುದೂ ತಿಳಿಯದು ಎಂದು ಹೇಳಿ ಸಮಸ್ತರಿಗೂ ತಿಳಿಸಿದವನಾಗಿ ಇವರುಗಳ ಸಮಕ್ಷಮದಲ್ಲಿ ತನ್ನ ಮನೋರಥವನ್ನು ಪ್ರಕಟಣೆ ಮಾಡಿ ಹೇಳುತ್ತೇನೆ. ನಾನು ಆಪದ್ಬಾಂಧವನಾದ ಸತ್ಯನಾರಾಯಣ ದೇವರ ಪೂಜೆ ಮಾಡುತ್ತೇನೆ. ಹೀಗೆ ಪ್ರಾರ್ಥನಾ ವಚನವನ್ನು ಹೇಳಿ ಸತ್ಯನಾರಾಯಣನಿಗೆ ಪುನಃ ಭೂಮಿಯ ಮೇಲೆ ದೀರ್ಘವಾಗಿ ನಮಸ್ಕಾರವನ್ನು ಮಾಡಿದನು. ಆಗ ದೀನಪಾಲಕನಾದ ಸತ್ಯನಾರಾಯಣನು ಸಂತುಷ್ಟನಾದನು. ತದನಂತರ ಭಕ್ತವತ್ಸಲನಾದ ಸತ್ಯನಾರಾಯಣನ ಕೃಪೆಯಿಂದ ಆಕಾಶವಾಣಿ ನುಡಿದದ್ದೇನೆಂದರೆ –

ಎಲೈ ವೈಶ್ಯನೇ, ನಿನ್ನ ಮಗಳು ಪ್ರಸಾದತ್ಯಾಗ ಮಾಡಿ ತನ್ನ ಪತಿಯನ್ನು ನೋಡಲು ಬರುವಂಥಾವಳಾದಳು. ಆದ್ದರಿಂದ ಈ ನಿಮ್ಮ ಮಗಳ ಪತಿ ನಿಶ್ಚಯವಾಗಿ ಅದೃಶ್ಯವಾಗಿದ್ದಾನೆ. ಇದಕ್ಕೋಸ್ಕರ ಮನೆಗೆ ಹೋಗಿ ಸ್ವಲ್ಪವಾದರೂ ಪ್ರಸಾದ ಭಕ್ಷಣೆ ಮಾಡಿ ಪುನಃ ಬಂದಳಾದರೆ ಪತಿಯನ್ನು ಹೊಂದುವಳು. ಕಲಾವತಿಯು ಹೀಗೆ ಹೇಳಿದಂಥಾ ಆಕಾಶವಾಣಿಯ ವಾಕ್ಯವನ್ನು ಕೇಳದವಳಾಗಿ ಅತಿ ತ್ವರೆಯಿಂದ ಸ್ವಗೃಹಕ್ಕೆ ಹೋಗಿ ಪ್ರಸಾದ ಭಕ್ಷಣೆಯನ್ನು ಮಾಡಿ ಯಥಾಪ್ರಕಾರ ಅಲ್ಲಿಗೆ ಬರುವಂಥಾಕೆಯಾಗಿ ಪತಿಯನ್ನು ನೋಡಿದವಳಾಗಲು, ಆಗ ಅಲ್ಲಿದ್ದ ಜನರುಗಳು ಮೊದಲಾಗಿ ತನ್ನ ಪತಿಯು ಸಹಾ ದೃಷ್ಟಿಗೆ ಗೋಚರವಾಗುವಂಥಾವರಾದರು. ಅನಂತರದಲ್ಲಿ ಕಲಾವತಿಯು ಆನಂದದಿಂದ ತನ್ನ ತಂದೆಯನ್ನು ಕುರಿತು ಈ ರೀತಿ ಹೇಳಿದಳು – ಎಲೈ ತಂದೆಯೇ ! ಈ ಮನೆಗೆ ಹೋಗೋಣ ನಡೆಯಿರಿ, ವಿಳಂಬ ಏತಕ್ಕೆ ಮಾಡುತ್ತೀರಿ ? ಈ ಪ್ರಕಾರ ಹೇಳಿದಂಥಾ ಮಗಳ ವಾಕ್ಯವನ್ನು ಕೇಳಿ ಆ ವೈಶ್ಯನಿಗೆ ಬಹಳ ಸಂತೋಷವುಂಟಾಯಿತು. ಅನಂತರ ಯಥಾವಿಧಿಯುಕ್ತವಾಗಿ ಶ್ರೀ ಸತ್ಯನಾರಾಯಣ ದೇವರ ಪೂಜೆ ಮಾಡಿ ತನ್ನ ಬಂಧುವರ್ಗ ಧನಸಹಿತನಾಗಿ ತನ್ನ ಗೃಹವನ್ನು ಕುರಿತು ಹೋಗುವಂಥಾವನಾದನು; ಮತ್ತು ಪ್ರತಿಮಾಸದಲ್ಲೂ ಪೌರ್ಣಮಾ ಸಕ್ರಾಂತಿ ಈ ವರ್ಷಕಾಲದಲ್ಲಿ ಸತ್ಯನಾರಾಯಣ ಪೂಜೆಯನ್ನು ಮಾಡುವಂಥಾವನಾದನು. ಈ ಪ್ರಕಾರ ಅವನು ವಿಧಿಯುಕ್ತ ಸತ್ಯನಾರಾಯಣ ವ್ರತಾಚರಣೆಯನ್ನು ಮಾಡಿ ಈ ಮರ್ತ್ಯಲೋಕದಲ್ಲಿ ಸಕಲ ಸುಖಗಳನ್ನು ಅನುಭವಿಸಿ ಅಂತ್ಯಕಾಲದಲ್ಲಿ ಸತ್ಯಲೋಕವನ್ನು ಹೊಂದಿದನು ಎಂಬುದಾಗಿ ಸೂತಪುರಾಣಿಕರು ಶೌನಕಾದಿ ಋಷಿಗಳಿಗೆ ನಿರೂಪಣೆ ಮಾಡಿದರು.

### ನಾಲ್ಕನೇ ಅಧ್ಯಾಯ ಸಮಾಪ್ತಿ

*(ದೇವರಿಗೆ ಹಣ್ಣು ಅಥವಾ ಕಾಯಿ ನೈವೇದ್ಯ ಮಾಡಿ ಕರ್ಪೂರಾರತಿ ಬೆಳಗಬೇಕು).

**ನೀರಾಜನಮಂತ್ರ :**

ಓಂ ಹಿರಣ್ಯಪಾತ್ರಂ ಮಧೋಃ ಪೂರ್ಣಂ ದಧಾತಿ । ಮಧುವ್ಯೋಽಸಾನೀತಿ । ಏಕಧಾ (ಬ್ರಹ್ಮಣ) ಮುಹ್ಮಣ ಉಪಹರತಿ । ಏಕದೈವ ಯಜಮಾನ ಆಯುಸ್ತೇಜೋ ದಧಾತಿ ॥ ಶ್ರೀ ಸತ್ಯನಾರಾಯಣ ಸ್ವಾಮಿ ದೇವತಾಭ್ಯೋ ನಮಃ ಮಂಗಳ ನೀರಾಜನಂ ಸಮರ್ಪಯಾಮಿ ॥ ॥ಶ್ರೀರಸ್ತು॥ ॥ಶುಭಂ ಭವತು॥

ಅನೇನ ಚತುರ್ಥಾಧ್ಯಾಯ ಕಥಾ ಶ್ರವಣೇನ ಶ್ರೀ ಸತ್ಯನಾರಾಯಣಸ್ವಾಮಿ ಪ್ರೀಯತಾಂ ॥



## ಐದನೆಯ ಅಧ್ಯಾಯ

ಸೂತಪುರಾಣಿಕರು ಹೇಳುವಂಥಾವರಾಗುತ್ತಾರೆ – ಎಲೈ ಶೌನಕಾದಿ ಋಷಿಗಳಿರಾ ! ಕೇಳಿರಿ. ನಾನು ನಿಮಗೆ ಎರಡನೆಯ ಸಲ ಇನ್ನೂ ಒಂದು ಇತಿಹಾಸ ಹೇಳುವೆನು. ಪೂರ್ವದಲ್ಲಿ ಅಂಗಧ್ವಜನೆಂಬ ರಾಜನು ಪ್ರಜಾಪಾಲನೆಯಲ್ಲಿ ಅತ್ಯಾದರವುಳ್ಳವನಾಗಿದ್ದನು. ಆ ರಾಜನು ಸತ್ಯನಾರಾಯಣ ಪ್ರಸಾದ ತ್ಯಾಗ ಮಾಡಿದ್ದರೆ ದೆಸೆಯಿಂದ ಅತಿಯಾದ ಖವನ್ನು ಹೊಂದುವಂಥಾವನಾದನು. ಹೇಗೆಂದರೆ – ಒಂದಾನೊಂದು ಸಮಯದಲ್ಲಿ ಆ ರಾಜನು ಅರಣ್ಯಕ್ಕೆ ಹೋಗುವಂಥಾವನಾಗಿ ಸಿಂಹ, ವ್ಯಾಘ್ರಾದಿ ಅನೇಕ ಪ್ರಕಾರವಾದ ಮೃಗಗಳನ್ನು ಸಂಹಾರಮಾಡಿ ತನ್ನ ನಗರ ಸಮೀಪವಾದ ಒಂದು ವಟವೃಕ್ಷದ ಸಮೀಪದಲ್ಲಿ ಒಂದು ನಿಲ್ಲುವವನಾದನು. ಅಲ್ಲಿ ಗೋಪಾಲಕರು ತಮ್ಮ ಬಂಧುಗಳಿಂದ ಕೂಡಿ ಸಂತುಷ್ಟ ರಾದವರಾಗಿ ಭಕ್ತಿಯುಕ್ತ ಅಂತಃಕರಣವುಳ್ಳವರಾಗಿ ಶ್ರೀ ಸತ್ಯನಾರಾಯಣ ಪೂಜೆಯನ್ನು ಮಾಡುತ್ತಿದ್ದರು. ಇದನ್ನು ನೋಡಿದವನಾದ ಈ ರಾಜನು ಗರ್ವದೆಶೆ ಯಿಂದ ಅಲ್ಲಿಗೆ ಹೋಗಲೂ ಇಲ್ಲ ಮತ್ತು ಆ ಸತ್ಯನಾರಾಯಣನನ್ನು ಕುರಿತು ನಮಸ್ಕಾರವನ್ನೂ ಮಾಡಲಿಲ್ಲ.

ಹೀಗಾದಾಗ್ಯೂ ಸಮಸ್ತ ಗೋಪಾಲಕರೆಲ್ಲರೂ ಸತ್ಯನಾರಾಯಣ ಪ್ರಸಾದವನ್ನು ರಾಜನ ಮುಂದಿಟ್ಟು ಪುನಃ ಆ ಗೋಪಾಲಕರು ಯಥಾಸ್ಥಾನಕ್ಕೆ ಬರುವಂಥರಾದರು ಮತ್ತು ಯಥೇಚ್ಛ ಭೋಜನವನ್ನು ಮಾಡಿ ಅಲ್ಲೇ ಇರುವಂಥಾವರಾದರು. ಅನಂತರ ರಾಜನು ಪ್ರಸಾದ ಪರಿತ್ಯಾಗವನ್ನು ಮಾಡಿದ ಕಾರಣ ಅತಿ ದುಃಖವನ್ನು ಹೊಂದುವಂಥಾವನಾದನು. ಆ ರಾಜನ ನೂರು ಮಂದಿ ಮಕ್ಕಳು ಧನಧಾನ್ಯ ಮೊದಲಾದ ಐಶ್ವರ್ಯವೆಲ್ಲವೂ ನಾಶಹೊಂದುವಂಥಾದ್ದಾಯಿತು. ಆಗ ಅವನು ಯೋಚನೆ ಮಾಡಿದ್ದೇನೆಂದರೆ – ಇದು ಸಕಲವೂ ಸತ್ಯನಾರಾಯಣ ದೇವರು ನಷ್ಟ ಮಾಡಿರಬಹುದು, ಅಂಥಾ ಯಾವ ಸ್ಥಳದಲ್ಲಿ ಸತ್ಯದೇವರ ಪೂಜೆ ಆಯಿತೋ, ಆ ಸ್ಥಳಕ್ಕೆ ಪುನಃ ನಾನು ಹೋಗುವೆನೆಂದು ಮನೋನಿಶ್ಚಯ ಮಾಡಿ ಗೋಪಾಲಕರ ಸಮೀಪಕ್ಕೆ ಹೋಗುವಂಥವನಾಗಿ ರಾಜನು ಗೋಪಾಲಕರ ಸಹಿತನಾಗಿ ಭಕ್ತಿ ಮತ್ತು ಶ್ರದ್ಧಾಯುಕ್ತನಾಗಿ ಯಥಾವಿಧಿಯಿಂದ ಸತ್ಯನಾರಾಯಣ ದೇವರ ಪೂಜೆಯನ್ನು ಮಾಡುವಂಥಾವನಾದನು. ಅನಂತರ ಆ

## ನಾಲ್ಕನೆಯ ಅಧ್ಯಾಯ

ಪುನಃ ಸೂತರು ಶೌನಕಾದಿಗಳನ್ನು ಕಂಡು ಎಲೈ ಋಷಿಗಳಿರಾ ! ನಂತರ ವೈಶ್ಯನು ಅಳಿಯನೊಡನೆ ಮಂಗಳಸ್ನಾನ ಮಾಡಿ ನಿತ್ಯಕರ್ಮಗಳನ್ನು ಪೂರೈಸಿ ಬ್ರಾಹ್ಮಣರಿಗೆ ದ್ರವ್ಯ ವನ್ನು ದಾನಮಾಡಿ ಸ್ವಗ್ರಾಮವನ್ನು ಕುರಿತು ತೆರಳಿದನು. ಸ್ವಲ್ಪ ದೂರ ಹೋಗುವಷ್ಟರಲ್ಲಿಯೇ ಸತ್ಯನಾರಾಯಣಸ್ವಾಮಿಯು ಸನ್ಯಾಸಿ ವೇಷಧಾರಿಯಾಗಿ ಬಂದು ಎಲೈ ವರ್ತಕನೇ ! ನಿನ್ನ ಹಡಗಿನಲ್ಲಿರುವುದೇನೆಂದು ಕೇಳಿದನು. ಧನಮದಾಂಧರಾದ ವರ್ತಕರು ಹೀಯಾಳಿಸುವುದರಿಂದಲೂ, ಹಾಸ್ಯದಿಂದಲೂ, ಎಲೈ ಸನ್ಯಾಸಿಯೇ ನೀನು ಏತಕ್ಕೆ ಕೇಳುವೆ ? ಹಣವಿರುವುದೆಂಬ ಭ್ರಾಂತಿಯಿಂದ ಅಪಹರಿಸಲು ಕೇಳುವಿಯೋ ? ನಮ್ಮ ಹಡಗಿನಲ್ಲಿ ಎಲೆ ಬಳ್ಳಿಗಳಿರುವುದು, ಮತ್ತೇನೂ ಇಲ್ಲವು ಎನ್ನಲು, ಈ ರೀತಿ ನುಡಿದ ಅಸತ್ಯ ವಾಕ್ಯವನ್ನು ಕೇಳಿ ಸ್ವಾಮಿಯು ನಿಮ್ಮ ಮಾತು ಯತಾರ್ಥವಾಗಲಿ ಎಂದು ಹೇಳಿ ಹೊರಟು ಹೋಗಲು, ವರ್ತಕರು ಸ್ವಲ್ಪದೂರ ಪ್ರಯಾಣ ಮಾಡಿ ಸಮುದ್ರ ದಡದಲ್ಲಿ ಸೇರಿದ ಮೇಲೆ, ನಿತ್ಯಕರ್ಮಗಳನ್ನು ಮುಗಿಸಿಕೊಂಡು ಪುನಃ ಹಡಗನ್ನು ಹತ್ತಿದಾಗ, ಅದರಲ್ಲಿರುವ ಎಲೆ ಬಳ್ಳಿಗಳನ್ನು ಕಂಡು ಮಾವನು ದುಃಖದಿಂದ ಹಾಗೆಯೇ ಮೂರ್ಛೆ ಹೋದನು.

ಪುನಃ ಎಚ್ಚೆತ್ತವನಾಗಿ ದ್ರವ್ಯ ಹೋದ ದುಃಖದಿಂದ ಪ್ರಲಾಪಿಸುತ್ತಿರುವ ಮಾವನನ್ನು ಕಂಡು ಅಳಿಯನು ಇಂತೆಂದನು; ಎಲೈ ಮಾವನೇ ! ಏಕೆ ವ್ಯಸನಪಡುತ್ತೀಯೆ, ಸನ್ಯಾಸಿಯಿಂದ ಶಾಪ ಕೊಡಲ್ಪಟ್ಟಿತು. ಆದುದರಿಂದಲೇ ನಮ್ಮ ಪದಾರ್ಥವೆಲ್ಲವೂ ಈ ರೀತಿಯಾಯಿತು. ಆತನಿಗೆ ನಾವು ಶರಣಾಗತರಾದಲ್ಲಿ ನಮ್ಮ ಉದ್ದೇಶವು ನೆರವೇರುವುದು ಎಂದು ಹೇಳಿದ ಅಳಿಯನ ಮಾತನ್ನು ಕೇಳಿ ಪುನಃ ಸನ್ಯಾಸಿಯ ಸಮೀಪಕ್ಕೆ ಹೋಗಿ ಭಕ್ತಿಯಿಂದ ನಮಸ್ಕಾರ ಮಾಡಿ ದೀನನಾಗಿಂತೆಂದನು. ಎಲೇ ಯತಿಶ್ರೇಷ್ಠನೇ ! ಪೂರ್ವದಲ್ಲಿ ನಿನ್ನೊಡನೆ ಯಾವ ಅಸತ್ಯವು ನನ್ನಿಂದ ಹೇಳಲ್ಪಟ್ಟಿತೋ ಅಂಥಾ ಅಪರಾಧವನ್ನು ಕ್ಷಮಿಸು ಎಂಬುದಾಗಿ ನಮಸ್ಕರಿಸಿ ಚಿಂತಾಕ್ರಾಂತನಾದನು. ಆಗ ಯತಿಯು ದುಃಖಿಸುತ್ತಲಿರುವ ವರ್ತಕರನ್ನು ನೋಡಿ ಪ್ರಸನ್ನನಾಗಿ ನಿಜರೂಪ ತೋರಿ, ಎಲೈ ದುರ್ಬುದ್ಧಿಯೇ ! ಈ ನನ್ನ ಮಾತನ್ನು ಕೇಳು, ದುಃಖಿಸಬೇಡ; ನನ್ನನ್ನು ಪೂಜಿಸದೆ ಮತ್ತನಾಗಿದ್ದೆಯಾಗಿ ನನ್ನಾಜ್ಞೆಯಿಂದ ಬಾರಿ ಬಾರಿಗೂ ದುಃಖಗಳನ್ನು ಹೊಂದುತ್ತಲಿರುವೆ ಎಂಬುದಾಗಿ ನುಡಿದ ಭಗವದ್ವಾಕ್ಯವನ್ನು ಕೇಳಿ ವರ್ತಕನು ಸ್ತೋತ್ರಮಾಡಲು ಆಕ್ರಮಿಸಿದನು.

ಎಲೈ ಸ್ವಾಮಿಯೇ, ಬ್ರಹ್ಮಾದಿ ಸಮಸ್ತ ದೇವತೆಗಳೂ ಕೂಡ ನಿನ್ನ ಆಶ್ಚರ್ಯಕರಗಳಾದ ಗುಣಗಳನ್ನು ತಿಳಿಯದೆ ಮಾಯೆಯಿಂದ ಮೋಹಿತರಾಗಿರುವಲ್ಲಿ, ಮೂಢರಾಗಿ ಮಾಯೆಯಿಂದ ನಾವು ನಿನ್ನ ಸ್ವರೂಪವನ್ನೆಂತು ತಿಳಿಯಲು ಸಾಧ್ಯ. ವಿದ್ಯುಕ್ತವಾಗಿ ನಿನ್ನ ಪೂಜೆಯನ್ನು ಖಂಡಿತ ಮಾಡುವೆವು. ನಮ್ಮಲ್ಲಿ ಕರುಣೆಸು. ಪೂರ್ವದಲ್ಲಿ ನಮ್ಮಿಂದ ಮಾಡಲ್ಪಟ್ಟ ಅಪರಾಧವನ್ನು ಕ್ಷಮಿಸಿ ನಮ್ಮನ್ನು ರಕ್ಷಿಸು ಎಂದು ಭಕ್ತಿಯುತರಾಗಿ

ಪ್ರಾರ್ಥಿಸಿದ ವರ್ತಕರನ್ನು ಕಂಡು ಸಂತುಷ್ಟನಾದ ಸ್ವಾಮಿಯು ಅವರಿಗೆ ಅನೇಕ ವರಗಳನ್ನೂ, ಪೂರ್ವ ಧನವನ್ನೂ ಅನುಗ್ರಹಿಸಿ ಅಂತರ್ಗತನಾದನು.

ನಂತರ ವರ್ತಕರು ಹಡಗಿನಲ್ಲಿ ದ್ರವ್ಯವು ತುಂಬಿರುವುದನ್ನು ಕಂಡು ಸತ್ಯನಾರಾಯಣ ಸ್ವಾಮಿಯ ದಯದಿಂದ ತಮ್ಮ ಇಷ್ಟಾರ್ಥಗಳು ನೆರವೇರಿತೆಂದು ಸ್ವಜನರಿಂದೊಡಗೂಡಿ ಯಥಾವಿಧಿಯಾಗಿ ಸ್ವಾಮಿಯನ್ನು ಪೂಜಿಸಿ ಆತನ ಅನುಗ್ರಹದಿಂದ ಸಂತೋಷಯುತರಾಗಿ ಸಕಲ ಸಂಭ್ರಾತರುಗಳೊಡನೆ ತಮ್ಮ ದೇಶದ ಸಮೀಪಕ್ಕೆ ಬಂದು ಅಳಿಯನನ್ನು ಕುರಿತು ರತ್ನಪುರವೆಂಬ ನಮ್ಮ ದೇಶವು ಸಿಕ್ಕಿತು ಎಂದು ಹೇಳಿ ತಮ್ಮಾಗಮನದ ಸಮಾಚಾರವನ್ನು ತಿಳಿಸಲೋಸುಗ ಸೇವಕನನ್ನು ತನ್ನ ಮನೆಗೆ ಕಳುಹಿಸಿದನು. ಆ ದೂತನು ಪಟ್ಟಣವನ್ನು ಪ್ರವೇಶಿಸಿ ವರ್ತಕನ ಮಡದಿಯನ್ನು ಕಂಡು ಬದ್ಧಾಂಜಲಿಯಾಗಿ ತಾಯಿಯೇ, ಅಳಿಯನೊಡನೆ ನಿಮ್ಮ ಪತಿಯು ದ್ರವ್ಯಗಳಿಂದಲೂ ಬಂಧುಗಳಿಂದಲೂ ಕೂಡಿ ಈ ಪಟ್ಟಣದ ಬಳಿಗೆ ಬರುತ್ತಿದ್ದಾರೆಂಬ ಶುಭವಾರ್ತೆಯನ್ನು ತಿಳಿಸಿದನು. ಈ ಪ್ರಕಾರವಾಗಿ ಹೇಳಿದ ದೂತನ ಮಾತನ್ನು ಕೇಳಿದ ಪತಿವ್ರತೆಯಾದ ವರ್ತಕನ ಸತಿಯು ಸಂತೋಷ ದಿಂದ ಸತ್ಯನಾರಾಯಣ ಸ್ವಾಮಿಯನ್ನು ಪೂಜಿಸಿ ಮಗಳನ್ನು ಕುರಿತಿಂತೆಂದಳು :

ಎಲೈ ಮಗಳೇ ! ಪತಿಗಳ ದರ್ಶನಾರ್ಥವಾಗಿ ಶೀಘ್ರವಾಗಿ ಹೊರಡೋಣ ಸಿದ್ಧಳಾಗು ಎಂದು ಹೇಳಲು, ತಾಯಿಯ ಮಾತನ್ನು ಕೇಳಿ ಕಲಾವತಿ ಮಾಡುತ್ತಿದ್ದ ವ್ರತವನ್ನು ಮುಗಿಸಿ ಪ್ರಸಾದವನ್ನು ಭಕ್ಷಿಸದೆ ಪತಿಯ ದರ್ಶನಾರ್ಥವಾಗಿ ತಾಯಿಯೊಡನೆ ತೆರಳಿದಳು. ಇದರಿಂದ ಕೋಪಗೊಂಡ ಸತ್ಯನಾರಾಯಣ ಸ್ವಾಮಿಯು ಧನಯುಕ್ತವಾದ ಹಡಗಿನೊಂದಿಗೆ ಅವಳ ಪತಿಯನ್ನು ಜಲದಲ್ಲಿ ಮುಳುಗಿಸಿ ಸಂಹರಿಸಿದನು. ಬಳಿಕ ಕಲಾವತಿಯು ಸಂಹೃತನಾದ ಪತಿಯನ್ನು ಕಂಡು ದುಃಖದಿಂದಳುತ್ತಾ ಭೂಮಿಯಲ್ಲಿ ಬಿದ್ದಳು. ವರ್ತಕನು ದುಃಖಿತಳಾದ ಮಗಳನ್ನು ಕಂಡು ಭಯಗೊಂಡ ಮನದಲ್ಲಿ ಏನಿರಬಹುದೆಂದು ಯೋಚಿಸಿದನು. ಭಯ ಭ್ರಾಂತರಾದ ಸರ್ವ ಬಂಧುಗಳು ದುಃಖಿಸುತ್ತಿರುವಾಗ ತಾಯಿಯಾದ ಲೀಲಾವತಿಯು ಮಗಳ ಅವಸ್ಥೆ ಕಂಡು ಅಳುತ್ತಾ ಪತಿಯನ್ನು ಕುರಿತಿಂತೆಂದಳು – ಇದುವರೆಗೂ ಹಡಗಿನೊಡನೆ ಇದ್ದ ಅಳಿಯನು ತಕ್ಷಣದಲ್ಲೇ ಹೇಗೆ ಮಾಯವಾದನೋ ? ಇದೆಲ್ಲಾ ಅನಾಹುತವು ಸತ್ಯನಾರಾಯಣ ಸ್ವಾಮಿಯ ಮಹಾತ್ಮೆಯಿಂದುಂಟಾಯಿತು. ಆತನ ಮಹತ್ವ ತಿಳಿಯಲು ಯಾರಿಗೆ ತಾನೆ ಶಕ್ಯವು ಎಂಬುದಾಗಿ ಹೇಳಿ ತನ್ನ ಮಗಳನ್ನು ಅಪ್ಪಿಕೊಂಡು ಅತ್ತಳು.

ಪತಿಯನ್ನು ಕಳೆದುಕೊಂಡು ದುಃಖಿತಳಾದ ಕಲಾವತಿ ಎಂಬ ಕನ್ಯೆಯು ತನ್ನ ಪತಿ ನಷ್ಟವಾದ್ದರಿಂದ ದುಃಖಿತಳಾಗಿ ತನ್ನ ಪತಿಯ ಪಾದುಕೆಯನ್ನು ತೆಗೆದುಕೊಂಡು ಅದರ ಕೂಡ ಸಹಗಮನವನ್ನು ಮಾಡಬೇಕೆಂದು ಮನೋನಿಶ್ಚಯ ಮಾಡಿದಂತಾಕೆಯಾದಳು. ಈ ಪ್ರಕಾರ ಮಗಳ ಕಷ್ಟವನ್ನು ನೋಡಿದವನಾಗಿ ಆ ವೈಶ್ಯನೂ, ಆತನ ಪತ್ನಿಯೂ ನಪ

ಅತಿ ಶೋಕದಿಂದ ಸಂತಪ್ತರಾಗಿ ಆಲೋಚನೆ ಮಾಡುವಂಥವರಾದರು. ಈ ಹಡಗು ಅದೃಶ್ಯವಾಗಿರುವುದು; ಸತ್ಯನಾರಾಯಣನೇ ಮಾಡಿದ್ದಾನೆ, ಅಥವಾ ನಾನು ಸತ್ಯನಾರಾಯಣ ದೇವರ ಮಾಯಾಪಾಶದಿಂದ ಭ್ರಾಂತನಾಗಿ ಇರುವೆನೋ ಏನೋ ? ಇದು ಯಾವುದೂ ತಿಳಿಯದು ಎಂದು ಹೇಳಿ ಸಮಸ್ತರಿಗೂ ತಿಳಿಸಿದವನಾಗಿ ಇವರುಗಳ ಸಮಕ್ಷಮದಲ್ಲಿ ತನ್ನ ಮನೋರಥವನ್ನು ಪ್ರಕಟಣೆ ಮಾಡಿ ಹೇಳುತ್ತೇನೆ. ನಾನು ಆಪದ್ಬಾಂದವನಾದ ಸತ್ಯನಾರಾಯಣ ದೇವರ ಪೂಜೆ ಮಾಡುತ್ತೇನೆ. ಹೀಗೆ ಪ್ರಾರ್ಥನಾ ವಚನವನ್ನು ಹೇಳಿ ಸತ್ಯನಾರಾಯಣನಿಗೆ ಪುನಃ ಭೂಮಿಯ ಮೇಲೆ ದೀರ್ಘವಾಗಿ ನಮಸ್ಕಾರವನ್ನು ಮಾಡಿದನು. ಆಗ ದೀನಪಾಲಕನಾದ ಸತ್ಯನಾರಾಯಣನು ಸಂತುಷ್ಟನಾದನು. ತದನಂತರ ಭಕ್ತವತ್ಸಲನಾದ ಸತ್ಯನಾರಾಯಣನ ಕೃಪೆಯಿಂದ ಆಕಾಶವಾಣಿ ನುಡಿದದ್ದೇನೆಂದರೆ –

ಎಲೈ ವೈಶ್ಯನೇ, ನಿನ್ನ ಮಗಳು ಪ್ರಸಾದತ್ಯಾಗ ಮಾಡಿ ತನ್ನ ಪತಿಯನ್ನು ನೋಡಲು ಬರುವಂಥಾವಳಾದಳು. ಆದ್ದರಿಂದ ಈ ನಿಮ್ಮ ಮಗಳ ಪತಿ ನಿಶ್ಚಯವಾಗಿ ಅದೃಶ್ಯವಾಗಿದ್ದಾನೆ. ಇದಕ್ಕೋಸ್ಕರ ಮನೆಗೆ ಹೋಗಿ ಸ್ವಲ್ಪವಾದರೂ ಪ್ರಸಾದ ಭಕ್ಷಣೆ ಮಾಡಿ ಪುನಃ ಬಂದಳಾದರೆ ಪತಿಯನ್ನು ಹೊಂದುವಳು. ಕಲಾವತಿಯು ಹೀಗೆ ಹೇಳಿದಂಥಾ ಆಕಾಶವಾಣಿಯ ವಾಕ್ಯವನ್ನು ಕೇಳದವಳಾಗಿ ಅತಿ ತ್ವರೆಯಿಂದ ಸ್ವಗೃಹಕ್ಕೆ ಹೋಗಿ ಪ್ರಸಾದ ಭಕ್ಷಣೆಯನ್ನು ಮಾಡಿ ಯಥಾಪ್ರಕಾರ ಅಲ್ಲಿಗೆ ಬರುವಂಥಾಕೆಯಾಗಿ ಪತಿಯನ್ನು ನೋಡಿದವಳಾಗಲು, ಆಗ ಅಲ್ಲಿದ್ದ ಜನರುಗಳು ಮೊದಲಾಗಿ ತನ್ನ ಪತಿಯು ಸಹಾ ದೃಷ್ಟಿಗೆ ಗೋಚರವಾಗುವಂಥಾವರಾದರು. ಅನಂತರದಲ್ಲಿ ಕಲಾವತಿಯು ಆನಂದದಿಂದ ತನ್ನ ತಂದೆಯನ್ನು ಕುರಿತು ಈ ರೀತಿ ಹೇಳಿದಳು – ಎಲೈ ತಂದೆಯೇ ! ಈ ಮನೆಗೆ ಹೋಗೋಣ ನಡೆಯಿರಿ, ವಿಳಂಬ ಏತಕ್ಕೆ ಮಾಡುತ್ತೀರಿ ? ಈ ಪ್ರಕಾರ ಹೇಳಿದಂಥಾ ಮಗಳ ವಾಕ್ಯವನ್ನು ಕೇಳಿ ಆ ವೈಶ್ಯನಿಗೆ ಬಹಳ ಸಂತೋಷವುಂಟಾಯಿತು. ಅನಂತರ ಯಥಾವಿಧಿಯುಕ್ತವಾಗಿ ಶ್ರೀ ಸತ್ಯನಾರಾಯಣ ದೇವರ ಪೂಜೆ ಮಾಡಿ ತನ್ನ ಬಂಧುವರ್ಗ ಧನಸಹಿತನಾಗಿ ತನ್ನ ಗೃಹವನ್ನು ಕುರಿತು ಹೋಗುವಂಥಾವನಾದನು; ಮತ್ತು ಪ್ರತಿಮಾಸದಲ್ಲೂ ಪೌರ್ಣಮಾ ಸಕ್ರಾಂತಿ ಈ ವರ್ಷಕಾಲದಲ್ಲಿ ಸತ್ಯನಾರಾಯಣ ಪೂಜೆಯನ್ನು ಮಾಡುವಂಥಾವನಾದನು. ಈ ಪ್ರಕಾರ ಅವನು ವಿಧಿಯುಕ್ತ ಸತ್ಯನಾರಾಯಣ ವ್ರತಾಚರಣೆಯನ್ನು ಮಾಡಿ ಈ ಮರ್ತ್ಯಲೋಕದಲ್ಲಿ ಸಕಲ ಸುಖಗಳನ್ನು ಅನುಭವಿಸಿ ಅಂತ್ಯಕಾಲದಲ್ಲಿ ಸತ್ಯಲೋಕವನ್ನು ಹೊಂದಿದನು ಎಂಬುದಾಗಿ ಸೂತಪುರಾಣಿಕರು ಶೌನಕಾದಿ ಋಷಿಗಳಿಗೆ ನಿರೂಪಣೆ ಮಾಡಿದರು.

## ನಾಲ್ಕನೇ ಅಧ್ಯಾಯ ಸಮಾಪ್ತಿ

* (ದೇವರಿಗೆ ಹಣ್ಣು ಅಥವಾ ಕಾಯಿ ನೈವೇದ್ಯ ಮಾಡಿ ಕರ್ಪೂರಾರತಿ ಬೆಳಗಬೇಕು).

**ನೀರಾಜನಮಂತ್ರ :**

ಓಂ ಹಿರಣ್ಯಪಾತ್ರಂ ಮಧೋಃ ಪೂರ್ಣಂ ದಧಾತಿ । ಮಧುವ್ಯೋऽಸಾನೀತಿ । ಏಕಧಾ (ಬ್ರಹ್ಮಣ) ಮುಹ್ಮಣ ಉಪಹರತಿ । ಏಕದೈವ ಯಜಮಾನ ಆಯುಸ್ತೇಜೋ ದಧಾತಿ ।। ಶ್ರೀ ಸತ್ಯನಾರಾಯಣ ಸ್ವಾಮಿ ದೇವತಾಭ್ಯೋ ನಮಃ ಮಂಗಳ ನೀರಾಜನಂ ಸಮರ್ಪಯಾಮಿ ।। ।।ಶ್ರೀರಸ್ತು।। ।।ಶುಭಂ ಭವತು।।

ಅನೇನ ಚತುರ್ಥಾಧ್ಯಾಯ ಕಥಾ ಶ್ರವಣೇನ ಶ್ರೀ ಸತ್ಯನಾರಾಯಣಸ್ವಾಮಿ ಪ್ರೀಯತಾಂ ।।



## ಐದನೆಯ ಅಧ್ಯಾಯ

ಸೂತಪುರಾಣಿಕರು ಹೇಳುವಂಥಾವರಾಗುತ್ತಾರೆ – ಎಲೈ ಶೌನಕಾದಿ ಋಷಿಗಳಿರಾ ! ಕೇಳಿರಿ. ನಾನು ನಿಮಗೆ ಎರಡನೆಯ ಸಲ ಇನ್ನೂ ಒಂದು ಇತಿಹಾಸ ಹೇಳುವೆನು. ಪೂರ್ವದಲ್ಲಿ ಅಂಗಧ್ವಜನೆಂಬ ರಾಜನು ಪ್ರಜಾಪಾಲನೆಯಲ್ಲಿ ಅತ್ಯಾದರವುಳ್ಳವನಾಗಿದ್ದನು. ಆ ರಾಜನು ಸತ್ಯನಾರಾಯಣ ಪ್ರಸಾದ ತ್ಯಾಗ ಮಾಡಿದ್ದರೆ ದೆಸೆಯಿಂದ ಅತಿಯಾದ ಖವನ್ನು ಹೊಂದುವಂಥಾವನಾದನು. ಹೇಗೆಂದರೆ – ಒಂದಾನೊಂದು ಸಮಯದಲ್ಲಿ ಆ ರಾಜನು ಅರಣ್ಯಕ್ಕೆ ಹೋಗುವಂಥಾವನಾಗಿ ಸಿಂಹ, ವ್ಯಾಘ್ರಾದಿ ಅನೇಕ ಪ್ರಕಾರವಾದ ಮೃಗಗಳನ್ನು ಸಂಹಾರಮಾಡಿ ತನ್ನ ನಗರ ಸಮೀಪವಾದ ಒಂದು ವಟವೃಕ್ಷದ ಸಮೀಪದಲ್ಲಿ ಒಂದು ನಿಲ್ಲುವವನಾದನು. ಅಲ್ಲಿ ಗೋಪಾಲಕರು ತಮ್ಮ ಬಂಧುಗಳಿಂದ ಕೂಡಿ ಸಂತುಷ್ಟ ರಾದವರಾಗಿ ಭಕ್ತಿಯುಕ್ತ ಅಂತಃಕರಣವುಳ್ಳವರಾಗಿ ಶ್ರೀ ಸತ್ಯನಾರಾಯಣ ಪೂಜೆಯನ್ನು ಮಾಡುತ್ತಿದ್ದರು. ಇದನ್ನು ನೋಡಿದವನಾದ ಈ ರಾಜನು ಗರ್ವದೆಶೆ ಯಿಂದ ಅಲ್ಲಿಗೆ ಹೋಗಲೂ ಇಲ್ಲ ಮತ್ತು ಆ ಸತ್ಯನಾರಾಯಣನನ್ನು ಕುರಿತು ನಮಸ್ಕಾರವನ್ನೂ ಮಾಡಲಿಲ್ಲ.

ಹೀಗಾದಾಗ್ಯೂ ಸಮಸ್ತ ಗೋಪಾಲಕರೆಲ್ಲರೂ ಸತ್ಯನಾರಾಯಣ ಪ್ರಸಾದವನ್ನು ರಾಜನ ಮುಂದಿಟ್ಟು ಪುನಃ ಆ ಗೋಪಾಲಕರು ಯಥಾಸ್ಥಾನಕ್ಕೆ ಬರುವಂಥರಾದರು ಮತ್ತು ಯಥೇಚ್ಛ ಭೋಜನವನ್ನು ಮಾಡಿ ಅಲ್ಲಿ ಇರುವಂಥಾವರಾದರು. ಅನಂತರ ರಾಜನು ಪ್ರಸಾದ ಪರಿತ್ಯಾಗವನ್ನು ಮಾಡಿದ ಕಾರಣ ಅತಿ ದುಃಖವನ್ನು ಹೊಂದುವಂಥಾವನಾದನು. ಆ ರಾಜನ ನೂರು ಮಂದಿ ಮಕ್ಕಳು ಧನಧಾನ್ಯ ಮೊದಲಾದ ಐಶ್ವರ್ಯವೆಲ್ಲವೂ ನಾಶಹೊಂದುವಂಥಾದ್ದಾಯಿತು. ಆಗ ಅವನು ಯೋಚನೆ ಮಾಡಿದ್ದೇನೆಂದರೆ – ಇದು ಸಕಲವೂ ಸತ್ಯನಾರಾಯಣ ದೇವರು ನಷ್ಟ ಮಾಡಿರಬಹುದು, ಅಂಥಾ ಯಾವ ಸ್ಥಳದಲ್ಲಿ ಸತ್ಯದೇವರ ಪೂಜೆ ಆಯಿತೋ, ಆ ಸ್ಥಳಕ್ಕೆ ಪುನಃ ನಾನು ಹೋಗುವೆನೆಂದು ಮನೋನಿಶ್ಚಯ ಮಾಡಿ ಗೋಪಾಲಕರ ಸಮೀಪಕ್ಕೆ ಹೋಗುವಂಥವನಾಗಿ ರಾಜನು ಗೋಪಾಲಕರ ಸಹಿತನಾಗಿ ಭಕ್ತಿ ಮತ್ತು ಶ್ರದ್ಧಾಯುಕ್ತನಾಗಿ ಯಥಾವಿಧಿಯಿಂದ ಸತ್ಯನಾರಾಯಣ ದೇವರ ಪೂಜೆಯನ್ನು ಮಾಡುವಂಥಾವನಾದನು. ಅನಂತರ ಆ





ರಾಜನು ಸತ್ಯನಾರಾಯಣ ದೇವರ ಪ್ರಸಾದದ ದೆಸೆಯಿಂದ ಧನಧಾನ್ಯ ಪುತ್ರಾದಿ ಐಶ್ವರ್ಯವನ್ನು ಪುನಃ ಹೊಂದಿದವನಾಗಿ ಇಹಲೋಕದಲ್ಲಿ ಸುಖವನ್ನನುಭವಿಸಿ ಅಂತ್ಯಕಾಲದಲ್ಲಿ ಸಾಕ್ಷಾತ್ ವೈಕುಂಠ ಲೋಕವನ್ನು ಹೊಂದಿದನು.

ಈ ಪ್ರಕಾರವಾಗಿ ಪರಮ ದುರ್ಲಭ್ಯವಾದ ಈ ವ್ರತವನ್ನು ಯಾವ ಮನುಷ್ಯನು ಮಾಡುತ್ತಾನೋ ಆತನಿಗೆ ಸತ್ಯನಾರಾಯಣ ದೇವರ ಪ್ರಸಾದದಿಂದ ಧನಧಾನ್ಯ ಮುಂತಾದ್ದು ಪ್ರಾಪ್ತವಾಗುತ್ತದೆ. ಮತ್ತು ಯಾವನು ದರಿದ್ರನಾಗಿರುತ್ತಾನೋ ಅವನಿಗೆ ಧನಪ್ರಾಪ್ತಿ ಆಗುತ್ತದೆ. ಅವನು ಎಲ್ಲಾ ಕಷ್ಟಗಳಿಂದ ಮುಕ್ತನಾಗುತ್ತಾನೆ. ಯಾವ ಮನುಷ್ಯನು ಭೀತಿ ಹೊಂದಿರುತ್ತಾನೋ ಅವನು ಭಯದಿಂದ ಮುಕ್ತನಾಗುತ್ತಾನೆ. ಅವರುಗಳು ಇಹಲೋಕದಲ್ಲಿ ಸಂಪೂರ್ಣ ಸುಖವನ್ನನುಭವಿಸಿ ಅಂತ್ಯಕಾಲದಲ್ಲಿ ವೈಕುಂಠವನ್ನು ಹೊಂದುತ್ತಾರೆ. ಇದು ಸತ್ಯವಾದದ್ದು. ಮತ್ತೆ ಸೂತ ಮಹಾಮುನಿಗಳು ಹೇಳವಂಥಾವರಾಗುತ್ತಾರೆ.

ಎಲೈ ಶೌನಕಾದಿಗಳೇ ! ಈ ಪ್ರಕಾರ ಸತ್ಯನಾರಾಯಣ ದೇವರ ವ್ರತವನ್ನು ನಾನು ನಿಮಗೆ ಕಥನ ಮಾಡಿಸಿರುತ್ತೇನೆ. ಈ ವ್ರತವನ್ನು ಮಾಡಿದ್ದಾದರೆ, ಮನುಷ್ಯರು ಸಂಪೂರ್ಣ ದುಃಖದೆಶೆಯಿಂದ ಸತ್ಯವಾಗಿ ಮುಕ್ತರಾಗುವಂಥಾವರಾಗುತ್ತಾರೆ. ಕಲಿಯುಗದಲ್ಲಿ ಸತ್ಯನಾರಾಯಣ ಪೂಜೆಯು ವಿಶೇಷವಾಗಿ ಕೋರಿದ ಫಲವನ್ನು ಕೊಡತಕ್ಕಂಥಾದ್ದು. ಈ ಸತ್ಯನಾರಾಯಣನನ್ನು ಕೆಲವರು ಕಾಲವೆಂದು ಹೇಳುತ್ತಾರೆ, ಕೆಲವರು ಸತ್ಯನಾರಾಯಣನೆಂದು ಹೇಳುತ್ತಾರೆ, ಇನ್ನೂ ಕೆಲವರು ಸತ್ಯದೇವರೆನ್ನುತ್ತಾರೆ. ಹೀಗೆ ನಾನಾ ಪ್ರಕಾರವಾದ ರೂಪ ಧಾರಣೆ ಮಾಡಿ ಸಕಲ ಶ್ರದ್ಧಾಭಕ್ತಿಯುತರಾದ ಭಕ್ತರುಗಳಿಗೆ ಈಪ್ಸಿತ ಫಲಗಳನ್ನು ಕೊಡತಕ್ಕವನು.

ಹೀಗೆ ಸನಾತನನಾದ ಭಗವಂತನು ಈ ಕಲಿಯುಗದಲ್ಲಿ ಸತ್ಯನಾರಾಯಣ ರೂಪವನ್ನು ಧರಿಸಿಕೊಂಡಿರುವಂಥಾವನಾಗಿದ್ದಾನೆ ಎಂಬುದಾಗಿ ಸೂತರು ಹೇಳುತ್ತಾರೆ. ಮುನಿಕುಲೋತ್ತಮರಿರಾ, ಯಾರು ಈ ಸತ್ಯನಾರಾಯಣ ವ್ರತವನ್ನು ದಿನವೂ ಶ್ರವಣ ಮಾಡುತ್ತಾರೋ ಅಥವಾ ಪಠಣ ಮಾಡುತ್ತಾರೋ ಅವರ ಸಮಸ್ತವಾದ ದುಃಖವೂ ಸತ್ಯದೇವರ ಪ್ರಸಾದದಿಂದ ನಾಶ ಹೊಂದುವಂಥಾದ್ದಾಗಿ ಸುಖದಿಂದ ಇರುತ್ತಾರೆ. ಇದರಲ್ಲಿ ಸಂಶಯವಿಲ್ಲವೆಂಬುದಾಗಿ ಸೂತಪುರಾಣೀಕರು ಶೌನಕಾದಿ ಋಷಿಗಳಿಗೆ ಹೇಳಿದರೆಂಬಲ್ಲಿಗೆ, ಐದನೇ ಅಧ್ಯಾಯ ಸಮಾಪ್ತಿ.

*(ಹಣ್ಣುಕಾಯಿಗಳಿಂದ ಸ್ವಾಮಿಗೆ ನೈವೇದ್ಯವನ್ನು ಸಮರ್ಪಿಸಿ ಮಂಗಳಾರತಿಯನ್ನು ಬೆಳಗಿ ಎಲ್ಲರಿಗೂ ಕೊಟ್ಟು, ತೀರ್ಥಪ್ರಸಾದವನ್ನು ಎಲ್ಲರಿಗೂ ನೀಡಿ ತಾನೂ ಸ್ವೀಕರಿಸಿ ಬಂಧುವರ್ಗ, ಮಿತ್ರರೊಂದಿಗೆ ಭೋಜನವನ್ನು ಮಾಡಬೇಕು).

**ನೀರಾಜನ ಮಂತ್ರ :**

ಆ ಶಾಸ್ತೇऽಯಂ ಯಜಮಾನೋऽಸೌ। ಆಯುರಾಶಾಸ್ತೇ। ಸುಪ್ರಜಾಸ್ತ್ವಮಾ-ಶಾಸ್ತೇ । ಸಜಾತವನಸ್ಯಾಮಾಶಾಸ್ತೇ । ಉತ್ತರಾಂ ದೇವಯಜ್ಯಾ- ಮಾಶಾಸ್ತೇ । ಭೂಯೋ ಹವಿಷ್ಕರಣಮಾಶಾಸ್ತೇ । ದಿವ್ಯಂಧಾಮಾಶಾಸ್ತೇ । ವಿಶ್ವಂ ಪ್ರಿಯಮಾಶಾಸ್ತೇ। ಯದನೇನ ಹವಿಷಾऽऽಶಾಸ್ತೇ। ತದಸ್ಯಾತ್ ತದೃಧ್ಯಾತ್। ತದಸ್ಮೈ ದೇವಾ ರಾಸಂತಾಂ। ತದಗ್ನಿರ್ದೇವೋ ದೇವೇಭ್ಯೋ ವನತೇ। ವಯಮಗ್ನೇ- ರ್ಮಾನುಷಾಃ। ಇಷ್ಟಂ ಚ ವೀತಂ ಚ। ಉಭೇ ಚ ನೋ ದ್ಯಾವಾ ಪೃಥಿವೀ ಅಗ್ಂ ಹಸಸ್ಪಾತಾಂ। ಇಹಗತಿರ್ವಾ ಮಸ್ಯೇದಂ ಚ। ನಮೋ ದೇವೇಭ್ಯಃ॥ ಶ್ರೀ ಸತ್ಯನಾರಾಯಣಸ್ವಾಮಿ ದೇವತಾಭ್ಯೋ ನಮಃ । ದಿವ್ಯ ಮಂಗಳ ನೀರಾಜನಂ ಸಮರ್ಪಯಾಮಿ ॥

ಅನೇನ ಪಂಚಮೋಧ್ಯಾಯ ಕಥಾ ಶ್ರವಣೇನ ಶ್ರೀ ಸತ್ಯನಾರಾಯಣಸ್ವಾಮಿ ಪ್ರೀಯತಾಂ ॥

**ಹರಿಃ ಓಂ ತತ್ಸತ್ ಶ್ರೀ ಕೃಷ್ಣಾರ್ಪಣಮಸ್ತು**

## ಶ್ರೀ ಸತ್ಯನಾರಾಯಣಸ್ವಾಮಿ ವ್ರತೋದ್ಯಾಪನವಿಧಿ

ಶ್ರೀ ಸತ್ಯನಾರಾಯಣಸ್ವಾಮಿಯ ವ್ರತವನ್ನು ಯಾವಾಗ ಬೇಕಾದರೂ ಮಾಡಬಹುದು. ನಾಲ್ಕು ವರ್ಷಗಳ ಕಾಲ ತಪ್ಪದೆ ಪ್ರತಿ ತಿಂಗಳಲ್ಲಿಯೂ ವ್ರತವನ್ನು ಆಚರಿಸಿ ಅನಂತರ ಉದ್ಯಾಪನೆಯನ್ನು ನೆರವೇರಿಸಬೇಕು.

ಶ್ರೀ ಸತ್ಯನಾರಾಯಣಸ್ವಾಮಿಯ ಉದ್ಯಾಪನೆಯನ್ನು ಆಚರಿಸತಕ್ಕವರು ಆಚರಣೆಯ ಹಿಂದಿನದಿನ ನಿರಾಹಾರಿಯಾಗಿ ಶರೀರಶುದ್ಧಿಯನ್ನು ಮಾಡಿಕೊಳ್ಳತಕ್ಕದ್ದು. ಮಾರನೆಯ ದಿನ ಬೆಳಗ್ಗೆ ಸಂಸಾರ ಸಮೇತರಾಗಿ ನದಿಯಲ್ಲಿ ಸ್ನಾನ ಸಂಧ್ಯಾವಂದನೆ ಮುಂತಾದ ನಿತ್ಯವಿಧಿಗಳನ್ನು ತೀರಿಸಬೇಕು. ತಾಮ್ರದ ಕಲಶದಲ್ಲಿ ನೀರನ್ನು ತುಂಬಿ ಆವಾಹನಾದಿ ಷೋಡಶೋಪಚಾರ ಪೂಜೆ ಮಾಡಬೇಕು. ನಂತರ ಮಂಗಳದ್ರವ್ಯಗಳ ಸಮೇತ ಸುವಾಸಿಯರು ಕಲಶವನ್ನು ತರಬೇಕು. ಕಲಶವನ್ನು ಈಶಾನ್ಯ ದಿಕ್ಕಿನಲ್ಲಿ ಶುಭ್ರವಾದ ಸ್ಥಳದಲ್ಲಿ ಇಡಬೇಕು. ದಂಪತಿಗಳು ಸಾಯಂಕಾಲ ಅಭ್ಯಂಜನ ಸ್ನಾನಮಾಡಿ ಶುದ್ಧವಾದ ಪ್ರದೇಶದಲ್ಲಿ ಪುಣ್ಯಾಹವಾಚನೆ, ಹಿರಣ್ಯದ್ರವದಿಂದ ನಾಂದೀಪೂಜಾಭ್ಯುದಯಗಳನ್ನು ಮಾಡಿ ಆಚಾರ್ಯಾದಿ ಋತ್ವಿಕ್ಕುಗಳನ್ನು ನೇಮಿಸಿಕೊಂಡು ಅನಂತರ ವೈದಿಕ ಮಂತ್ರಗಳಿಂದ ಕಲಶ ಸ್ಥಾಪನೆ ನೆರವೇರಿಸಬೇಕು. ಗೋಧೂಮಾದಿ ಧಾನ್ಯಗಳನ್ನು ಮಿಶ್ರವಾಗದಂತೆ ಒಂದರ ಮೇಲೆ ಒಂದನ್ನು ರಾಶಿಯಾಗಿ ಹಾಕಬೇಕು. ಉದ್ಯಾಪನೆ ಮಾಡತಕ್ಕವರು ತಮ್ಮ ಶಕ್ತಿಗನುಸಾರವಾಗಿ ಬಂಗಾರ, ಬೆಳ್ಳಿ, ತಾಮ್ರ ಅಥವಾ ಮಣ್ಣಿನ ಹತ್ತು ಕಲಶಗಳನ್ನು ನೂಲಿನಿಂದ ಸುತ್ತಿ ಧಾನ್ಯರಾಶಿಯ ಮೇಲೆ ಇಡಬೇಕು. ಆ ಹತ್ತು ಕಲಶಗಳಲ್ಲಿ ಪಂಚಗವ್ಯ, ಪಂಚತ್ವಕ್,

ಪಂಚಪಲ್ಯ, ಚಿನ್ನದ ಪಂಚರತ್ನಗಳನ್ನು ಮತ್ತು ಚಿನ್ನದ ಅಥವಾ ಬೆಳ್ಳಿಯ ಪ್ರತಿಮೆಗಳನ್ನು ಇರಿಸಬೇಕು. ನಂತರ ಉದಕವನ್ನು ತುಂಬಿಸಬೇಕು. ಮಂಗಳದ್ರವ್ಯಗಳಿಂದ ಶುದ್ಧಿ ಮಾಡಿದ ತೆಂಗಿನ ಕಾಯಿಗಳನ್ನು ಮಾವಿನ ಗುತ್ತಿಗಳ ಸಮೇತ ಕಲಶದ ಮೇಲೆ ಇರಿಸಬೇಕು. ಪ್ರತಿ ಕಲಶವನ್ನೂ ನೂತನ ವಸ್ತ್ರಗಳಿಂದ ಸುತ್ತಿಡಬೇಕು. ಆಯಾಯ ದೇವತಾ ಮಂತ್ರಗಳಿಂದ ಕಲಶಗಳಲ್ಲಿ ದೇವತೆಗಳನ್ನು ಆವಾಹನೆ ಮಾಡಬೇಕು. ಉದ್ಯಾಪನೆಗೆ ಸತ್ಯನಾರಾಯಣ ಸ್ವಾಮಿಯು ಪ್ರಧಾನನು, ಅಧಿದೇವತೆ ಬ್ರಹ್ಮನು, ಪ್ರತ್ಯಧಿ ದೇವತೆ ಈಶ್ವರ, ಗಣಪತಿ, ಗೌರಿ, ವರುಣ, ಬ್ರಹ್ಮ ವಿಷ್ಣು ಮಹೇಶ್ವರ, ಸೂರ್ಯಾದಿ ನವಗ್ರಹಗಳನ್ನು ಅಷ್ಟದಿಕ್ಪಾಲಕರು, ದುರ್ಗಾ, ಕ್ಷೇತ್ರಪಾಲಕ, ವಾಸ್ತುಪುರುಷ ಇವರು ಅಂಗದೇವತೆಗಳು, ಇವರುಗಳನ್ನು ಕಲ್ಪೋಕ್ತವಾಗಿ ಪೂಜಿಸಬೇಕು. ಇದನ್ನು ಪ್ರತಿಯಾಮದಲ್ಲೂ ಮಾಡಬೇಕು. ಬೆಳಿಗ್ಗೆ ಸ್ನಾನ ಸಂಧ್ಯಾವಂದನೆಗಳನ್ನು ಮಾಡಿ ಆಚಾರ್ಯಾದಿ ಸಹಿತವಾಗಿ ಹೋಮ ಮಾಡಬೇಕು. ಹೋಮ ದ್ರವ್ಯಗಳಾದ ಸಮಿತ್ತು ಚರು, ಜೇನುತುಪ್ಪ, ತುಪ್ಪಗಳನ್ನು ವಿಶೇಷವಾಗಿ ಉಪಯೋಗಿಸಿ ಅಷ್ಟೋತ್ತರ ಸಹಸ್ರ ಅಷ್ಟೋತ್ತರ ಶತ, ಇಪತ್ತೆಂಟಾವರ್ತಿಗಾಯತ್ರಿ, ತದ್ವಿಷ್ಣೋ ಎಂಬ ಮಂತ್ರ, ಅಂತೋದೇವ ಎಂಬ ಮಂತ್ರ ಇವುಗಳಿಂದ ಹೋಮ ಮಾಡಬೇಕು, ನಂತರ ಲಕ್ಷ್ಮೀಪ್ರೀತ್ಯರ್ಥವಾಗಿ ಲಕ್ಷ್ಮೀ, ಗಾಯತ್ರೀ ಸಹಸ್ರನಾಮ ಅಥವಾ ಅಷ್ಟೋತ್ತರಗಳಿಂದ ಹೋಮ ಮಾಡಬೇಕು.

ಪುರುಷಸೂಕ್ತ ಹೋಮ, ಶ್ರೀ ಸೂಕ್ತಗಳನ್ನು ಜಪಿಸಿದ ನಂತರ ಪೂರ್ಣಾಹುತಿ ಕೊಟ್ಟು ಹೋಮ ಸಮಾಪ್ತಿಯನ್ನು ಮಾಡಬೇಕು. ಉದ್ಯಾಪನೆಯನ್ನು ಮಾಡಿದವರು ಕುಟುಂಬಿಯಾದ ಆಚಾರ್ಯ ದಂಪತಿಗಳನ್ನು ಪೂಜೆ ಮಾಡಬೇಕು. ಹಾಲು ಕರೆಯುವ ಹಸು ಮತ್ತು ಕರುವನ್ನು ದಾನಮಾಡಿ, ಧಾರಾಳವಾಗಿ ದಕ್ಷಿಣೆಕೊಟ್ಟು ಸತ್ಕರಿಸಬೇಕು. ಉಳಿದ ಬ್ರಾಹ್ಮಣರಿಗೆ ತಮ್ಮ ಶಕ್ತಿಯಂತೆ ದಾನಧರ್ಮಗಳನ್ನು ಮಾಡಬೇಕು. ನಂತರ ಬ್ರಾಹ್ಮಣರು, ಬಂಧುಮಿತ್ರರು, ಸುವಾಸಿನಿಯರ ಸಹಿತ ಊಟ ಮಾಡಬೇಕು. ಈ ರೀತಿಯಾಗಿ ಶ್ರೀ ಸತ್ಯನಾರಾಯಣ ಸ್ವಾಮಿ ವ್ರತವನ್ನೂ ಮತ್ತು ಉದ್ಯಾಪನೆಯನ್ನೂ ಮಾಡಿದವರು ಶ್ರೀ ಸತ್ಯನಾರಾಯಣ ಸ್ವಾಮಿಯ ಕೃಪೆಗೆ ಪಾತ್ರರಾಗಿ ಸಕಲ ಸುಖಗಳನ್ನೂ ಹೊಂದಿ ಸುಖಿಸುವರು ಎಂಬಲ್ಲಿಗೆ –

ಶ್ರೀ ಸತ್ಯನಾರಾಯಣ ಸ್ವಾಮಿ ಉದ್ಯಾಪನಾವಿಧಿ ಸಂಪೂರ್ಣಂ.





# ಋಷಿಪಂಚಮಿ ವ್ರತ

ಅಥ ಭಾದ್ರಪದ ಶುಕ್ಲ ಪಂಚಮ್ಯಾಂ ಋಷಿಪಂಚಮೀವ್ರತಂ। ತಚ್ಚ ಮಧ್ಯಾಹ್ನ ವ್ಯಾಪಿನ್ಯಾಂ ಕಾರ್ಯಂ। ತಥಾಚಮಾಧವೀಯೆಹಾರೀತಃ :-

ಶ್ಲೋಕ :- ಪೂಜಾವ್ರತೇಷು ಸರ್ವೇಷು ಮಧ್ಯಾಹ್ನ ವ್ಯಾಪಿನೀ ತಿಥಿಃ। ದಿನದ್ವಯೇತು ತದ್ವ್ಯಾಪ್ತಾವಾಪೂರ್ವವಿದ್ಧಾಯಾಂ ಕಾರ್ಯಂ ಇತಿ ಮದನರತ್ನಾತ್

ಮಧ್ಯಾಹ್ನೇ ನದ್ಯಾದಿಂ ಗತ್ವಾ ಅಪಾಮಾರ್ಗ ಕಾಷ್ಠಮನ್ಯತ್ವಾ ಅನಿಷಿದ್ಧಂ (ಆಮ್ರಾದಿ) ಕಾಷ್ಠಾಮಾದಾಯ "ಆಯುರ್ಬಲಂಯಶೋವರ್ಚಃ ಪ್ರಜಾಃ ಪಶುವ ಸೂನಿ ಚ ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತನ್ನೋದೇಹಿ ವನಸ್ಪತೇ" ಇತಿ ವನಸ್ಪತಿಂ ಸಂಪ್ರಾರ್ಥ್ಯ "ಮುಖದುರ್ಗಂಧನಾಶಯ ದಂತಾನಾಂಚವಿಶುದ್ಧಯೇ॥ ಷ್ಠೀವನಾಯಚ ಗಾತ್ರಾಣಾಂ ಕುರ್ವೇಹಂ ದಂತಧಾವನಂ' ॥ ಇತಿ ದಂತಧಾವನಂ ಕೃತ್ವಾ ॥ ತಿಲಮಲಕಕಲ್ಕೇನ ಪೇಶಾ ಸಂಶೋಧ್ಯಮೃತ್ಸ್ನಾನಪೂರ್ವಕಂ ಸ್ನಾತ್ವಾ। ಅತ್ರ ವ್ಯಾವಹಾರಿಕಃ ಪೌರಾಣ ಉಚ್ಯತೆ ಆಚಮನಾದಿ ದೇಶಕಾಲೆ ಕೀರ್ತನಾಂತೆ ಕಾಯಿಕ ವಾಚಿಕ ಮಾನಸಿಕ ಸಾಂಸರ್ಗಿಕ ಜ್ಞಾತಾಜ್ಞಾತ ಸ್ಪೃಷ್ಟಾಸ್ಪೃಷ್ಟ ಯುಕ್ತಾಭುಕ್ತ ಪೀತಾಪಿತ ಸಮಸ್ತಪಾಪಕ್ಷಯದ್ವಾರ ಶರೀರ ಶುದ್ಧ್ಯರ್ಥಂ ಋಷಿಪಂಚಮೀವ್ರತಾಂ ಗತ್ವೇನ ಅಪಾಮಾರ್ಗ ಕಾಷ್ಠೈರ್ದಂತರ್ಧಾವನ ಪೂರ್ವಕಮಷ್ಟೋತ್ತರಶತಸ್ನಾನಾನಿ ಕರಿಷ್ಯೇ॥ ಇತಿ ಸಂಕಲ್ಪ್ಯ॥ ಗಂಗಾಗಂಗೇತಿಯೊ- ಬ್ರೂಯಾತ್ ಯೋಜನಾನಾಂ ಶತೈರಪಿ। ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸಗಚ್ಛತಿ॥ ಇತಿಸ್ನಾತ್ವಾ ॥ ಸುವಾಸಿನ್ಯಾ। ಹರಿದ್ರೇ ಪೀತವರ್ಣೇತಂ ಹಾರಿಣೇ ಜನರಂಜಿನೀ। ಅತಸ್ತ್ವಾಂಲೇಪ ಇಷ್ಯಾಮಿ ಸೌಭಾಗ್ಯಂ ದೇಹಿಮೇನಘೇ॥ ಇತಿ ಹರಿದ್ರಾಂ ವಿಲಿಪ್ಯ ಸ್ನಾತ್ವಾ ಆಚಮ್ಯ-ಕುಂಕುಮಂ ಕಾಂತಿದಂ ದಿವ್ಯಂ ಕಾಮಿನೀ ಕಾಮಸಂಭವಂ। ಸ್ನಾನೇಸ್ಯಾಂ ಕುಂಕುಮೇನಾತಃ ಪ್ರಸನ್ನೋಭವಮೇಹರೇ। ಇತಿ ಸ್ನಾತ್ವಾ ಆಚಮ್ಯ, ಶರೀರ ಶುದ್ಧ್ಯರ್ಥಂ ಭಸ್ಮಗೋಮಯ ಮೃತ್ತಿಕ, ಶುದ್ಧೋದಕ ಕುಂಕುಮಸ್ನಾನಾನಿ ಕರಿಷ್ಯೆ॥ ಭಸ್ಮಸ್ನಾನಂ॥ ಸರ್ವರಕ್ಷಾಕರಂ ಭಸ್ಮ ಕಾಮಾದ್ಯರಿ ವಿನಾಶನಂ !! ತಸ್ಯಲೇಪನಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೆ ॥ ಸ್ನಾತ್ವಾಆಚಮ್ಯ ॥ ಗೋಮಯಸ್ನಾನಂ ॥ ಅಗ್ರಮಗ್ರ ಚರಂತಿನಾಮೋಷಧೀನಾಂ ವನೇ ವನೇ। ತಾಸಾಂ ವೃಷಭ ಪತ್ನೀನಾಂ ಪವಿತ್ರಂ ಕಾಯಶೋಧನಂ। ತನ್ಮೇರೋಗಾಂಶ್ಚಸೋಕಾಶ್ಚನುದ ಗೋಮಯ ಸರ್ವದಾ ಇತಿ

ಸ್ನಾತ್ವಾ ಆಚಮ್ಯ ॥ ಮೃತ್ತಿಕಾಸ್ನಾನಂಮೃತ್ತಿಕೇ ಹನಮೇ ಪಾಪಂ ಯನ್ಮಯಾ ದುಷ್ಕೃತ್ಯಂ ಕೃತಂ ॥ ತ್ವಯಾಹತೇನ ಪಾಪೇನ ಗಚ್ಛಾಮಿ ಪರಮಾಗತಿಂ ॥ ಇತಿ ಸ್ನಾತ್ವಾ ಆಚಮ್ಯ – ಅಪಾಮಾರ್ಗ ಕಾಷ್ಠೇನಮುಖ ದೌರ್ಗಂಧ್ಯ ನಾಶಾಯ ದಂತಾನಾಂ ಚ ವಿಶುದ್ಧಯೇ ॥ ಷ್ಠೀವನಾಯಚ ಗಾತ್ರಾಣಾಂ ಕುರ್ವೇಹಂ ದಂತಧಾವನಂ ॥ ಏವಂ ಅಷ್ಟೋತ್ತರಶತವಾರಂ ಸ್ನಾತ್ವಾ ಗಂಗೇ ಚ ಯಮುನೇಚೈವ ಗೋದಾವರೀ ಸರಸ್ವತೀ ನರ್ಮದೇ ಸಿಂಧು ಕಾವೇರೀ ಜಲೇಸ್ಮಿನ್ ಸನ್ನಿಧಿಂಕುರು ॥ ಇತಿ ತುಳಸಿದಳೇನ ಜಲಮಾಲೋಡ್ಯ (ಸಂಭವೇ ಮಹಾಸಂಕಲ್ಪಃ ಕಾರ್ಯಂ) ಗಂಗಾಂ ಪ್ರಾರ್ಥಯೇತ್ ನಂದಿನೀ ನಳಿನೀ ಸೀತಾ ಮಾಲತೀಚ ಮಲಾಪಹಾ ॥ ವಿಷ್ಣುಪಾದಾಬ್ಜಸಂಭೂತಾ ಗಂಗಾ ತ್ರಿಪಥಗಾಮಿನಿ ॥ ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ । ದ್ವಾದಶೈತಾನಿನಾಮಾನಿ ಯತ್ರಯತ್ರ ಜಲಾಶಯೇ । ಸ್ನಾನಯುಕ್ತಃ ಸ್ಮರೇನ್ನಿತ್ಯಂ ತತ್ರತತ್ರ ವಸೇದ್ಧಿಸಾ । ಶರೀರೇ ಜರ್ಝರೀಭೂತೇ ವ್ಯಾಧಿಗ್ರಸ್ಥ ಕಳೇಬರೇ ॥ ಔಷಧಂ ಜಾಹ್ನವೀ ತೋಯಂ ವೈದ್ಯೋನಾರಾಯಣೋಹರಿಃ । ಪಾಪೋಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ । ತ್ರಾಹಿಮಾಂ ಕೃಪಯಾ ಗಂಗೇ ಸರ್ವಪಾಪಹರಾ ಭವ ॥ ಇತಿ ಪ್ರಾರ್ಥ್ಯ ಅರ್ಘ್ಯಾದಿ ದದ್ಯಾತ್ । ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ ॥ ಅನುಕಂಪಯಮಾಂ ಭಕ್ತ್ಯಾಗೃಹಾಣಾರ್ಘ್ಯಂ ನಮೋಽಸ್ತುತೇ । ಸೂರ್ಯ-ನಾರಾಯಣಾಯೇದಮರ್ಘ್ಯಂ ॥ ಭಾಗೀರಥಿ ನಮೋತ್ತುಭ್ಯಂ ಸರ್ವಪಾಪಪ್ರಣಾಶಿನಿ ಭಕ್ತ್ಯಾಂ ತುಭ್ಯಂ ಮಯಾದತ್ತಂ ಗೃಹಾಣಾರ್ಘ್ಯಂ ನಮೋಽಸ್ತುತೇ ॥ ಗಂಗಾಯೈ ಇದಮರ್ಘ್ಯ ॥ ಕಶ್ಯಪೋತ್ರಿಃ ಭರದ್ವಾಜಂ ವಿಶ್ವಾಮಿತ್ರಗೌತಮಃ । ಜಮದಗ್ನಿರ್ವಸಿಷ್ಠಶ್ಚ ಸಾಧ್ವೀಚೈವಾಪ್ಯರುಂಧತೀ । ಅರುಂಧತೀ ಸಹಿತ ಕಶ್ಯಪಾದಿ ಸಪ್ತಋಷಿಭ್ಯ ॥ ಇದಮರ್ಘ್ಯಂ॥ ಇತ್ಯರ್ಘ್ಯಾಣಿ ದತ್ವಾ ಯನ್ಮಯಾದೂಷಿತಂ ತೋಯಂ ಶಾರೀರಮಲ-ಸಂಗಮಾತ್ । ತದ್ದೋಷಪರಿಹಾರಾರ್ಥಂ ಯಕ್ಷ್ಮಾಣಾಂ ತರ್ಪಯಾಮ್ಯಹಂ ॥ ಇತಿವಸ್ತ್ರಂನಿಷ್ಪೀಡ್ಯ ಗಂಧ ಪುಷ್ಪಾಕ್ಷತ ಹರಿದ್ರಾಕುಂಕುಮಾದಿಭಿರ್ಗಂಗಾಂ ತುಲಸೀಂ ಸೂರ್ಯಂ ಚ ನಾಮ್ನಾ ಪೂಜಯೇತ್ ॥ ಇತಿ ಸ್ನಾನವಿಧಿಃ ॥

## ಪಂಚಗವ್ಯ ಮಂತ್ರಃ

ದೇಶಕಾಲೌ ಸಂಕೀರ್ತ್ಯ ಅಮುಕಸ್ಯಾಯ ಶುದ್ಧ್ಯರ್ಥಂ ಪಂಚಗವ್ಯ ಪ್ರಾಶನ ಮಹಂಕರಿಷ್ಯೇ ಗಾಯತ್ರ್ಯಾಗೃಹ್ಯ ಗೋಮೂತ್ರಂ "ಗಂಧದ್ವಾರಾಂ" ಇತಿ ಗೋಮಯಂ "ಅಪ್ಯಾಯಶ್ವ" ಇತಿ ಕ್ಷೀರಂ "ದಧಿಕ್ರಾವ್ಣ್ಣ" ಇತಿ ದಧಿ "ಶುಕ್ರಮಸಿ" ಇತಿ ಆಜ್ಯಂ "ದೇವಶ್ಯತ್ವಾ" ಇತಿ ಶುದ್ಧೋದಕಂ "ಆಪೋಹಿಷ್ಠಾಮಯ" ಇತಿ ಮಂತ್ರಯೇತ್ ತಸ್ಯ ಚತುರ್ಭಾಗಂ ಹುತ್ವಾ ಸಪ್ತಪತ್ರಾಃ ಶುಭಾದರ್ಭಾ ಅಕ್ಷತಾಶ್ಚೈವ ಸಂಯುತಾಃ ತೇನೈವೋದ್ಧೃತ್ಯಹೋತವ್ಯಂ । ಅಗ್ನಯೇ ಸ್ವಾಹಾ । ಸೋಮಾಯ ಸ್ವಾಹಾ । ಇರಾವತೀ

ಧೇನುಮತಿಹಿಭೂತಂ ಸೂರ್ಯವಶಿನೀ ವನವೇಯಶಶ್ವೇವ್ಯಸ್ಕಭ್ನಾದ್ರೋದಸೀ ವಿಷ್ಣವೇತೇದಾಧಾರ ಪೃಥಿವೀಮಭಿತೋ ಮಾಯಾಯ್ಯೆಃ ಇದಂ ವಿಷ್ಣುರ್ವಿ– ಚಕ್ರಮೇತ್ರೆಧಾತ್ರಿ ಧಧೇಪದಂ ॥ ಸಮೂಳ್ಹಮಸ್ಯಪಾಗ್ಂಸುರೇ ಬ್ರಹ್ಮಜಿಜ್ಞಾಸಂ ಪ್ರಥಮಂ ಪುರಸ್ತಾತ್ ದ್ವಿಶೀಮತಸುರಚೋವೇನ ಆದಃ ಸುಬುದ್ಧಿಯಾ ಉಪಮಾ ಅಸ್ಯವಿಷ್ಟಾಃ ಸತಶ್ಚಯೋನಿ ಮಸತಶ್ಚವಿವಃ। ಗಾಯತ್ರ್ಯಾ ವಿಷ್ಣವಿ ಬ್ರಹ್ಮಣೇ ಸೂರ್ಯಾಯ ಸ್ವಾಹಾ ಇತಿ ಹೋಮಂ ॥ ಕುರ್ಯಾಜಲಮಧ್ಯೇವಾ ಪ್ರಣವೇನ ಅಥಚಕೇಶವೇತಿ ನಾಮಮಂತ್ರೇಣ ಸ್ತ್ರೀಣಾ ಪಂಚಗವ್ಯಂ ಕುರ್ಯಾತ್ ಪ್ರಾಶಯೇತ್ ॥ ಇತಿ ನದ್ಯಾದಿಕೇತದಾಸ್ನಾತ್ವಾ ಕೃತ್ವಾನಿಯಮೇವ ಚ ॥ ಬ್ರಾಹ್ಮಣೇ ಕ್ಷತ್ರಿಯಾ ವೈಶ್ಯಾ । ಶೂದ್ರಾವಾಪಿನಿರಾನನೆ । ಕೃತ್ವಾನೈಮಿತ್ತಿಕಂ ಕರ್ಮ । ಗತ್ವಾ ನಿಜಗೃಹಂ ಪುನಃ ವೇದೀಂಸಮ್ಯಕ್ಪ್ರಕುರ್ವೀತ । ಗೋಮಯೋನೋಪಲಿಪ್ಯತಾ ॥

ಇತಿ ಹೇಮಾದ್ರೌ॥ ರಂಗವಲ್ಲೀ ಸಮಾಯುಕ್ತೇ । ಸರ್ವತೋಭದ್ರಮಂಡಲೇ ॥ ಅವರ್ಣಂ ಸಜಲಂ ಕುಂಭಂ। ತಾಮ್ರಂ ಮೃಣ್ಮಯಮೇವವಾ ॥ ಸಂಸ್ಥಾಪ್ಯ ವಸ್ತ್ರ ಸಂಯುಕ್ತಂ ಕಂಠದೇಶೇ ವಿಶೋಭಿತಂ ॥ ಪಂಚರತ್ನ ಸಮಾಯುಕ್ತಂ ॥ ಗಂಧಪುಷ್ಪಾಕ್ಷತೈರ್ಯುತಂ ॥ ಸ ಹಿರಣ್ಯ ಸಮಾಸಾದ್ಯ । ತಾಮ್ರೇನ ಪಟಲೇನವಾ ॥ ವಂಶಮೃಣ್ಮಯ ಪಾತ್ರೇಣ । ಯಮಪೂರ್ಣೇನಚೈ ವಹಿ । ಆಚ್ಛಾದಯೇತ್ತಂಚೇಲೇನ । ಲಿಖೇದಷ್ಟದಳಂ ತತಃ ॥ ತತ್ರಿ ಸಪ್ತಋಷಿರ್ದಿವ್ಯಾ । ಶಕ್ತಿಯುಕ್ತಿಃ ಪ್ರಪೂಜಯೇತ್ ॥

## ಅಥ ಪೂಜಾವಿಧಾನಂ

ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ । ಮಮ...... ಅರುಂಧತೀ ಸಹಿತ ಕಶ್ಯಪಾದಿ ಋಷಿಪ್ರೀತ್ಯರ್ಥಂ ॥ ಋಷಿಪೂಜಾಂ ಕರಿಷ್ಯೇ । ತದಂಗತ್ವೇನ ಯಮುನಾಪೂಜಾಂ ಕರಿಷ್ಯೇ । ಪಾತ್ರಂ ಪ್ರಕ್ಷಾಳ್ಯ ಶುದ್ಧೋದಕಂ ಪೂರಯಿತ್ವಾ ॥ ಪ್ರತಿಮಾಂ ಸಂಸ್ಥಾಪ್ಯ ಕಲಶೋಪರಿ ಪುಷ್ಪಮಾಲ್ಯಾದಿನಾಮಲಂಕೃತ್ವಾ । ತದುಪರಿರಸಾಲಪರ್ಣಾನ್ಯಾಸ್ತೀರ್ಯ ಗಣಪತಿಪೂಜಾಂ ಕೃತ್ವಾ ॥

### ಯಮುನಾರ್ಚನಾ

ಕ್ಷೀರೋದಾರ್ಣವಸಂಭೂತೇ । ಕ್ಷೀರವರ್ಣಸಮಪ್ರಭೆ । ಪ್ರಸಾದಂ ಕುರುಮೇ ದೇವೀ ಯಮುನೇತೇ ನಮೋನಮಃ । ಇತಿ ಧ್ಯಾನಂ । ವಿಷ್ಣುಪಾದ ಸಮುದ್ಭೂತೇ । ಸರ್ವಕಾಮಪ್ರದಾಯಿನಿ ॥ ಸರ್ವಸೌಭಾಗ್ಯದೇದೇವೀ ಯಮುನಾಯ್ಯೆ ನಮೋಸ್ತುತೇ ॥ ಆವಾಹನಂ ॥ ಸೂರ್ಯಪಾದಾಬ್ಜಸಂಭೂತೇ ॥ ಸರ್ವಲೋಕಹಿತಪ್ರಿಯೇ ॥ ಸರ್ವಪಾಪವಿನಿರ್ಮುಕ್ತೇ । ತುಂಗಾಯ್ಯೆತೇ ನಮೋನಮಃ ॥ಪಾದ್ಯಂ॥ ಕೃಷ್ಣವೇಣ್ಯೈ ನಮಸ್ತುಭ್ಯಂ । ಕೃಷ್ಣವರ್ಣೇ ಸುಲಕ್ಷಿಣೇ ॥ ವಿಷ್ಣುಪ್ರಿಯೇ ಮಹಾದೇವೀ ಕೃಷ್ಣವೇಣ್ಯೈ ನಮೋಸ್ತುತೇ ॥ಮಧುಪರ್ಕಂ॥ ನಂದಿಪಾದೆ ನಮಸ್ತುಭ್ಯಂ । ಶಂಕರಾರ್ಧ ಶರೀರಿಣೇ ।

ಸರ್ವಲೋಕಹಿತೇದೇವೀ । ಭೀಮರಥ್ಯೈ ನಮೋಸ್ತುತೇ ॥ ಪಂಚಾಮೃತಸ್ನಾನಂ ॥ ಸಿಂಹಪಾದೇ ನಮಸ್ತುಭ್ಯಂ । ನರಸಿಂಹ ಸಮನ್ವಿತೇ ॥ ಸರ್ವಲಕ್ಷಣಸಂಪೂರ್ಣೇ । ಭವನಾಶಿತೇ ನಮಃ ॥ ಶುದ್ಧೋದಕಸ್ನಾನಂ ॥ ವಿಷ್ಣುಪಾದೋದ್ಭವೇದೇವಿ । ಗಂಗೇ ತ್ರಿಪಥಗಾಮಿನಿ ಜಟಾಜೂಟಗತೇ ಶಂಭೋರ್ಭಾಗೀರಥ್ಯೈ ನಮೋಸ್ತುತೇ ॥ವಸ್ತ್ರಂ॥ ಗೋದಾವರೀ ನಮಸ್ತುಭ್ಯಂ ಸರ್ವಾಭೀಷ್ಟಪ್ರದಾಯಿನಿ ॥ ಸರ್ವಪಾಪವಿನಿರ್ಮುಕ್ತೇ । ವೃದ್ಧಗಂಗೇ ನಮೋನಮಃ ॥ಕಂಚುಕಂ॥ ರಾಜಿತಂ ಬ್ರಹ್ಮಸೂತ್ರಂ ಚ । ಕಾಂಚನಚೋತ್ತರೀಯಕಂ ॥ ಅಹಂ ದಾಸ್ಯಾಮಿ ದೇವೇಶಿ ಯಮುನಾಯೈ ನಮೋಸ್ತುತೇ ॥ ಯಜ್ಞೋಪವೀತಂ ॥ ಮಾಣಿಕ್ಯಮುಕ್ತಾಫಲವಿದ್ರುಮೈಶ್ಚ । ಗೋಮೇಧವೈಢೂರ್ಯ– ಸುಪುಷ್ಪರಾಗೈ ॥ ದೇವಾಂಗನಾಭಿಶ್ಚಕೃತಂ । ಗೃಹಾಣ ದಿವ್ಯಾನಿ ರತ್ನಾಭರಣಾನಿ ದೇವಿ ॥ ಆಭರಣಂ ॥ ಚಂದನಾಗರು ಕಸ್ತೂರೀ ॥ ಗೋರೋಚನ ಸಕುಂಕುಮೈಃ ॥ ಹಿಮವಾಲುಕ ಸಂಯುಕ್ತಂ ಗಂಧೋಯಂ ಪ್ರತಿಗೃಹ್ಯತಾಂ ॥ ಗಂಧಂ ॥ ಶಾಲಿಯಾನ್ ಚಂದ್ರವರ್ಣಾಭಾ । ಹರಿದ್ರಾಚೂರ್ಣ ಸಂಯುತಾಂ ॥ ಅಕ್ಷತಾಂಶ್ಚ ಪ್ರಯಚ್ಛಾಮಿ । ಯಮುನೇತೇ ನಮೋನಮಃ । ಅಕ್ಷತಂ ॥ ಮಂದಾರೈಃ ಪಾರಿಜಾತೈಶ್ಚ । ಪಾಟಲಾಶೋಕ ಚಂಪಕೈಃ ॥ ತ್ವಾಂ ಪೂಜಯಾಮಿ ದೇವೇಶಿ । ವರದಾಯೈ ನಮೋಸ್ತುತೇ ॥ ಪುಷ್ಪಾಣಿ ಪೂಜಯಾಮಿ ॥

## ಅಥ ಅಂಗಪೂಜಾ

| | | | |
|---|---|---|---|
| ಓಂ ಚಂಚಲಾಯೈ ನಮಃ | ಪಾದೌ | ಪೂಜಯಾಮಿ | (ಪಾದಗಳು) |
| ಚಪಲಾಯೈ ನಮಃ | ಜಾನುನೀ | '' | (ನಡು) |
| ಕಮಲವಾಸಿನ್ಯೈ ನಮಃ | ಕಟಿಂ | '' | (ಕಟ) |
| ಧಾತ್ರ್ಯೈ ನಮಃ | ನಾಭಿಂ | '' | (ನಾಭಿ) |
| ಮನ್ಮಥವಾಸಿನ್ಯೈ ನಮಃ | ಸ್ತನೌ | '' | (ಮೊಲೆ) |
| ಲಲಿತಾಯೈ ನಮಃ | ಭುಜೌ | '' | (ಭುಜ) |
| ಕಂಬುಗ್ರೀವಾಯೈ ನಮಃ | ಕಂಠಂ | '' | (ಕುತ್ತಿಗೆ) |
| ಮಾಯಾಯೈ ನಮಃ | ಮುಖಂ | '' | (ಮುಖ) |
| ಶ್ರಿಯೈ ನಮಃ | ಲಲಾಟಂ | '' | (ಹಣೆ) |
| ಭಾಗೀರಥ್ಯೈ ನಮಃ | ಶಿರಃ | '' | (ತಲೆ) |
| ಯಮುನಾಯೈ ನಮಃ | ಸರ್ವಾಂಗಾನಿ | '' | (ಎಲ್ಲಾ ಅಂಗಗಳು) |

ದಶಾಂಗಂ ಗುಗ್ಗುಲೋಪೇತಂ ....... ಇತಿ ಮಂತ್ರೇಣ ಧೂಪಂ । ಸಾಜ್ಯಂ ತ್ರಿವರ್ತಿ ............ ಇತಿ ಮಂತ್ರೇಣ ದೀಪಂ ॥ ಸರ್ವಭಕ್ಷ್ಯೈಶ್ಚಭೋಜ್ಯೈಶ್ಚ । ರಸೈಃಷಡ್ಭಿಃ ಸಮನ್ವಿತಂ ' ನೈವೇದ್ಯಂ ಸ್ವಾದುಚಾನೀತಂ । ಪ್ರೀತ್ಯರ್ಥಂ ದೇವಿ ಗೃಹ್ಯತಾಂ ॥ ನೈವೇದ್ಯಂ ॥ ಪಾನೀಯಂ ಪಾವನಂ ಶ್ರೇಷ್ಠಂ । ಗಂಗಾದಿಸರಿದುದ್ಧೃತಂ । ಸ್ವೀಕುರುಷ್ವ ಮಹಾದೇವಿ ।

ಯಮುನಾಯ್ಯೆ ನಮೋಽಸ್ತುತೇ ॥ ಸ್ವಾದೂದಕ ಹಸ್ತಪ್ರಕ್ಷಾಳನಂ ಪಾದಪ್ರಕ್ಷಾಳನಾನಿ ಸಮರ್ಪಯಾಮಿ ॥ ಪೂಗೀಫಲಸಮಾಯುಕ್ತಂ.... ಇತಿ ತಾಂಬೂಲಂ ॥ ಅಜ್ಞಾನಧ್ವಾಂತವಿಧ್ವಂಸಿ । ಕರ್ಮದಕ್ಷೇ ಸುರೇಶ್ವರಿ ॥ ನೀರಾಜಯಾಮಿ ದೇವೇಶಿ ॥ ಯಮುನಾಯ್ಯೆ ನಮೋಽಸ್ತುತೇ ॥ ವೇದಾಹಮೇತಂ ಪುರುಷಂ । ಮಹಾಂತಂ ಆದಿತ್ಯವರ್ಣಂ ತಮಸಸ್ತುಪಾರೇ ॥ ಸರ್ವಾಣಿ ರೂಪಾನಿ ವಿಚಿತ್ಯಧೀರಃ । ನಾಮಾನಿ ಕೃತ್ವಾಭಿವದ ಯದಾಸ್ತೇ ॥ ಯಮುನಾಯ್ಯೆ ನೀರಾಜನಂ ॥ ಕರಿಷ್ಯಾಮಿ ವ್ರತಂ ದೇವಿ । ತ್ವದ್ಭಕ್ತಸ್ತ್ವತ್ಪರಾಯಣಃ ಗೃಹಾಣೇದಂ ಮಹಾದೇವಿ ಯಮುನಾಯ್ಯೆ ನಮೋಽಸ್ತುತೇ ॥ ಪ್ರಾರ್ಥನಾ ॥ ತ್ರಾಹಿ ತ್ರಾಹಿ ಮಹಾದೇವೀ । ಸರ್ವಪಾಪಹರೇ ಶುಭೇ ॥ ನಮಾಮಿ ಶಿರಸಾದೇವಿ । ಶರಣಂ ತ್ವಾಂ ಪ್ರಜಾಮ್ಯಹಂ ॥ ನಮಸ್ಕಾರಂ ॥ ಛತ್ರಚಾಮರಾದಿ ನಾನಾವಿಧೋಪಚಾರ ಪೂಜಾರ್ಥ ಸಮರ್ಪಯಾಮಿ ॥ ಯಸ್ಯಸ್ಮೃತ್ಯಾಚ ..... ಯಮುನಾದೇವಿ ಸುಪ್ರೀತಾ ಸುಪ್ರಸನ್ನಾ ವರದಾಭವತು ॥

## ಅಥ ಋಷಿಪೂಜಾ

ಆದೌ ಪ್ರತ್ಯೇಕಮೇಕೈಕಂ । ಋಷಿಂ ಸಂಪೂಜ್ಯ ತದನಂತಂ ॥ ಸಮಷ್ಟ್ಯಾ ॥ ಸರ್ವಾ ಋಷೀ ಸಂಪೂಜಯೇತ್ ॥ ಏವಂಗುಣೇತ್ಯಾದಿ ಸಂಕಲ್ಪ್ಯ ॥

## ಅಥ ಸಪ್ತಋಷಿಧ್ಯಾನಂ

ಕಶ್ಯಪಃ । ಸರ್ವಲೋಕಾಢ್ಯಃ । ಸರ್ವಶಾಸ್ತ್ರಾರ್ಥಕೋವಿದಃ ॥ ಆತ್ಮಯೋಗಬಲೇನೈವ । ಸೃಷ್ಟಿಸ್ಥಿತ್ಯಂತಕಾರಕಃ ॥೧॥ ಕಶ್ಯಪಾಯ ನಮಃ ॥ಧ್ಯಾನಂ॥ ಅಗ್ನಿಹೋತ್ರರತಂ ಶಾಂತಂ । ಸದಾವ್ರತಪಾರಾಯಣಂ ಸತ್ಕರ್ಮನಿರತಂ ಶಾಂತಂ । ಮರ್ಚಯೇದತ್ರಿಮವ್ಯಯಂ ॥೨॥ ಅತ್ರಯೇ ನಮಃ ॥ಧ್ಯಾನಂ॥ ಜಟಿಲಂ ತಪಸಾಸಿದ್ಧಂ ಯಜ್ಞಸೂತ್ರಾಕ್ಷಧಾರಣಂ ॥ಕಮಂಡಲುಧರಂ ನಿತ್ಯಂ । ಭರದ್ವಾಜಂ ನತೋಸ್ಮ್ಯಹಂ । ॥೩॥ ಭರದ್ವಾಜಾಯ ನಮಃ ॥ ಧ್ಯಾನಂ ॥ ಕೃಷ್ಣಾಜಿನಧರಂ ದೇವಂ । ಸದಂಡಪರಿದಾನಕಂ ದರ್ಭಪಾಣಿಂ ಜಟಾಜೂಟಃ । ವಿಶ್ವಾಮಿತ್ರಂ ಸನಾತನಂ ॥೪॥ ವಿಶ್ವಾಮಿತ್ರಾಯ ನಮಃ ॥ಧ್ಯಾನಂ॥ ಯೋಗಾಢ್ಯಃ ಸರ್ವಭೂತಾನಾ । ಮನ್ನದಾನರತಃ ಸದಾ ॥ ಅಹಲ್ಯಾಯಾಃಪತಿಃ ಶ್ರೀಮಾ ಗೌತಮಃ ಸರ್ವಪಾವನಂ ॥ ಗೌತಮಾಯ ನಮಃ ॥ಧ್ಯಾನಂ॥೫॥ ಅಕ್ಷಸೂತ್ರಧರಂ ದೇವಂ । ಋಷೀಣಾಮಧಿಪಂ ಪ್ರಭುಂ ॥ ದರ್ಭಪಾಣಿಂ ಜಟಾಜೂಟಂ ಮಹಾತೇಜಸ್ವಿನಂ ಭಜೇ ॥ ಜಮದಗ್ನಿಯೇ ನಮಃ ॥ ಧ್ಯಾನಂ ॥೬॥ ಶಿವಧ್ಯಾನರತಂ ಶಾಂತಂ । ತ್ರಿದಶರೈಭಿಪೂಜಿತಂ ॥ ಬ್ರಹ್ಮಸೂನುಂ ಮಹಾತ್ಮಾನಂ । ವಸಿಷ್ಠಂ ಪೂಜಯೇ ಸದಾ ॥ ವಸಿಷ್ಠಾಯ ನಮಃ ॥ಧ್ಯಾನಂ ॥೭॥

## ಅಥ ಕಶ್ಯಪಪೂಜಾ

ಜಟಿಲಂ ಭಸ್ಮದಿಗ್ಧಾಂಗಂ । ಸಾಕ್ಷಸೂತ್ರ ಕಮಂಡಲುಂ । ವಲ್ಕಲಾಜಿನ ಕೌಪೀನಂ ।

ಸಾತಪತ್ರಂ ಸದಂಡಕಂ। ಸಕುಶಂಚೋತ್ತರೀಯಂ ಚ। ಸಪತ್ನೀಕಂ ಪ್ರಪೂಜಯೇತ್।
ಋಷೇ ಮಂತ್ರಕೃತಾಮಿತ್ಯಸ್ಯ ಮಂತ್ರಸ್ಯ। ಕಶ್ಯಪಋಷಿಃ ಕಶ್ಯಪೋ ದೇವತಾ। ಪಂಕ್ತೀಛ್ಛಂದಃ ಕಶ್ಯಪಾವಾಹನೇ ವಿನಿಯೋಗಃ । ಮಂತ್ರಃ ಋಷೇ ಮಂತ್ರಕೃತಾಂ– ಸ್ತೋಮೈಃ।ಕಶ್ಯಪೋದ್ವರ್ಧಯರ್ಗಿರಿಃ। ಸೋಮಂ ನಮಸ್ಯ ರಾಜಾನಾಂ। ಯೋಮಜ್ಞೇ– ವೀರುಧಾಂಪತಿರಿಂದ್ರಾಯೇಂದ್ರೋಪರಿಸ್ರವ। ಓಂ ಭೂಃ ಅದಿತೀಸಹಿತ ಕಶ್ಯಪಮಾ– ವಾಹಯಾಮಿ। ಓಂ ಭುವಃ ಓಂ ಸುವಃ ಓಂ ಭೂರ್ಭುವಸ್ಸುವಃ। ಕಶ್ಯಪಾಯ ನಮಃ। ॥ಆಸನಂ॥ ಮರೀಚಿಪುತ್ರಾಯ ನಮಃ॥ಪಾದ್ಯಂ॥ ಸೂರ್ಯಜನಕಾಯನಮಃ। ಅರ್ಘ್ಯಂ। ಇಂದ್ರತಾತಾಯ ನಮಃ॥ಆಚಮನೀಯಂ॥ ವಾಮನಗುರವೇ ನಮಃ। ಮಧುಪರ್ಕಂ। ಅದಿತಿ ಭರ್ತ್ರೇ ನಮಃ॥ ಪಂಚಾಮೃತಸ್ನಾನಂ॥ ಬ್ರಹ್ಮನೇತ್ರೇ ನಮಃ॥ ಶುದ್ಧೋದಕಸ್ನಾನಂ॥ ದೇವಪ್ರಿಯಾಯ ನಮಃ॥ ವಸ್ತ್ರದ್ವಯಂ॥ ಸುವರ್ಚಸೇ ನಮಃ॥ ಯಜ್ಞೋಪವೀತಂ॥ ವಿಶಾಲಾಕ್ಷಾಯ ನಮಃ॥ ಆಭರಣಂ॥ ಸರ್ವವಿಧೇನಮಃ॥ಗಂಧಂ॥ ಮಹತೇ ನಮಃ ॥ಅಕ್ಷತಂ॥ ಓಂ ಕಶ್ಯಪಾಯ ನಮಃ। ಮರೀಚಿಪುತ್ರಾಯ ನಮಃ। ಕವಿ ಜನಕಾಯ ನಮಃ। ಇಂದ್ರತಾತಾಯ ನಮಃ। ವಾಮನಗುರುವೇ ನಮಃ। ಅದಿತಿಭರ್ತ್ರೇ ನಮಃ। ದೇವ– ಪ್ರಿಯಾಯ ನಮಃ। ಸುವರ್ಚಸೇ ನಮಃ। ವಿಶಾಲಾಕ್ಷಾಯ ನಮಃ। ಸರ್ವವಿದೇನಮಃ। ಮಹತೇ ನಮಃ। ವಿಮಲಾಯ ನಮಃ॥ ಇತಿ ಪುಷ್ಪಾಣಿ ಸಮರ್ಪಯಾಮಿ॥

ಧೀಮತೇ ನಮಃ ॥ ಧೂಪಂ । ಅಕಲ್ಮಷಾಯನಮಃ ॥ ದೀಪಂ ॥ ಸುಮನೋರಥಾಯ ನಮಃ॥ ನೈವೇದ್ಯಂ॥ ಜಟಿನೇ ನಮಃ॥ ತಾಂಬೂಲಂ॥ ದೀಪ್ತತೇಜಸೇ ನಮಃ॥ ನೀರಾಜನಂ॥ ದಂಡಿನೇ ನಮಃ॥ಮಂತ್ರಪುಷ್ಪಂ॥

## ಅಥ ಅತ್ರಿಪೂಜಾ

ಮರೀಚತನಯಂ ದೇವಂ। ಸಾಕ್ಷಸೂತ್ರಂ ಕಮಂಡಲಂ॥ ಅನಸೂಯಾಪತಿಂ ಶಾಂತಂ ಮಂತ್ರಿಂ ನಿಷ್ಕಲ್ಮಷಂ ಮುನಿಂ॥ ಜಟಿಲಂ ಭಸ್ಮದಿಗ್ಧಾಂಗಂ। ಸಾಕ್ಷ ಸೂತ್ರ ಕಮಂಡಲುಂ ವಲ್ಕಲಾಜಿನ ಕೌಪೀನಂ । ಸಾತಪತ್ರಂ ಸ ದಂಡಕಂ ॥ ಸಕುಶಂಚೋತ್ತರೀಯಂ ಚ। ಸಪತ್ನೀಕಂ ಪ್ರಪೂಜಯೇತ್ ॥ ಸ್ವರ್ಭಾನೋರಿತ್ಯಸ್ಯ ಮಂತ್ರಸ್ಯ । ಮರೀಚಿ ಪುತ್ರೋ ಅತ್ರಿಋಷಿಃ ॥ ಅತ್ರಿರ್ದೇವತಾ ತ್ರಿಷ್ಟುಪ್ ಛಂದಃ– ಅತ್ರ್ಯಾವಾಹನೇ ವಿನಿಯೋಗಃ ॥ ಸ್ವರ್ಭಾನೋರಧಯದಿಂದ್ರಿಯಾಮಾ । ಆಮೋದಿವಾವರ್ತಮಾನಾ ಅವಾಹಯರ್ ॥ ಗುಹ್ಯಂ ಸೂರ್ಯಂ ತಮಸಾವೃತೇನ । ತುರಿಯೇಣ । ಬ್ರಹ್ಮಣಾವಿಂದದತ್ರಿಃ ॥ ಓಂ ಭೂಃ ॥ ಅನುಸೂಯಾ ಸಹಿತ ಅತ್ರಿಮಾವಾಹಯಾಮಿ॥ಆಸನಂ॥ ಧೀಮತೇ ಪಾದ್ಯಂ॥ ಯೋಗೀಂದ್ರಾಯ ನಮಃ॥ ಅರ್ಘ್ಯಂ॥ ದತ್ತಾತ್ರೇಯ ಪ್ರಿಯಾಯ ನಮಃ॥ ಆಚಮನೀಯಂ॥ ಚಂದ್ರತಾತಾಯ ನಮಃ ॥ ಮಧುಪರ್ಕಂ॥ ಅನಸೂಯಾಪತೇ ನಮಃ॥ ಪಂಚಾಮೃತಸ್ನಾನಂ। ನಿತ್ಯಶುದ್ಧಾಯ




ನಮಃ ॥ ಶುದ್ಧೋದಕಂ ॥ ವಲ್ಕಲಧಾರಿಣೇ ನಮಃ ॥ ವಸ್ತ್ರಂ ॥ ಬ್ರಹ್ಮನಿಷ್ಠಾಯ ನಮಃ ॥ ಯಜ್ಞೋಪವೀತಂ ॥ ದೀಪ್ತಾಯ ನಮಃ ॥ ಆಭರಣಂ ॥ ದಂಡಧಾರಿಣೇ ನಮಃ ॥ ಗಂಧಂ ॥ ತ್ರಿಮೂರ್ತಜನಕಾಯ ನಮಃ ॥ ಅಕ್ಷತಂ ॥ ಊರ್ಧ್ವರೇತಸೇ ನಮಃ ॥ಪುಷ್ಪಂ॥ ಅತ್ರಯೇ ನಮಃ ॥ ಧೀಮತೇ ನಮಃ । ಯೋಗೀಂದ್ರಾಯ ನಮಃ । ದತ್ತಾತ್ರೇಯಪ್ರಿಯಾಯ ನಮಃ । ಚಂದ್ರತಾತಾಯ ನಮಃ । ದ್ಯುತಿಮತೇ ನಮಃ ತ್ರಿಮೂರ್ತಿಜನಕಾಯ ನಮಃ । ಮರೀಚಿಪುತ್ರಾಯ ನಮಃ ॥ ಪುಷ್ಪಂ ॥ ಸುಗಂಧದೇಹಾಯ ನಮಃ ॥ ಧೂಪಂ ॥ ದ್ಯುತಿಮತೇ ನಮಃ ॥ ದೀಪಂ ॥ ನಿತ್ಯತೃಪ್ತಾಯ ನಮಃ ॥ ನೈವೇದ್ಯಂ ॥ ವಿರಾಗಿಣೇ ನಮಃ ॥ ತಾಂಬೂಲಂ ॥ ಅರ್ಚಿಷ್ಮತೇ ನಮಃ । ನೀರಾಜನಂ ॥ ಭ್ರಾಜಿಷ್ಣವೇ ನಮಃ ॥ ಮಂತ್ರಪುಷ್ಪಂ ॥ ಸಂಯಮಿನೇ ನಮಃ । ಪ್ರದಕ್ಷಿಣಂ ॥ ಧರ್ಮಿಣೇ ನಮಃ ॥ ನಮಸ್ಕಾರಂ ॥ ಕಲ್ಮಶಘ್ನಾಯ ನಮಃ ॥ ಪುನರರ್ಘ್ಯಂ ॥ ಅತ್ರಯೇ ನಮಃ ॥ ಸರ್ವೋಪಚಾರಪೂಜಾಂ ॥

## ಅಥ ಭರದ್ವಾಜ ಪೂಜಾ

ಭರದ್ವಾಜಂ ಮಹಾಶಾಂತಂ । ಸುಶೀಲಾಪತಿಮೂರ್ಜಿತಂ ಅಕ್ಷತಗಂಧ ಹಸ್ತಂ ಚ । ಮುನಿಮಾಂತರಸಂ ಭಜೇ । ಜಟಿಲಂ ಭಸ್ಮಾದಿಗ್ಧಾಂಗಂ । ಸಾಕ್ಷಸೂತ್ರ ಕಮಂಡಲಂ । ವಲ್ಕಲಾಜಿನ ಕೌಪೀನಂ । ಸಾತಪತ್ರಂ ಸದಂಡಕಂ । ಸಕುಶಂಚೋತ್ತರೀಯಂ ಚ । ಸಪತ್ನೀಕಂ ಪ್ರಪೂಜಯೇತ್ । ಆನಂದನ್ನಿ ತ್ಯಸ್ಯ ಮಂತ್ರಸ್ಯ ಸೌಜೀಕೋ ಭರಧ್ವಾಜಋಷಿಃ । ತ್ರಿಷ್ಟುಪ್ ಛಂದಃ ಭಂದ್ವಾಜೋದೇವತಾ । ಭರದ್ವಾಜಾವಾಹನೇವಿನಿಯೋಗಃ ॥ಮಂತ್ರಂ॥ ಅವಿಂದೇತಿಹಿ ಹಿತಂ । ಮದಾಸೀದ್ಯಜ್ಞಸ್ಯಧಾಮ ಪರಮಂಗುಹಯತ್ । ಧಾತುರ್ದ್ಯುತಾನಾತ್ಸವಿತಸ್ಯ । ವಿಷ್ಣೋರ್ಭರದ್ವಾಜೋ ಬೃಹದಾಚಕ್ರೇ ಅಗ್ನೇಃ ಓಂ ಭೂಃ । ಸುಶೀಲಾಸಹಿತಂ ಭರದ್ವಾಜ ಮಾವಾಹಯಾಮಿ ॥ಆಸನಂ॥ ಭ್ರಾಜಿಷ್ಣವೇ ನಮಃ ॥ ಪಾದ್ಯಂ ॥ ವಿದುಷೇ ನಮಃ ॥ಅರ್ಘ್ಯಂ॥ ಅಕಲ್ಮಷಾಯ ನಮಃ । ಆಚಮನೀಯಂ ॥ ವಲ್ಕಲಧಾರಿಣೇ ನಮಃ ॥ಮಧುಪರ್ಕಂ॥ ಪವಿತ್ರದೇಹಾಯ ನಮಃ ॥ ಪಂಚಾಮೃತಸ್ನಾನಂ ॥ ಪರಿಶುದ್ಧಾಯ ನಮಃ ॥ ಶುದ್ಧೋದಕಂ ॥ ಜ್ಞಾನಿನೇ ನಮಃ ॥ ವಸ್ತ್ರಂ ॥ ವೀತರಾಗಾಯ ನಮಃ ॥ಉಪವೀತಂ॥ ಬ್ರಹ್ಮಚಾರಿಣೇ ನಮಃ ॥ ಆಭರಣಂ ॥ ತ್ರಿಕಾಲಜ್ಞಾನಿನೇ ನಮಃ ॥ಗಂಧಂ ॥ ಮುನಯೇನಮಃ ॥ ಅಕ್ಷತಾನ್ ॥ ಪವಿತ್ರಾಯ ನಮಃ ॥ಪುಷ್ಪಂ॥ ಭರಧ್ವಾಜಾಯ ನಮಃ । ಭ್ರಾಜಿಷ್ಣವೇ ನಮಃ । ವಿದುಷೇ ನಮಃ । ಅಕಲ್ಮಷಾಯನಮಃ । ವಲ್ಕಲಧಾರಿಣೇ ನಮಃ । ಪವಿತ್ರದೇಹಾಯನಮಃ । ಪರಿಶುದ್ಧಾಯ ನಮಃ । ಜ್ಞಾನಿನೇ ನಮಃ । ಮುನಯೇ ನಮಃ । ಬ್ರಹ್ಮಚಾರಿಣೇ ನಮಃ । ತ್ರಿಕಾಲಜ್ಞಾಯ ನಮಃ । ಸುಪ್ರಸಿದ್ಧಾಯ ನಮಃ । ಸುವಾಸಿಕಾಯ ನಮಃ ॥ ಧೂಪಂ ॥ ಜ್ಞಾನಿನೇ ನಮಃ ॥ ॥ದೀಪಂ ॥ ಅವಾಪ್ತಸಕಲಕಾಮ್ಯಾಯ ನಮಃ ॥

ನೈವೇದ್ಯಂ ॥ ಸುಮನಸ್ಕಾಯ ನಮಃ ॥ತಾಂಬೂಲಂ॥ ತೇಜಸೇ ನಮಃ ॥ ನೀರಾಜನಂ ॥ ಭ್ರಾಜಿಷ್ಣವೇ ನಮಃ ॥ ॥ಮಂತ್ರಪುಷ್ಪಂ ॥ ಜಿತಕ್ರೋಧಾಯ ನಮಃ ॥ ಪ್ರದಕ್ಷಿಣಂ ॥ ಆನಂದಿನೇ ನಮಃ ॥ ನಮಸ್ಕಾರಂ ॥ ಮುಮುಕ್ಷವೇ ನಮಃ ॥ ಪುನರರ್ಘ್ಯಂ ॥ ಭರದ್ವಾಜಾಯ ನಮಃ ॥ ಸರ್ವೋಪಚಾರಪೂಜಾಂ ॥

## ವಿಶ್ವಾಮಿತ್ರ ಪೂಜಾ

ಹಿರಣ್ಯಗರ್ಭಸಂಭೂತಂ । ಜಟಾಮಕುಟಧಾರಿಣಂ । ಕುಮುದ್ವತೀಪತಿಂಕಾಂತಂ । ವಿಶ್ವಾಮಿತ್ರ ಮಹಂಭಜೇ । ಜಟಿಲಂಭಸ್ಮದಿಗ್ಧಾಂಗಂ । ಸಾಕ್ಷಸೂತ್ರ ಕಮಂಡಲಂ । ವಲ್ಕಲಾಜಿನ ಕೌಪೀನಂ । ಸಾತಪತ್ರಂ ಸದಂಡಕಂ । ಸಕುಶಂಚೋತ್ತರೀಯಂ ಚ । ಸಪತ್ನೀಕಂ ಪ್ರಪೂಜಯೇತ್ ।

ಇಮೇ ಭೋಜಾ ಇತ್ಯಸ್ಯ ಮಂತ್ರಸ್ಯ । ಪ್ರಗಾಧೋ ವಿಶ್ವಾಮಿತ್ರ ಋಷಿ ತ್ರಿಷ್ಟುಪ್ ಛಂದಃ । ಗಾಧಿಪುತ್ರೋ ವಿಶ್ವಾಮಿತ್ರೋ ದೇವತಾ । ವಿಶ್ವಾಮಿತ್ರಾವಾಹನೇ ವಿನಿಯೋಗಃ ॥ಮಂತ್ರಂ॥ ಇಮೇ ಭೋಜ ಅಂಗೀರಸೋ ವಿರೂಪಾದಿ ವಸ್ರುಧಾಸೋ ಅಸುರಸ್ಯವೀರಾಃ । ವಿಶ್ವಾಮಿತ್ರಾಯ ದದತೋಮಘಾನಿಸಹಸ್ರಸಾವೇ ಪ್ರತಿರಂತ ಆಯಂ । ಕುಮುದ್ವತೀ ಸಹಿತ ವಿಶ್ವಾಮಿತ್ರಮಾವಾಹಯಾಮಿ ॥ಆಸನಂ॥ ದಗ್ಧ ಕಲ್ಮಷಾಯ ನಮಃ ॥ಪಾದ್ಯಂ॥ ಶುದ್ಧಬುದ್ಧಯೇ ನಮಃ ॥ಅರ್ಘ್ಯಂ॥ ಉಗ್ರತಪಸೇ ನಮಃ ।ಆಚಮನಂ । ಅವ್ಯಗ್ರಾಯ ನಮಃ ॥ಮಧುಪರ್ಕಂ॥ ದಂಡಪಾಣಯೇ ನಮಃ॥ ಪಂಚಾಮೃತಸ್ನಾನಂ ॥ ಕಮಂಡಲಾಯ ನಮಃ ॥ ಶುದ್ಧೋದಕಂ ॥ ಅಜಿನಾಂಬರಾಯ ನಮಃ ॥ ವಸ್ತ್ರಂ ॥ ತೇಜಸ್ವಿನೇ ನಮಃ ॥ ಉಪವೀತಂ ॥ ರಮ್ಯಾಯಯನಮಃ ॥ ಆಭರಣಂ ॥ ಕುಶಿಕಪಾತ್ರಾಯನಮಃ ॥ಗಂಧಂ॥ ವರದಾಯ ನಮಃ ॥ಅಕ್ಷತಂ ॥ ಗಾಯತ್ರೀ ಪ್ರಿಯಾಯ ನಮಃ ॥ ವೇದಶಾಸ್ತ್ರ ತತ್ವಜ್ಞಾಯ ನಮಃ । ಅಮಾಯಿನೇ ನಮಃ । ಬ್ರಹ್ಮಋಷಯೇ ನಮಃ । ಮುಮುಕ್ಷವೇ ನಮಃ । ನೀರಾಯನಮಃ । ದಗ್ಧಕಲ್ಮಶಾಯನಮಃ । ಅನಘತೇಜಸೇ ನಮಃ । ಬುದ್ಧಿಪ್ರದಾಯನಮಃ । ಉಗ್ರತಪಸೇನಮಃ । ಅವ್ಯಗ್ರಾಯನಮಃ । ದಂಡಪಾಣಯೇ ನಮಃ । ಕಮಂಡಲಧರಾಯನಮಃ । ಅಜನಾಂಬರಾಯನಮಃ । ತೇಜಸ್ವಿನೇನಮಃ । ರಮ್ಯಾಯನಮಃ । ಕುಶಿಕಪಾತ್ರಾಯನಮಃ । ವರದಾಯ ನಮಃ । ಗಾಧಿ ತನೂಭವಾಯನಮಃ । ಕಮಂಡಲಧರಾಯನಮಃ ॥ಧೂಪಂ॥ ತೇಜಸೇನಮಃ ॥ದೀಪಂ॥ ರಮಾಯನಮಃ ॥ ನೈವೇದ್ಯಂ॥ ಕೌಶಿಕಾಯನಮಃ ॥ ತಾಂಬೂಲ ॥ ವರದಾಯನಮಃ ॥ ನೀರಾಜನಂ ॥ ಗಾಧಿತನಯಾಯನಮಃ ॥ ಮಂತ್ರಪುಷ್ಪಂ ॥ ರುದ್ರಪ್ರಿಯಾಯನಮಃ ॥ಪ್ರದಕ್ಷಿಣಂ॥ ಗಾಯತ್ರೀ ಜಪಾನಂದನಾಯನಮಃ ॥ ನಮಸ್ಕಾರಂ॥ ವೇದಶಾಸ್ತ್ರ–ತತ್ವಜ್ಞಾಯನಮಃ ॥ ಪುನರರ್ಘ್ಯಂ ॥ವಿಶ್ವಾಮಿತ್ರಾಯನಮಃ ॥ ಸರ್ವೋಪಚಾರಪೂಜಾಂ ಸಮರ್ಪಯಾಮಿ ॥





## ಅಥ ಗೌತಮ ಪೂಜಾ

ರಹೂಗಣಾತ್ಮಜಂ ಶಾಂತಂ । ತ್ರಿಪುಂಡ್ರಾಂಕಿತಮಸ್ತಕಂ । ಅಕ್ಷಸ್ರಕುಂಡಲೇ ದಂಡ್ರ್ । ದಧಾನಂ ಗೌತಮಂ ಭಜೇ ॥ ಜಟಿಲಂ ಭಸ್ಮದಿಗ್ಧಾಂಗಂ । ಸಾಕ್ಷಸೂತ್ರ ಕಮಂಡಲುಂ ॥ ವಲ್ಕಲಾಜಿನಕೌಪೀನಂ । ಸಾತಪತ್ರಂ ಸದಂಡಕಂ । ಸಕುಶಂಚೋತ್ತರೀ– ಯಂ ಚ । ಸಪತ್ನೀಕಂ ಪ್ರಪೂಜಯೇತ್ ॥ ಅಭೀತ್ವಾಗೌತಮ ಇತ್ಯಸ್ಯ । ಮಂತ್ರಸ್ಯ । ಗೌತಮಋಷಿಃ ॥ ಗಾಯತ್ರೀಛಂದಃ । ಗೌತಮೋದೇವತಾ । ಗೌತಮಾವಾಹನೇ ವಿನಿಯೋಗಃ ॥ ಅಭಿತ್ವಗೌತಮಾಂಗಿರಾ । ಜಾತವೇದೋವಿಷರ್ಚಣೆ । ದ್ಯುಮ್ನೈ ರಭಿಪ್ರಣೋನಮಃ ॥ ಅಹಲ್ಯಾಪತಿಂ ಗೌತಮಮಾವಾಹಯಾಮಿ ॥ ಆಸನಂ ॥ ಭಸ್ಮೋದ್ಧೂಳಿತವಿಗ್ರಹಾಯನಮಃ ॥ ಪಾದ್ಯಂ ॥ ರುದ್ರಾಕ್ಷಮಾಲಿನೇನಮಃ ॥ ಅರ್ಘ್ಯಂ॥ ರುದ್ರಪ್ರಿಯಾಯನಮಃ ॥ಆಚಮನಂ॥ ದೇವಪೂಜಾನಿರತಾಯನಮಃ ॥ಮಧುಪರ್ಕಂ॥ ಅಹಲ್ಯಾಪತಯೇ ನಮಃ ॥ ಪಂಚಾಮೃತಂ ॥ ಧ್ವಸ್ತಪಾಪಾಯನಮಃ ॥ ಶುದ್ಧೋದಕಂ ॥ ಕಮಂಡಲುಧರಾಯನಮಃ ॥ ವಸ್ತ್ರಂ ॥ ಸುವರ್ಚಸೇನಮಃ ॥ ಯಜ್ಞೋಪವೀತಂ ॥ ನಿಷ್ಕಲ್ಮಷಾಯನಮಃ ॥ ಆಭರಣಂ ॥ ನಿರುಪದ್ರವಾಯನಮಃ ॥ಗಂಧಂ॥ ನಿರಹಂಕಾರಾಯನಮಃ ॥ಅಕ್ಷತಾಂ॥

ಗೌತಮಾಯನಮಃ । ಭಸ್ಮೋದ್ಧೂಳಿತವಿಗ್ರಹಾಯನಮಃ । ರುದ್ರಾಕ್ಷಮಾಲಿನೇ ನಮಃ । ಶಿವಲಿಂಗಾರ್ಚಕಾಯನಮಃ । ಅಹಲ್ಯಾಪತಯೇನಮಃ । ಧ್ವಸ್ತಪಾಪಾಯ ನಮಃ । ಕಮಂಡಲುಧರಾಯನಮಃ । ಸುವರ್ಚಸೇನಮಃ । ನಿಷ್ಕಲ್ಮಷಾಯನಮಃ । ನಿರುಪದ್ರವಾಯ ನಮಃ । ನಿರಹಂಕಾರಾಯನಮಃ । ವಲ್ಕಲಾಂಬರಾಯನಮಃ । ನಿತ್ಯತೃಪ್ತಾಯನಮಃ । ನಿರ್ಮೋಹಾಯನಮಃ । ವಿಮಲಾಯನಮಃ ॥ಧೂಪಂ॥ ದ್ಯುತಿಮತೇ ನಮಃ ॥ದೀಪಂ॥ ನಿತ್ಯತೃಪ್ತಾಯನಮಃ ॥ನೈವೇದ್ಯಂ॥ ಅಕ್ಲೇಶಾಯನಮಃ ॥ ತಾಂಬೂಲಂ ॥ ವರದಾಯನಮಃ ॥ ನೀರಾಜನಂ । ಜಟಿನೇನಮಃ ॥ ಮಂತ್ರಪುಷ್ಪಂ ॥ ಸಂಯಮಿನೇನಮಃ ॥ ಪ್ರದಕ್ಷಿಣಂ ॥ ಮುಮುಕ್ಷವೇನಮಃ ॥ ನಮಸ್ಕಾರಂ ॥ ಗೌತಮಾಯನಮಃ ॥ ಪುನರರ್ಘ್ಯಂ ॥ ಗೌತಮಾಯನಮಃ ॥ ಸರ್ವೋಪಚಾರ ಪೂಜಾ ಸಮಾಪ್ತಃ ॥

## ಜಮದಗ್ನಿ ಪೂಜಾ

ಶಾಂತಂ ಜಿತಾರಿಷಡ್ವರ್ಗಂ॥ ಭೃಗುಪುತ್ರಂ ಮಹಾದ್ಯುತಿಂ॥ ದಂಡಾಕ್ಷಸೂತ್ರಪಾಣಿಂ ಚ । ಜಮದಗ್ನಿಂ ನಮಾಮ್ಯಹಂ । ಜಟಿಲಂ ಭಸ್ಮದಿಗ್ಧಾಂಗಂ । ಸಾಕ್ಷಂ ಸೂತ್ರಕಮಂಡಲುಂ ॥ ವಲ್ಕಲಾಜಿನ ಕೌಪೀನಂ । ಸಾತಪತ್ರಂ ಸದಂಡಕಂ ॥ ಸಕುಶಂಚೋತ್ತರೀಯಂ ಚ । ಸಪತ್ನಿಕಂ ಪ್ರಪೂಜಯೇತ್ ॥ ಪ್ರಸೂತಃ ಭಕ್ಷ್ಯಮಿತ್ಯಸ್ಯ ಮಂತ್ರಸ್ಯ । ಪ್ರಗಾಧೋ ಜಮದಗ್ನಿ ಋಷಿಃ ॥ ಜಗತೀಛಂದಃ । ಜಮದಗ್ನಿರ್ದೇವತಾ ಜಮದಗ್ನ್ಯಾವಾಹನೇ ವಿನಿಯೋಗಃ ॥ ಪ್ರಸೂತೋ ಭಕ್ಷಮಕರಂ ಚ ರಾಮಃ । ಸೋಮಂ ಚೇಮಂ ಪ್ರಥಮಃ

ಸೂರಿವುನ್ಮೃಜೇ। ಸುತೇ ಸಾತೇನಯದ್ಯಾಗವುಂವಾಂ ಪ್ರತಿ ವಿಶ್ವಾಮಿತ್ರ । ಜಮದಗ್ನೀದಮೇ । ರೇಣುಕಾಪತಿಂ ಜಮದಗ್ನಿಮಾವಾಹಯಾಮಿ । ॥ಆಸನಂ॥ ನರ್ಮದಾಯನಮಃ॥ ಪಾದ್ಯಂ॥ ವೀತರಾಗಾಯನಮಃ॥ಅರ್ಘ್ಯಂ॥ ಕಾಂತಿಯುತೇನಮಃ ॥ ಆಚಮನಂ॥ ಶಾಂತಾಯನಮಃ॥ ಮಧುಪರ್ಕಂ॥ ದಾಂತಾಯನಮಃ॥ಪಂಚಾಮೃತಂ॥ ಶುಚಯೇನಮಃ ॥ ಶುದ್ಧೋದಕಂ ॥ ರಾಮಪ್ರಿಯಾಯ ನಮಃ ॥ವಸ್ತ್ರಂ॥ ಅಕಾಮಾಯನಮಃ ॥ ಉಪವೀತಂ ॥ ಭಕ್ತಪ್ರಿಯಾಯ ನಮಃ ॥ ಆಭರಣಂ ॥ ದಂಡಿನೇನಮಃ॥ಗಂಧಂ॥ ಚಂಡಾಯನಮಃ॥ಅಕ್ಷತಾ॥

ಕಮಂಡಲುಧರಾಯನಮಃ । ಸಾಕ್ಷಸ್ರಜೇನಮಃ । ದಯಾಳವೇನಮಃ । ದೋಷವರ್ಜಿತಾಯ ನಮಃ। ಇಷ್ಟಾಯನಮಃ। ವಿಮಲಾಯನಮಃ। ಕಲ್ಮಷಾಪಹರಾಯ ನಮಃ। ಇಷ್ಟಪ್ರದಾಯನಮಃ। ಪುಷ್ಟಾಯನಮಃ। ಜಮದಗ್ನಯೇನಮಃ। ತ್ವಗಂಬರಾಯ ನಮಃ॥ಪುಷ್ಪಾಣಿ ದೋಷವರ್ಜಿತಾಯನಮಃ॥ಧೂಪಂ॥ ಜ್ಞಾನಿನೇನಮಃ॥ದೀಪಂ॥ ವಿಮಲಾಯನಮಃ ॥ನೈವೇದ್ಯಂ॥ ಕಲ್ಮಷಾಪಹರಾಯನಮಃ॥ ತಾಂಬೂಲಂ॥ ಇಷ್ಟಪ್ರದಾಯನಮಃ॥ನೀರಾಜನಂ॥ಶಿಷ್ಟಾಯನಮಃ॥ಮಂತ್ರಪುಷ್ಪಂ॥ ಶ್ರೇಷ್ಠಾಯನಮಃ॥ ಪ್ರದಕ್ಷಿಣಂ॥ ಪುಷ್ಟಾಯನಮಃ॥ ನಮಸ್ಕಾರಂ॥ವಿಶಿಷ್ಟಾಯನಮಃ॥ ಪುನರರ್ಘ್ಯಂ॥ ಜಮದಗ್ನಯೇನಮಃ॥ ಸರ್ವೋಪಚಾರ ಪೂಜಾಂ ಸಮರ್ಪಯಾಮಿ॥

## ಅಥ ವಸಿಷ್ಠ ಪೂಜಾ

ತಪೋನಿಧಿಂ ದಯಾಸಿಂಧುಂ। ಬ್ರಹ್ಮಣ್ಯಂ ಬ್ರಹ್ಮಸಂಭವಂ॥ ಸ್ರಗ್ದಂಡಪಾಣಿಂ ವರದಂ। ವಸಿಷ್ಠಂ ಪ್ರಣಮಾಮ್ಯಹಂ॥ ಜಟಿಲಂ ಭಸ್ಮದಿಗ್ಧಾಂಗಂ। ಸಾಕ್ಷಸೂತ್ರ ಕಮಂಡಲಂ ॥ ವಲ್ಕಲಾಜಿನಕೌಪೀನಂ ॥ ಸಾತಪತ್ರ ಸದಂಡಕಂ ॥ ಸಕುಶಂಚೋತ್ತರೀಯಂ ಚ। ಸಪತ್ನಿಕಂ ಪ್ರಪೂಜಯೇತ್॥ ಸ್ವಿತ್ಯಂಚೋಮಾ ಇತ್ಯಸ್ಯ ಮಂತ್ರಸ್ಯ ಮೈತ್ರಾವರುಣೋವಸಿಷ್ಠಋಷಿ॥ ತ್ರಿಷ್ಟುಪ್ ಛಂದಃ ವಸಿಷ್ಠೋದೇವತಾ ವಸಿಷ್ಠಾವಾಹನೇ ವಿನಿಯೋಗಃ॥ ಸ್ವಿತ್ಯಂಚೋಮಾದಕ್ಷಿಣ ತಸ್ಯಪದಾಧಿಯಂ ಜಿನ್ವಾಸೋ ಲಭಿಹಿಪ್ರಮಸ್ದುಃ। ಉತ್ತಿಷ್ಟಸ್ತೋಪೇಜೇಪರಿಬರ್ಹಿಷೋನ್ರೊನ್ನಸ್ನ–ಮೇದೂರಾದವಿತವೇ ವಸಿಷ್ಠಾಃ॥ ಅರುಂಧತೀಪತಿಂ ವಸಿಷ್ಠಮಾವಾಹಯಾಮಿ॥ ಆಸನಂ॥ ವರಿಷ್ಠಾಯ ನಮಃ ಪಾದ್ಯಂ ॥ ಗರಿಷ್ಠಾಯನಮಃ ॥ ಅರ್ಘ್ಯಂ॥ ಧರ್ಮಿಷ್ಠಾಯನಮಃ॥ ಆಚಮನಂ॥ ಅರುಂಧತೀಪತಯೇನಮಃ॥ ಮಧುಪರ್ಕಂ॥ ದೀಪ್ತಿಮತೇನಮಃ॥ ಪಂಚಾಮೃತಸ್ನಾನಂ॥ ತ್ರಿಕಾಲಜ್ಞಾಯನಮಃ॥ ಶುದ್ಧೋದಕಂ॥ ಯೋಗಿನೇನಮಃ ॥ ವಸ್ತ್ರಂ ॥ ರಾಮಪ್ರಿಯಾಯನಮಃ ॥ ಉಪವೀತಂ ॥ ಶರಣಾಗತವತ್ಸಲಾಯನಮಃ॥ ಆಭರಣಂ॥ ಮನೋರಥಫಲಪ್ರದಾಯನಮಃ॥ ಗಂಧಂ॥ ಭಕ್ತಾಭೀಷ್ಟಪ್ರದಾಯನಮಃ॥ ಅಕ್ಷತಂ॥ ವಸಿಷ್ಠಾಯನಮಃ। ವರಿಷ್ಠಾಯನಮಃ।

ಗರಿಷ್ಠಾಯನಮಃ । ಧರ್ಮಿಷ್ಠಾಯ ನಮಃ । ಅರುಂಧತೀಪತಯೇ ನಮಃ । ದೀಪ್ತಿಮತೇ ನಮಃ । ತ್ರಿಕಾಲಜ್ಞಾಯ ನಮಃ । ಯೋಗಿನೇ ನಮಃ । ರಾಮಪ್ರಿಯಾನಮಃ । ಶರಣಾಗತ–ವತ್ಸಲಾಯನಮಃ । ಮನೋರಥಫಲಪ್ರದಾಯ ನಮಃ । ಭಕ್ತಾಭೀಷ್ಟಪ್ರದಾಯನಮಃ । ನಿಷ್ಕಲ್ಮಷಾಯನಮಃ ॥ ಧೂಪಂ ॥ ಮೈತ್ರಾವರುಣಾಯನಮಃ ॥ ದೀಪಂ ॥ ಬ್ರಹ್ಮಚಾರಿಣೇನಮಃ ॥ ನೈವೇದ್ಯಂ ॥ ವಿರಾಗಿಣೇ ನಮಃ ॥ತಾಂಬೂಲಂ॥ ಜ್ಞಾನಿನೇ ನಮಃ ॥ ನೀರಾಜನಂ ॥ ಜಟಿನೇ ನಮಃ ॥ ಪುನರರ್ಘ್ಯಂ ॥ ವೇದವಿದೇ ನಮಃ ॥ಮಂತ್ರಪುಷ್ಪಂ॥ ದಾಂತಾಯನಮಃ ॥ ಪ್ರದಕ್ಷಿಣಂ ॥ ಶಾಂತಾಯನಮಃ ॥ ನಮಸ್ಕಾರಂ ॥ ಬ್ರಹ್ಮಿಷ್ಠಾಯನಮಃ ॥ಪುನರರ್ಘ್ಯಂ॥ ವಸಿಷ್ಠಾಯನಮಃ ॥ ಸರ್ವೋಪಚಾರ ಪೂಜಾಂ ಸಮರ್ಪಯಾಮಿ ॥

## ಅಥ ಅಗಸ್ತ್ಯ ಪೂಜಾ

ಲೋಪಾಮುದ್ರಾಪತಿಂ ದೇವಂ । ಅಗಸ್ತ್ಯ ಋಷಿಸತ್ತಮಂ ॥ ದಕ್ಷಿಣಾಶಾಪತಿಂ ರಾಮತಾರಕಪ್ರಿಯಮೂರ್ಜಿತಂ ॥ ಜಟಿಲಂ ಭಸ್ಮದಿಗ್ಧಾಂಗಂ... ಪ್ರಪೂಜಯೇತ್ ॥ ಅಗಸ್ತ್ಯಃಖನಮಾನ ಇತ್ಯಸ್ಯ ಮಂತ್ರಸ್ಯ । ಅಗಸ್ತ್ಯಋಷಿಃ । ತ್ರಿಷ್ಟುಪ್‌ಛಂದಃ । ಅಗಸ್ತ್ಯೋ ದೇವತಾ । ಅಗಸ್ತ್ಯಾವಾಹನೇ ವಿನಿಯೋಗಃ ॥ ಅಗಸ್ತ್ಯಃ ಖನಾಮಾನಃ ಖನಿತ್ರೈಃ ಪ್ರಜಾಪತ್ಯಮಪ್ಯತಂ ಬಲಮಿಚ್ಛಮಾನಾಃ । ಉಭೌವರ್ಣಾಮೃಷಿಮಗ್ರಃ ಮಪೋಕ್ಷಸತ್ಯಾಃ ದೇವೇಪ್ವಾಶಿಷ್ಯೋಜಿಗಾಯ ॥ ಲೋಪಮುದ್ರಾ ಸಹಿತ ಅಗಸ್ತ್ಯಮಾವಾಹಯಾಮಿ । ಲೋಪಮುದ್ರಾಪತಯೇ ನಮಃ ॥ ಆಸನಂ ॥ ಆತ್ಮವತೇನಮಃ ॥ ಅರ್ಘ್ಯಂ ॥ ಇಚ್ಛಾಪ್ರಪೃಷ್ಟಯೇ ನಮಃ ॥ಪಾದ್ಯಂ॥ ಈಷಣತ್ರಯ ವರ್ಜಿತಾಯನಮಃ ॥ ಆಚಮನಂ ॥ ಉತ್ತಮಾಯನಮಃ ॥ ಮಧುಪರ್ಕಂ ॥ ಊರ್ಜಕತಪಸೇ ನಮಃ ॥ ಪಂಚಾಮೃತಸ್ನಾನಂ ॥ ಋಗ್ಯಜುಸ್ಸಾಮಪಾರಗಾಯ ನಮಃ ॥ ಶುದ್ಧೋದಕಸ್ನಾನಂ ॥ ಋಣಮೋಚನಾಯ ನಮಃ ॥ವಸ್ತ್ರಂ॥ ಲುಪ್ತಪಾಪಾಯ ನಮಃ ॥ಉಪವೀತಂ॥ ಓಂಕಾರಪ್ರಿಯಾಯನಮಃ ॥ಆಭರಣಂ॥ ಉದಾರಾಯನಮಃ ॥ ಮಾಲಿಕಾಯನಮಃ । ಅಗಸ್ತ್ಯಾಯನಮಃ । ಲೋಕಪೂಜಿತಾಯನಮಃ । ಲೋಪಮುದ್ರಾಪತಯೇನಮಃ । ಕುಂಭಸಂಭವಾಯನಮಃ । ಸಮುದ್ರಪಾಯಿನೇನಮಃ । ಸಾಕ್ಷಿಣೇನಮಃ । ಸನಾತನಾಯನಮಃ । ರಾಮಪ್ರಿಯಾಯ ನಮಃ । ರಂಜಿತತಪಸೇ ನಮಃ । ತಾರಕಾಯನಮಃ । ತಾರಾಯನಮಃ । ತಾಪಸಪ್ರಿಯಾಯ ನಮಃ । ವಿಂಧ್ಯಗುರವೇನಮಃ । ವೀತರಾಗಾಯನಮಃ । ವಿಷ್ಣುತಾರಕಾಯನಮಃ । ವಿಶ್ವಾತ್ಮನೇನಮಃ । ಗಂಗಜ್ಞಾನಾಯನಮಃ ॥ ಧೂಪಂ ॥ ಜ್ಯೋತಿಷ್ಮತೇನಮಃ ॥ ದೀಪಂ ॥ ಸಾರಗ್ರಾಹಿಣೇನಮಃ ॥ ನೈವೇದ್ಯಂ ॥ ಶುಚಯೇ ನಮಃ ॥ ತಾಂಬೂಲಂ ॥ ಪ್ರಕಾಶ ರೂಪಾಯನಮಃ ॥ ನೀರಾಜನಂ ॥ ಧನದಾಯನಮಃ ॥ ದಕ್ಷಿಣಾಂ ॥ ಸುವರ್ಚಸೇನಮಃ ॥ ಮಂತ್ರಪುಷ್ಪಂ ॥ ಸುರೇಂದ್ರವಂದಿತಾಯನಮಃ ॥ ನಮಸ್ಕಾರಂ ॥ ಋಷಿವರ್ಯಾಯನಮಃ

॥ ನಮಸ್ಕಾರಂ ॥ ಪ್ರಸನ್ನಾಯನಮಃ ॥ ಪುನರರ್ಘ್ಯಂ ॥ ಅಗಸ್ತ್ಯಾಯನಮಃ ॥ ಸರ್ವೋಪಚಾರ ಪೂಜಾಃ ಸಮರ್ಪಯಾಮಿ ॥

## ಅಥ ಅರುಂಧತೀ ಪೂಜಾ

ಅರುಂಧತ್ಯೈ ನಮಃ ॥ಧ್ಯಾನಂ॥ ವಸಿಷ್ಠಪತ್ನ್ಯೈ ನಮಃ ॥ ಆವಾಹನಂ ॥ ಪತಿವ್ರತಾಯೈನಮಃ ॥ಪಾದ್ಯಂ॥ ಸೌಮಂಗಲ್ಯಹೇತವೇನಮಃ ॥ಅರ್ಘ್ಯಂ॥ ತಪಸ್ವಿನ್ಯೈ ನಮಃ ॥ಆಚಮನೀಯಂ॥ ಮುನಿಧರ್ಮಪ್ರವರ್ತಿನ್ಯೈ ನಮಃ ॥ ಮಧುಪರ್ಕಂ॥ ನಿತ್ಯನಿರ್ಮಲಾಯೈನಮಃ ॥ಸ್ನಾನಂ॥ ಮಾನಿನ್ಯೈ ನಮಃ ॥ವಸ್ತ್ರಂ॥ ಗೋಪಿನ್ಯೈ ನಮಃ ॥ಕಂಚುಕಂ॥ ಧರ್ಮರಥಾಯೈ ನಮಃ ॥ಗಂಧಂ॥ ಅಕ್ಷತವ್ರತಾಯೈನಮಃ ॥ಅಕ್ಷತಾಃ॥ ಸುಮಂಗಲ್ಯೈ ನಮಃ ॥ಹರಿದ್ರಾಚೂರ್ಣಂ॥ ವಸಿಷ್ಠಪ್ರಿಯಾಯೈನಮಃ ॥ಕುಂಕುಮಂ॥ ಸುಗುಣೋಜ್ವಲಾಯೈನಮಃ ॥ಆಭರಣಂ॥ ಪಾವನ್ಯೈ ನಮಃ ॥ಪುಷ್ಪಂ॥ ಹವಿರ್ಗಂಧಿ ಪ್ರಿಯಾಯೈನಮಃ ॥ ಧೂಪಂ॥ ಜ್ಯೋತಿರ್ಮಯಾಯೈನಮಃ ॥ದೀಪಂ॥ ಧರ್ಮಬ್ರಹ್ಮಾನಂದವತ್ಯೈ ನಮಃ ॥ನೈವೇದ್ಯಂ॥ ಸರ್ವಭೂತಾನುರಾಗಿಣ್ಯೈ ನಮಃ ॥ತಾಂಬೂಲಂ॥ ಕ್ರತುದಕ್ಷಿಣಾಯೈನಮಃ ॥ದಕ್ಷಿಣಾಂ॥ ಋಷಿಪತ್ನೀಸಮಾಶ್ರಿತಾಯೈನಮಃ ॥ ನೀರಾಜನಂ ॥ ಮಂತ್ರಜ್ಞಾಯೈನಮಃ ॥ ಮಂತ್ರಪುಷ್ಪಂ ॥ ಶಿಂಶುಮಾರಗತಯೇನಮಃ ॥ ಪ್ರದಕ್ಷಿಣಂ ॥ ಸರ್ವಲೋಕನಮಸ್ಕೃತಾಯೈನಮಃ ॥ ನಮಸ್ಕಾರಂ ॥ ವಸಿಷ್ಠ ಕುಟುಂಭಿನ್ಯೈ ನಮಃ ॥ ಪುನರರ್ಘ್ಯಂ ॥

ಸ್ಮೃತಿಮಾತ್ರೇಣ ಭಕ್ತಾನಾಂ । ಸರ್ವಪಾಪ ವಿಮೋಚಿನೀ ॥ ಸೂಕ್ಷ್ಮಾತ್ಸೂಕ್ಷ್ಮೇ ತರೇಮಾತಃ । ದರ್ಶನಾತ್ಪುಣ್ಯದಾಯಿನಿ ॥ ಪತಿವ್ರತಾಗ್ರಗಣ್ಯೇತ್ವಂ । ಸೌಮಂಗಲ್ಯ ಸುಖಪದೇ ॥ ಅರುಂಧತೀ ಮಹಾದೇವಿ । ಬ್ರಹ್ಮಶಕ್ತೇಚರಂತಿನಿ । ಜಯತ್ವಂ ನಿತ್ಯಕಲ್ಯಾಣಿ । ವಸಿಷ್ಠೈಕಕುಟುಂಬಿನಿ ॥ ಪಾಪನತ್ವಂ ಚ ಸೌಭಾಗ್ಯಂ । ಸುಖಶಾಶ್ವತಮೇವಚ ॥ ಮಹಾದೇವಿ ಜಗದ್ವಂದ್ಯೇ । ವ್ರತಸಂಪೂರ್ಣತಾಂ ಕುರು ॥

## ಇತಿ ಸಂಪ್ರಾರ್ಥ್ಯ

ಈ ವ್ರತಕಲ್ಪದಲ್ಲಿ ಹೇಳಿರುವಂತೆ ಸಾಯಂಕಾಲಕ್ಕೆ ಮೊದಲೇ ನದಿಗೆ ಹೋಗಿ ಅಲ್ಲಿ ಸ್ನಾನವನ್ನು ಆಚರಿಸಿ ಯಮುನಾ ಪೂಜೆಯನ್ನು ಮಾಡಿ ಋಷಿಗಳ ಸಮೇತವಾದ್ಯ ವಿಶೇಷಗಳೊಡನೆ ಮನೆಗೆ ಬಂದು ಅಲ್ಲಿ ಬೇರೆಬೇರೆಯಾಗಿ ಮಂತ್ರಗಳಿಂದ ಸಪ್ತಋಷಿಗಳನ್ನು ಆವಾಹನೆ ಮಾಡಿ ಅಗಸ್ತ್ಯ ಮತ್ತು ಅರುಂಧತಿಗಳನ್ನು ಪ್ರತಿಷ್ಠಿಸಿ ಪೂಜೆಯನ್ನು ಮಾಡಬೇಕು. ಮೊದಲನೆಯ ಯಾಮದಲ್ಲಿ ಮಾತ್ರ ಸಪ್ತಋಷಿಗಳಿಗೂ ಬೇರೆಬೇರೆಯಾಗಿ ಪೂಜೆಯನ್ನು ಮಾಡಿ ಆಮೇಲೆ ಸಮಷ್ಟಿ ಪೂಜೆಯನ್ನು ಮಾಡಬೇಕು. ಎರಡು, ಮೂರು, ನಾಲ್ಕನೆಯ ಯಾಮಗಳಲ್ಲಿ ಸಮಷ್ಟಿಪೂಜೆಯನ್ನು ಮಾತ್ರ ಮಾಡಬೇಕು. ಪ್ರತಿ ಯಾಮದಲ್ಲಿಯೂ ಪ್ರತ್ಯೇಕವಾಗಿ ಪೂಜೆಯನ್ನು

ಮಾಡಬೇಕಾದುದಿಲ್ಲ. ಆವಾಹನೆಯನ್ನು ಮಾಡುವಾಗ ಈ ವ್ರತಕಲ್ಪದಲ್ಲಿರುವ ಮಂತ್ರವನ್ನು ಹೇಳಬೇಕು, ಅಂಗನ್ಯಾಸ, ಕರನ್ಯಾಸಗಳೂ ಇದರಲ್ಲಿರುವಂತೆಯೇ ಆಚರಿಸಬೇಕು. ಸಮಷ್ಟಿಪೂಜೆಯನ್ನು ಮಾಡುವಾಗಲೂ, ಯಮುನಾಪೂಜೆಯನ್ನು ಮಾಡುವಾಗಲೂ ವಿನಾಯಕ ವ್ರತದಲ್ಲಿರುವಂತೆ ಅಂಗನ್ಯಾಸ ಕರನ್ಯಾಸಯುತವಾದ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು. ಸಪ್ತಋಷಿಗಳಿಗೆ ಪ್ರತ್ಯೇಕ ಪೂಜೆಯನ್ನು ಮಾಡುವಾಗ ಷೋಡಶೋಪಚಾರ ವಿಧಿಯಂತೆ ಪೂಜೆಯನ್ನು ಆಚರಿಸಿ ಪ್ರತಿ ಋಷಿ ಪೂಜೆಗೂ ಪುನಃಪೂಜೆಯನ್ನು ಮಾಡಬೇಕು. ವ್ರತಕಥೆಯನ್ನು ನಾಲ್ಕು ಯಾಮುಗಳಲ್ಲಿಯೂ ಸಂಪೂರ್ಣವಾಗಿ ಓದಿ ನಂತರ ಬಾಗಿನವನ್ನು ಕೊಡಬೇಕು. ಆರುಂಧತೀ ಬಾಗಿನವನ್ನು ಕಡೆಯ ಯಾಮುದಲ್ಲಿ ಕೊಡತಕ್ಕದ್ದು. ಋಷಿಪೂಜೆಗೆ ಪ್ರತಿಯಾಮುದಲ್ಲಿಯೂ ನೈವೇದ್ಯವನ್ನೂ ತಾಂಬೂಲವನ್ನೂ ಬೇರೆಬೇರೆಯಾಗಿಯೇ ಇಡಬೇಕು. ಈ ವ್ರತವು ಬಹಳ ಕಷ್ಟಕರವಾದ ವ್ರತವಾದುದರಿಂದ ಆಚರಿಸತಕ್ಕವರೂ ಆಚಾರ್ಯರಾಗಿರತಕ್ಕವರೂ ಈ ವ್ರತದಲ್ಲಿರುವಂತೆ ಸ್ವಲ್ಪವೂ ಲೋಪವಮಾಡದೆ ಆಚರಿಸಿದಲ್ಲಿ ಸಂಪೂರ್ಣ ಫಲವುಂಟಾಗುವುದರಲ್ಲಿ ಸಂದೇಹವಿಲ್ಲ.

ಅಥ ಸಪ್ತಋಷಿರ್ನರುಂದತೀಮಗಸ್ತ್ಯಋಷಿಪತ್ನೀಚ್ಚ ಸಮಷ್ಟ್ಯಾಯಥಾವಿಭವ–ಮರ್ಚಯೇತ್ ॥

## ಅಥ ಸಪ್ತ ಋಷೀಣಾಂ ಸಮಷ್ಟ್ಯಾ ಪೂಜಾ

ಮೂರ್ತಿಬ್ರಹ್ಮಣ್ಯ ದೇವಸ್ಯ । ಬ್ರಹ್ಮಣಂ ತೇನ ಉತ್ತಮಂ ॥ ಭಾನುಕೋಟಿ ಪ್ರತೀಕಾಶ ಮೃಷಿರೂಪಂವಿಚಿಂತಯೇ ॥ ಇತಿ ಧ್ಯಾನಂ ॥ ಅರುಂಧತೀ ಸಹಿತ ಕಶ್ಯಪಾದಿ ಋಷೀನಗಸ್ತ್ಯಂ ಧ್ಯಾಯಾಮಿ ॥ ಆಗಚ್ಛಂತು ಮಹಾಭಾಗಶ್ಚತುರ್ವೇದ ಸ್ವರೂಪಿಣಃ । ಯಾವತ್ಪೂಜಾಮಹಂಕುರ್ಯಾಂ ॥ ಶುದ್ಧಯಾಭವತಾಮಿಯಾಂ ॥ ಆವಾಹನಂ ॥ ಕುಶಾಸನೇ ಪವಿತ್ರೇಸ್ಮಿ । ಸ್ಥಿಷ್ಮಂತು ಮುನಿಸತ್ತಮಾಃ । ಅರುಂಧತ್ಯಾ ಸಮೇತಾಸ್ತೇ । ಜಟಾಮಕುಟಧಾರಣಃ ॥ಆಸನಂ॥ ನಭಸ್ತೇ ಶುಕ್ಲಪಂಚಮ್ಯಾಂಅರ್ಚಿತಾ ಋಷಿಸತ್ತಮಾಃ ॥ ಪಾಪಂ ದಹಂತುಮೇ ಸರ್ವಂ । ಪಾದ್ಯಂ ಗೃಹ್ಣಾಸ್ತು ಶೋಭನಾಃ ॥ಪಾದ್ಯಂ॥ ಗಂಧಪುಷ್ಪಾಕ್ಷತೋಪೇತ । ಮರ್ಘ್ಯಂ ಗೃಹ್ಣೀತು ವೈದ್ವಿಜಾಃ ॥ ಪ್ರಸಾದಂ ಕುರುತಪ್ರೀತಾಃ । ಪ್ರಣತಾಯಾಃ ಸದಾಃ ಮಮ ॥ಅರ್ಘ್ಯಂ॥ ಲೋಕಾನಾಂಸೃಷ್ಟಿ ಕರ್ತಾರಃ । ಯೂಯಂ ಸರ್ವೇ ತಪೋಧನಾಃ ॥ ನಮೋಮೇ ಧರ್ಮವಿಜ್ಞೋಭ್ಯೋ। ಗೃಹ್ಣೀತಾಚಮನಂತ್ವಿದಂ ॥ಆಚಮನಂ॥ ಪಯೋದಧಿ ಘೃತಂ ಚೈವ । ಮಧುಶರ್ಕರಸಂಯುತಂ । ಪಂಚಾಮೃತಂ ಮಯಾದತ್ತ ಮೃಷಯಃ ಪ್ರತಿಗೃಹ್ಯತಾಂ ॥ ಪಂಚಾಮೃತೇನ ಸ್ನಪಯಾಮಿ ॥ ಮಂದಾಕಿನೀ ಗೌತಮಿ ಚ ॥ ಯಮುನಾ ಚ ಸರಸ್ವತೀ ॥ ನರ್ಮದಾ ತುಂಗಭದ್ರಾ ಚ ತಾಭ್ಯಃ ಸ್ನಾನಂ ಪ್ರತಿಗೃಹ್ಯತಾಂ ॥ ಶುದ್ಧೋದಕಸ್ನಾನಂ ॥ ಶುದ್ಧೋದಕಸ್ನಾನಾದಿ ಪೂರ್ವಪೂಜಾಂತೆ

ಮಹಾಭಿಷೇಕಃ ॥ ಸರ್ವೇ ನಿತ್ಯಂ ತಪೋನಿಷ್ಠಾಃ । ಬ್ರಹ್ಮಜ್ಞಾಃ ಸತ್ಯವಾದಿನಾಃ ವಸ್ತ್ರಾಣಿ ಪ್ರತಿಗೃಹ್ಣಾಂತು ಮುಕ್ತಿದಾಃ ಸಂತುಮೇ ಸದಾ ॥ವಸ್ತ್ರಂ॥ ನಾನಾ ಮಂತ್ರೈರ್ಮಂತ್ರಿತಂ ಚ । ತ್ರಿವೃತಂ ಬ್ರಹ್ಮಸೂತ್ರಕಂ ॥ ಪ್ರಯಚ್ಛಾಮಿ ಮುನಿಶ್ರೇಷ್ಠಾ । ಪ್ರತ್ಯೇಕಂ ಗೃಹತ್ಯಾಮಿದಂ ॥ ಯಜ್ಞೋಪವೀತಂ ॥ ಕುಂಕುಮಾಗರು ಕರ್ಪೂರ ॥ ಸುಗಂಧೈರ್ಮಿಶ್ರಿತಂ ಶುಭಂ । ಗಂಧಾಡ್ಯಂ ಚಂದನಂ ದಿವ್ಯಂ ಗೃಹ್ಣನ್ತು ಋಷಿಸತ್ತಮಾಃ ॥ಗಂಧಂ॥ ರಜಿತಾಃ ಕುಂಕುಮೌಘೇನ ಅಕ್ಷತಾಸು ಸುಶೋಭನಾಃ ॥ ಗೃಹ್ಣಸ್ತು ಮಮ ಸಂತುಷ್ಟಾ । ಭವಂತು ಮುನಿಸತ್ತಮಾಃ ॥ ಅಕ್ಷತಂ ॥ ಕಂಠಸೂತ್ರಂ ತಾಳಪತ್ರಂ । ಹರಿದ್ರಾಕುಂಕುಮಾಂಜನಂ ॥ ಸಿಂಧೂರಾಲಕ್ತಕಂದಾಸ್ಯೇ ಸೌಭಾಗ್ಯದ್ರವ್ಯಮೀಶ್ವರೀ ॥ ಅರುಂಧತ್ಯೈ ನಮಃ ॥ ಸೌಭಾಗ್ಯದ್ರವ್ಯಂ ಮಾಲತೀ ಚಂಪಕ ಮಲ್ಲೀ । ಕೇತಕ್ಯಾದಿ ನಿವೈದ್ವಿಜಾಃ । ಸಮರ್ಪಯಾಮಿ ಪುಷ್ಪಾಣಿ ಪೂಜಾರ್ಥಂ ತ್ವತ್ ಪದಾಂಬುಜೇ । ಪುಷ್ಪಂ ॥

## ಅಥ ಪತ್ರಪೂಜಾ

| | | | |
|---|---|---|---|
| ಕಶ್ಯಪಾಯನಮಃ | ತುಲಸೀ | ಪತ್ರಂ | ಪೂಜಯಾಮಿ |
| ಅತ್ರಯೇನಮಃ | ಅಗಸ್ತಿ | ” | ” |
| ಭರಧ್ವಾಜಾಯನಮಃ | ಅಪಾಮಾರ್ಗ | ” | ” |
| ವಿಶ್ವಾಮಿತ್ರಾಯನಮಃ | ಬಿಲ್ವ | ” | ” |
| ಜಮದಗ್ನಯೇನಮಃ | ಧೂರ್ವಾ | ” | ” |
| ವಸಿಷ್ಠಾಯನಮಃ | ಶಮಿ | ” | ” |
| ಅರುಂಧತ್ಯೈ ನಮಃ | ದತ್ತೂರ | ” | ” |

ಇತಿ ಪತ್ರಪೂಜಾಂ ಸಮರ್ಪಯಾಮಿ

## ಅಥ ಅಷ್ಟೋತ್ತರ ಶತನಾಮಪೂಜಾ

ಬ್ರಹ್ಮಋಷಿಭ್ಯೋನಮಃ । ಲಯಕರ್ತೃಭ್ಯೋನಮಃ । ಜ್ಞಾನಸಿದ್ಧ್ಯೇಭ್ಯೋನಮಃ । ವಿದೇಭ್ಯೋನಮಃ । ವೇದವಿದ್ಭ್ಯೋನಮಃ । ತಪಸ್ವಿಭ್ಯೋನಮಃ । ಮಹಾತ್ಮಭ್ಯೋ ನಮಃ । ಮಾನ್ಯೇಭ್ಯೋ ನಮಃ । ಬ್ರಹ್ಮಚರ್ಯರತೇಭ್ಯೋ ನಮಃ । ಸಿದ್ಧೇಭ್ಯೋ ನಮಃ । ಕರ್ಮಭ್ಯೋನಮಃ । ಯೋಗಿಭ್ಯೋನಮಃ । ಅಗ್ನಿಹೋತ್ರಪರಾಯಣೇಭ್ಯೋನಮಃ । ಸತ್ಯವ್ರತೇಭ್ಯೋನಮಃ । ಧರ್ಮಾತ್ಮಭ್ಯೋನಮಃ । ನಿಯತಾಶಿಭ್ಯೋನಮಃ । ಬ್ರಾಹ್ಮಣೇಭ್ಯೋನಮಃ । ಬ್ರಹಾಸ್ತ್ರವಿದ್ಭ್ಯೋನಮಃ । ಗಾಯತ್ರಿ ಸಿದ್ಧೇಭ್ಯೋನಮಃ । ಸಾವಿತ್ರಿ ಸಿದ್ಧೇಭ್ಯೋನಮಃ । ಸರಸ್ವತೀಸಿದ್ಧೇಭ್ಯೋನಮಃ । ಯಜಮಾನೇಭ್ಯೋನಮಃ । ಯಾಜಕೇಭ್ಯೋನಮಃ । ಋತ್ವಿಭ್ಯೋನಮಃ । ಅಧ್ವರ್ಯಭ್ಯೋನಮಃ । ಯಜ್ಞಭ್ಯೋನಮಃ । ಯಜ್ಞದೀಕ್ಷಿತೇಭ್ಯೋನಮಃ । ಪೂತಭ್ಯೋನಮಃ । ಪುರಾತನೇಭ್ಯೋನಮಃ ।

ಸೃಷ್ಟಿಕರ್ತೃಭ್ಯೋನಮಃ। ಸ್ಥಿತಕರ್ತೃಭ್ಯೋನಮಃ। ಅಪಕರ್ತೃಭ್ಯೋನಮಃ। ದಂಡಧರೇಭ್ಯೋನಮಃ। ಬ್ರಹ್ಮಶೀರ್ಷವಿದ್ಭ್ಯೋನಮಃ। ಪ್ರತಿಹಪಾತ್ರಭ್ಯೋನಮಃ। ಉದ್ಗಾತೃಭ್ಯೋನಮಃ। ಧರ್ಮಪ್ರವರ್ತಕೇಭ್ಯೋನಮಃ। ಆಚಾರಪ್ರವರ್ತಕೇಭ್ಯೋ ನಮಃ। ಸಂಪ್ರದಾಯಪ್ರವರ್ತಕೇಭ್ಯೋನಮಃ । ಅನುಶಾಸಿತೃಭ್ಯೋನಮಃ । ವೇದವೇದಾಂಗಪಾರಗೇಭ್ಯೋನಮಃ। ವೇದಾಂಗಪ್ರಚಾರಕೇಭ್ಯೋನಮಃ। ಲೋಕಶಿಕ್ಷಕೇಭ್ಯೋನಮಃ। ಶಾಪಾನುಗ್ರಹಶಕ್ತೇಭ್ಯೋನಮಃ। ಸ್ವತಂತ್ರಶಕ್ತೇಭ್ಯೋ ನಮಃ। ಸ್ವಾಧೀನಚಿತ್ತೇಭ್ಯೋನಮಃ । ಸ್ವರೂಪಸುಖೇಭ್ಯೋನಮಃ । ಪ್ರವೃತ್ತಧರ್ಮಪಾಕೇಭ್ಯೋನಮಃ। ನಿವೃತ್ತಿಧರ್ಮಕರ್ಮಕೇಭ್ಯೋನಮಃ। ಭಗವತ್ಪ್ರಸಾದಿ–ಕೇಭ್ಯೋನಮಃ । ದೇವಗುರುಭ್ಯೋನಮಃ । ಲೋಕಗುರುಭ್ಯೋನಮಃ । ಸರ್ವವಂದಿತೇಭ್ಯೋನಮಃ। ಸರ್ವಪೂಜ್ಯೇಭ್ಯೋನಮಃ। ಗೃಹಿಭ್ಯೋನಮಃ। ಸೂತ್ರಕೃದ್ಭ್ಯೋನಮಃ। ಭಾಷ್ಯಕೃದ್ಭ್ಯೋನಮಃ। ಮಹಿಮಾಸಿದ್ಧಿಭ್ಯೋನಮಃ। ನಿರ್ದುಷ್ಟೇಭ್ಯೋನಮಃ। ಶಮಧನೇಭ್ಯೋನಮಃ। ತಪೋಧನೇಭ್ಯೋನಮಃ। ಹೋತೃಭ್ಯೋನಮಃ। ಪ್ರಸ್ತೋತೃಭ್ಯೋನಮಃ। ಅಣಿಮಾಸಿದ್ಧಿಭ್ಯೋನಮಃ। ಜೀವನ್ಮುಕ್ತೇಭ್ಯೋನಮಃ। ಶಿವಪೂಜಾರಥೇಭ್ಯೋನಮಃ। ವ್ರತೇಭ್ಯೋನಮಃ। ಮುನಿಮುಖ್ಯೇಭ್ಯೋನಮಃ। ಜಿತೇಂದ್ರಿಯೇಭ್ಯೋನಮಃ। ಶಾಂತೇಭ್ಯೋನಮಃ। ದಾಂತೇಭ್ಯೋನಮಃ । ತಿತಿಕ್ಷುಭ್ಯೋನಮಃ । ಉಪರತೇಭ್ಯೋನಮಃ । ಶ್ರದ್ಧಾಳುಭ್ಯೋನಮಃ ವಿಷ್ಣುಭಕ್ತೇಭ್ಯೋನಮಃ ವಿವೇಕಿಭ್ಯೋನಮಃ ವಿಜ್ಞೇಭ್ಯೋನಮಃ ಬ್ರಹ್ಮನಿಷ್ಠೇಭ್ಯೋನಮಃ। ಭಗವದ್ಭ್ಯೋನಮಃ। ಭಸ್ಮಧಾರಿಭ್ಯೋನಮಃ। ರುದ್ರಾಕ್ಷಧಾರಿಭ್ಯೋನಮಃ। ಸ್ನಾಯಿಭ್ಯೋನಮಃ। ತೀರ್ಥೇಭ್ಯೋನಮಃ। ಶುದ್ಧೇಭ್ಯೋನಮಃ। ಆಸ್ತಿಕೇಭ್ಯೋನಮಃ। ವಿಪ್ರೇಭ್ಯೋನಮಃ। ಬ್ರಾಹ್ಮಣೇಭ್ಯೋನಮಃ। ಉಪವೀತಿಭ್ಯೋನಮಃ। ಮೇಧಾವಿಭ್ಯೋನಮಃ। ಪವಿತ್ರಪಾಣಿಭ್ಯೋನಮಃ। ತಪಶ್ಶಕ್ತೇಭ್ಯೋನಮಃ। ಮಂತ್ರಮೂರ್ತಿಭ್ಯೋನಮಃ। ಅಷ್ಟಾಂಗಯೋಗಿಭ್ಯೋನಮಃ। ಸುಮುಖೇಭ್ಯೋನಮಃ। ವಲ್ಕಲಾಜಿನಧಾರಿಭ್ಯೋ ನಮಃ। ಬೃಸೀನಿಷ್ಠೇಭ್ಯೋನಮಃ। ಜಟಿಲೇಭ್ಯೋನಮಃ। ಕಮಂಡಲಧಾರಿಭ್ಯೋನಮಃ। ಸಪತ್ನಿಕೇಭ್ಯೋನಮಃ। ಸಾಂಗೇಭ್ಯೋನಮಃ । ಸಂಸ್ಕೃತೇಭ್ಯೋನಮಃ । ಸಕೃತಿಭ್ಯೋನಮಃ । ವೇದವಿದ್ಯೇಭ್ಯೋನಮಃ। ಸತ್ಕೃತಿಕರ್ತೃಭ್ಯೋನಮಃ। ಸುವರ್ಚಸೇಭ್ಯೋನಮಃ। ನಿತ್ಯತೃಪ್ತೇಭ್ಯೋನಮಃ। ತ್ರಿಕಾಲಜ್ಞಾನೇಭ್ಯೋನಮಃ। ॥೧೦೮॥ ಶ್ರೀ ಕಶ್ಯಪಾದಿ ಸಪ್ತಋಷಿಭ್ಯೋನಮಃ। ಅರುಂಧತ್ಯಾದಿ ಸಪ್ತಋಷಿಪತ್ನಿಭ್ಯೋನಮಃ॥ ನಾನಾವಿಧ ಪರಿಮಳಪುಷ್ಪಾಕ್ಷತಾನ್ ಸಮರ್ಪಯಾಮಿ॥ ಅಷ್ಟೋತ್ತರ ಶತ ದಿವ್ಯನಾಮ ಪೂಜಾಂ ಸಮರ್ಪಯಾಮಿ॥

ವನಸ್ಪತಿರಸ್ಯೆ.....ತಾಂ ॥ಧೂಪಂ॥ ಸಾಜ್ಯಂತ್ರಿವರ್ತಿ....ತೇ ॥ದೀಪಂ॥ ನಾನಾಪಕ್ವಾನ್ನ ಸಂಯುಕ್ತಂ ॥ ರಸೈಃಷಡ್ಭಿಃ ಸಮನ್ವಿತಂ ॥ ಗೃಹ್ಣಸ್ತು ಋಷಯಸ್ಸರ್ವೇ । ನೈವೇದ್ಯಂ ವಸುದಾಯಕಾ ॥ ನೈವೇದ್ಯಂ ಮಧ್ಯೇ ಮಧ್ಯೇ ಪಾನೀಯಂ । ಉತ್ತರಾಪೋಶನಂ ।ಕರೋದ್ವರ್ತನಂ । ಕರೇ ಚಂದನಂ । ನಮೋ ವೇದವಿದಾಂ ಶ್ರೇಷ್ಠಾ । ಋಷಯಃ ಸೂರ್ಯಸನ್ನಿಭಾಃ । ಗೃಹ್ಣಂತ್ವಿದಂ ಫಲಂ ತುಷ್ಟಾ । ಮಯಾದತ್ತಂ ಹಿ ಭಕ್ತಿತಃ ॥ಫಲಂ॥ ಪೂಗೀಫಲಮಿತಿ ॥ತಾಂಬೂಲಂ॥ ಹಿರಣ್ಯಗರ್ಭಃ ಸಮವತತಾಗ್ರೆ । ಭೂತಸ್ಯ ಜಾತಃ ಪತಿಃರೇಕ ಅಸೀತ್ ॥ದಕ್ಷಿಣಾಂ॥ ಸೋಮೇವಾ ಇತಿ ನೀರಾಜನಂ ॥ ಮಂತ್ರ ಬ್ರಾಹ್ಮಣಾದಿ ವೇದಪರಾಯಣಣೇನ ಮಂತ್ರಪುಷ್ಪಾಂಜಲಿಂ ಯಾನಿಕಾನಿಚ.... ಇತಿ ಪ್ರದಕ್ಷಿಣಾಂ ನಮೋಸ್ತು ಸುರವಂದೇಭ್ಯೋ ದೇವಋಷಿಭ್ಯೋ ನಮೋ ನಮಃ ॥ ಸರ್ವಪಾಪಹರಸ್ಯಂತೂ ವೇದರೂಪಾಃ ಸನಾತನಾಃ ॥ ನಮಸ್ಕಾರಂ ॥ ಕಶ್ಯಪೋತ್ರಿರ್ಭರದ್ವಾಜೋ ವಿಶ್ವಾಮಿತ್ರೋಥ ಗೌತಮಃ । ಜಮದಗ್ನಿರ್ವಸಿಷ್ಠಶ್ಚ ಗೃಹ್ಣಂತು ಕುಸುಮಾಂಜಲಿಂ ॥ ಪುಷ್ಪಾಂಜಲಿಂ ತತೋ ಗಂಧಾಕ್ಷತ ಪುಷ್ಪ ಫಲಯುತಮರ್ಘ್ಯಂ ದದ್ಯಾತ್ ಕಶ್ಯಪೋತ್ರಿ...... ರ್ವಸಿಷ್ಠಶ್ಚ ಸಪ್ತೈತೆ ಋಷಿಯಸ್ಮೃತಾಃ। ಗೃಹ್ಣಂತರ್ಘ್ಯಂ ಮಯಾದತ್ತಂ ತುಷ್ಟಾಸ್ಸಂತು ಸದಾ ಮಮ ಅರುಂಧತೀ..... ಕಶ್ಯಪಾದಿ ಸಪ್ತಋಷಿಭ್ಯೋನಮಃ ॥ ಇದಮರ್ಘ್ಯಂ ಸಮರ್ಪಯಾಮಿ ॥

**(ಕೇಚಿತ್ ಪ್ರತ್ಯೇಕರ್ಘ್ಯಂ ದದಾತಿ ತತ್ರಾರ್ಘ್ಯ ಮಂತ್ರಾಃ)**

ಕಶ್ಯಪಃ ಸರ್ವಲೋಕಾಢ್ಯಃ । ಸರ್ವಭೂತೇಷು ಸಂಸ್ಥಿತಃ ॥ ನರಾಣಾಂ ಪಾಪನಾಶಾಯ ಋಷಿರೋಪೇಣುತಿಷ್ಠತಿ ॥ ಕಶ್ಯಪಾಯ ಇದಮರ್ಘ್ಯಂ ॥ ಅತ್ರಯೇಚ ನಮಸ್ತುಭ್ಯಂ ಸರ್ವಲೋಕಹಿತೈಷಿಣೇ ॥ ಶುದ್ಧರೂಪಾಯ ಸತ್ಯಾಯ । ಬ್ರಹ್ಮಣೇ ಮಿತತೇಜಸೇ ॥ ಅತ್ರಯೇನಮಃ ॥ ಇದಮರ್ಘ್ಯಂ ॥ ಭರದ್ವಾಜ ನಮಸ್ತೇऽಸು । ಸದಾ ಧ್ಯಾನಪಾರಾಯಣ ॥ ಮಹಾಜಟಿಲ ಧರ್ಮಾತ್ಮಾ ॥ ಪಾತಕಂ ಹರ ಸರ್ವದಾ ॥ ಭರದ್ವಾಜಾಯನಮಃ ॥ ಇದಮರ್ಘ್ಯಂ ॥ ವಿಶ್ವಾಮಿತ್ರ ನಮಸ್ತುಭ್ಯಂ । ಜಲರೂಪ ಮಹಾವ್ರತ ॥ ಪ್ರತ್ಯಕ್ಷೀಕೃತ ಗಾಯತ್ರೀ । ತಪೋರೂಪೇಣ ಸಂಸ್ಥಿತಾ ॥ ವಿಶ್ವಾಮಿತ್ರಾಯ ನಮಃ ॥ ಇದಮರ್ಘ್ಯಂ ॥ ಗೌತಮಃ ಸರ್ವಲೋಕಾನಾಂ ಋಷೀಣಾಂಚ ಮಹಾಪ್ರಿಯ ॥ ಲೋಕೇಷು ಧರ್ಮವೃದ್ಧ್ಯರ್ಥಂ । ಸರ್ವಪಾಪಾನಿಕೃತಂಚ ॥ ಜಮದಗ್ನಯೇ ನಮಃ ॥ ಇದಮರ್ಘ್ಯಂ ನಮಸ್ತುಭ್ಯಂ ವಸಿಷ್ಠಾಯ ಜಟಿಲಾಯ ಮಹಾತ್ಮನೇ ॥ ಧರ್ಮರೂಪಾಯ ಸತ್ಯಾಯ ಲೋಕಾನಾಂ ಹಿತಕಾರಿಣೇ ॥ವಸಿಷ್ಠಾಯ ನಮಃ ॥ ಇದಮರ್ಘ್ಯಂ ॥ ಅರುಂಧತಿ ನಮಸ್ತುಭ್ಯಂ ವಸಿಷ್ಠಾಪ್ರಿಯಕಾರಿಣೇ ॥ ಪತಿವ್ರತಾನಾಂ ಸರ್ವಾನಾಂ । ಸರ್ವಧರ್ಮ ಪ್ರವರ್ತಕೇ ॥ ಅರುಂಧತ್ಯೈ ನಮಃ ॥ ಇದಮರ್ಘ್ಯಂ ॥ ಏತೇ ಸಪ್ತಋಷಿಃ ಸರ್ವೇ । ಭಕ್ತ್ಯಾ ಸಂಪೂಜಿತಾಮಯಾ ॥ ಸರ್ವೇಪಾಪಂ ವ್ಯಪೋಹಂತು । ಜ್ಞಾನತೋಜ್ಞಾನತಃ ಕೃತಂ ॥ ಆವಾಹನಂನಜಾನಾಮಿ...... ಇತ್ಯಾಧಿ ಪ್ರಾರ್ಥನಾ ॥ ಕೃತವ್ರತಸ್ಯಸಾಂಗತಾಸಿದ್ಧ್ಯರ್ಥಂ

ವಾಯನದಾನಂ ಕರಿಷ್ಯೇ ॥ ಬ್ರಾಹ್ಮಣ ಸಂಪೂಜ್ಯ ॥ ವಾಯನಫಲಸಂಯುಕ್ತಂ ಸಘೃತಂ ದಕ್ಷಿಣಾನ್ವಿತಂ ॥ ದ್ವಿಜವರ್ಯಾಯ ದಾಸ್ಯಾಮಿ । ವ್ರತಸಂಪೂರ್ತಿಹೇತವೇ ॥ ಭವಂತಃ ಪ್ರತಿಗೃಹ್ಣಂತು ॥ ಜ್ಯೋತಿಮಾಪಾಃಸ್ತಪೋಧನಾಃ । ಉದಯೋಸ್ತಾರಕಾಸ್ಸಂತು ವಾಯನಸ್ಸ ಪ್ರಭಾವತಃ । ನ್ಯೂನತಿರಿಕ್ತಕರ್ಮಾಣಿ ಮಯಾನಿಕೃತಾನಿಹಿ ॥ ಕ್ಷಮಧ್ವಂತಾನಿ ಸರ್ವಾಣಿ ಯೂಯಂ ಸರ್ವೇತಪೋಧನಾಃ । ಉಪಚಾರಾಃ ವಿಸರ್ಜನಂ ತತಃ ಕಥಾಂ ಶೃತ್ವಾ ಕೃಷ್ಣಭೂಮ್ಯುತ್ಪನ್ನೈಃ ಶಾಕೈಃ ಶಾಮಾಕೈಃ ರ್ನೀವಾರ್ಹರಂ ಪ್ರಕಲ್ಪ್ಯ ॥ ಋಷಿಧ್ಯಾನ ಪರಾಭವೇತ್ ॥ ಇತಿ ಪೂಜಾವಿಧಿಂ ಸಮಾಪ್ತಃ ॥

ಏವಂ ಪ್ರತಿಮಾಯಾಂ ಪೂಜಾಂ ಕೃತ್ವಾ ವಾಯನಾದೀನಿದತ್ವಾ ಕಥಾಂ ಶೃತ್ವಾ ತತಃ। ಪರೇದುಃ ನಿತ್ಯಕರ್ಮ ಸಮಾಪ್ಯ ಸ್ವಗೃಹಸ್ಯೋಕ್ತವಿಧಿನಾ । ಅಗ್ನಿಂ ಪ್ರತಿಷ್ಠಾಪ್ಯ ದೇಶಕಾಲೌ ಸಂಕೀರ್ತ್ಯ ಋಷಿಪಂಚಮಿಾವ್ರತೋದ್ಯಾಪನಮಹಂ ಕರಿಷ್ಯೇ ॥ ಇತಿ ಸಂಕಲ್ಪ್ಯ ॥ ಸಪ್ತಋಷ್ಯುಕ್ತಮಂತ್ರೈಃ ಪರಮಾನ್ನದ್ರವ್ಯೇಣ ಸಮಿಧ್ಭಿರಾಜ್ಯೇನ ಅಷ್ಟೋತ್ತರ ಶತಸಂಖ್ಯಯಾ ಅಷ್ಟವಿಂಶತ್ಯಾವಾಜುಹುಯಾತ್ । ಅನಂತರಂ ಸಹಸ್ತೋಮೇಸವಾ– ದೇವಾ ॥ಏತಶ್ಚ॥ ಇತಿ ಮಂತ್ರೇಣವಾ ॥ ''ಸಪ್ತತೇ ಅಗ್ನೇ'' ॥ಇತಿ ಮಂತ್ರೇಣವಾ ॥ ಏತೇಷಾ ಮಧ್ಯೇ ಏಕೇನ ಮಂತ್ರೇಣ ಅಷ್ಟಾಭಿಂಶತಿವಾತಂ ಜುಹುಯಾತ್ । ಪೂರ್ಣಾಹುತೀಂ ತತೋಹುತ್ವಾ । ಹೋಮಶೇಷಂ ಸಮಾಪಯೇತ್ । ತತಃ ಪುನಃ ಸಂಕಲ್ಪ್ಯ ಕಲಶಂ ಪುನಃ ಸಂಪೂಜ್ಯ ॥ ಕೃತವ್ರತಸಾಂಗತಾ ಸಿದ್ಧ್ಯರ್ಥಂ । ಪ್ರಧಾನಕಲಶವಸ್ತ್ರ ಪ್ರತಿಮಾದಿದ್ರವ್ಯಾಣಿ ತತ್ವದ್ವಿಭ್ಯೋಮಂತ್ರಪೂರ್ವಕಂ ದತ್ವಾ । ಆಚಾರ್ಯಂ ದಂಪತೀಪೂಜಯಾ ಸತ್ಕೃತ್ಯ । ತದನಂತರಂ ನಾನಾಗೋತ್ರೇಭ್ಯೋ ವಿಭುಧವರ್ಯೇಭ್ಯೋ । ಗೋಹಿರಣ್ಯ ವಸ್ತ್ರಾಭರಣಂಛತ್ರಚಾಮರಶಯ್ಯಾವ್ಯಜಿನ ಸಾಲಗ್ರಾಮ ದಧ್ಯನ್ನದೀಪ ಪಾದುಕಾ ಕನ್ಯಾದಾನಾದಿ ಮಹಾದಾನಾದಿ ಸ್ವಶಕ್ಯಾದತ್ವಾ ಬ್ರಾಹ್ಮಣಸುವಾಸಿನಿಭ್ಯೋ ವಾಯನಾನಿ ಚ ದತ್ವಾ ಬ್ರಾಹ್ಮರ್ಣಾ ಭೋಜಯಿತ್ವಾ ತಾಂಬೂಲದಾನಾನಂತರಂ ತೇಭ್ಯ ಆಶೀಷಃ ಪ್ರಾಪ್ಯತೈತನುಜ್ಞಾನತಃ ಪುತ್ರಮಿತ್ರ ಬಾಂಧವಾದ್ಯೈಸ್ಸಹಸ್ವಯಂ ಭುಂಜೀತ ॥

ಋಷಿಪಂಚಮಿಾವ್ರತ ವಿಧಾನಂ ಸಂಪೂರ್ಣಂ

## ಅಥೋದ್ಯಾಪನಂ

ಕಿಮಸ್ಯೋದ್ಯಾಪನಂ ಪ್ರೋಕ್ತಂ। ವ್ರತಂ ಪೂರ್ಣಫಲಪ್ರದಂ॥ ಸುಮತಿಃ ಕೇನವಿಧಿನಾ। ಚಕಾರವದ ತತ್ವತಃ ॥ ಶ್ರೀಕೃಷ್ಣಃ ॥ ಪೂರ್ವಸ್ಮಿ ದಿವಸೇಕುರ್ಯಾತ್ । ಏಕಭುಕ್ತಂ ಸಮಾಹಿತಃ ॥ ಪ್ರಾತರುತ್ಥಾಯ ಸುಸ್ನಾತ್ವಾ । ತತೋ ಗುರುಗೃಹಂ ವ್ರಜೇತ್ । ಪ್ರಾರ್ಥಯೇತ್ತಂ ಮಮಾಚಾರೋ । ಭವೇದ್ಯಜನಕರ್ಮಣಿ ॥ ಪೂರ್ವೋಕ್ತೇನೈವ ವಿಧಿನಾ । ಸ್ನಾತ್ವಾ ಭಕ್ತ್ಯಾ ಸಮಾಹಿತಃ॥ ಶುಚೌದೇಶೇ ಸಮಾಲಿಪ್ಯ। ಸರ್ವತೋಭದ್ರಮಂಡಲೇ ।





ಆಪ್ರಣಂಸಜಲಂ ಕುಂಭಂ। ತಾಮ್ರಂ ಮೃಣ್ಮಯ ಮೇವ ಚ ॥ ಸಂಸ್ಥಾಪ್ಯ ವಸ್ತ್ರಸಂವಿತಂ। ಕಂಠದೇಶೇಸುಶೋಭನಂ ॥ ಪಂಚರತ್ನ ಸಮಾಯುಕ್ತಂ ಫಲಗಂಧಾಕ್ಷತೈರ್ಯುತಂ ॥ ಸಹಿರಣ್ಯಂ ಸಮಾಸಾದ್ಯ । ತಾಮ್ರೇಣ ಪಟಲೇನವಾ ॥ ವಂಶಮೃಣ್ಮಯಪಾತ್ರೇನ । ಯವಪೂರ್ಣೇನಚೈದಹೀ ॥ ಆಚ್ಛಾದಯೇತ್ತಚ್ಛೇಲೇನ । ಲಿಖೇದಷ್ಟದಳಂ ತಥಃ ॥ ಸೌವರ್ಣೇ ॥ ಪ್ರತಿಪಾಕಾರ್ಯಾ । ಋಷೀಣಾಂಭಾವತಾತ್ಮನಾಂ ॥ ಫಲೇನವಾತದರ್ಧೇನ ತವರ್ಧಾರ್ಧೇನವಾಪುನಾ ॥ ಶಕ್ತ್ಯಾವಾಕಾರಯೇತತ್ರ । ವಿತ್ತಶಾಠ್ಯವಿವರ್ಜಿತಃ ॥ ಶ್ರೀಕೃಷ್ಣಃ ॥ ಏತಾನಾಂ ಪಂಚವರ್ಣಂ ಚ । ಫಲಪುಷ್ಪ ಸಮನ್ವಿತಂ ॥ ಬದ್ನಿಯಾದುಪಂಶ್ರಿ । ಮತ್ಸಂಭಾರಾನ್ ಸಂವಿಧಾಯ ಚ ॥ ಮಧ್ಯಾಹ್ನೇ ಪೂಜಾಯೇದ್ಭಕ್ತ್ಯಾ । ಋಷೀನ್ ಶ್ರದ್ಧಾ ಸಮನ್ವಿತಃ ॥ ಕಶ್ಯಪೋತ್ರಿ..... ರ್ವಸಿಷ್ಠಶ್ಚ । ಸಾಧ್ವೀಚೈವಾಪ್ಯರುಂಧತೀ ॥ ಗೃಹ್ಣಂತರ್ಘ್ಯಂ ಮಯಾದತ್ತಂ । ತುಷ್ಟಾಃ ಸಂಚುತಮೇ ಸದಾ॥ ಏವಂ ಪೂಜಾಂ ವಿನಿರ್ವರ್ತ್ಯಾ। ಋಷೀನ್ ಧ್ಯಾತ್ವಾ ಸಮಾಹಿತ॥ ಅನೇನಾವಿಧಿನಾ ಸಪ್ತ। ವರ್ಷಾಣಿ ವ್ರತಮಾಚರೇತ್॥ ಆದೌ ಮಧ್ಯೇ ತಥಾಚಾಂತೇ। ಕುರ್ಯಾ-ದುದ್ಯಾಪನಂ ಬುಧಃ॥ ಆಚಾರ್ಯನ್ ವರಯೇತ್ಸಪ್ತ ವೇದವೇದಾಂಗಪಾರಗಾನ್॥ ಪ್ರತಿಮಾಸ್ಯಪ್ತಕುರ್ವೀತಾ । ಸುವರ್ಣೇನ ಸ್ವಶಕ್ತಿತಃ । ಜಟಿಲಾನ್ ಸಾಕ್ಷಸೂತ್ರಾಂಶ್ಚ । ಕಮಂಡಲ ಸಮನ್ವಿತಾನ್ ಸಂಸ್ಥಾಪ್ಯ ಕಲಶೇಷ್ವೇತಾನ್ । ಮೃಣ್ಮಯೇಷ್ಮಣಯೇಷ್ವ ಚ ॥ ಸ್ಥಾಪಯೇ ದ್ವಿಧಿವದ್ಭಕ್ತ್ಯಾ । ಪಂಚಾಮೃತಸಾದಿಭಿಃ। ಪೂರ್ವೋಕ್ತವಿಧಿನಾರಾಜನ್ । ಕೃತ್ವಾ ಪೂಜಾ । ಸಮಾಹಿತಃ ರಾತ್ರೌ ಜಾಗರಣಂ ಕುರ್ಯಾತ್ ॥ ಪುರಾಣಶ್ರವಣಾದಿಭಿಃ ॥ ಕೃತನಿತ್ಯಂ ಕ್ರಿಯಾಃ ಪ್ರಾತಃ। ಜುಹುಯಾತ್ ತಿಲಸರ್ಪಿಷಾ ॥ ವೈದಿಕೋವಾದಪೌರಾಣ। ಅಧಿಕಾರಾನುಸಾರತಃ॥ ಸಹಸ್ತೋಮಾಃ ಸಮಾನಾಥ। ನಾಮಮಂತ್ರೈಕಿಸ್ತುವಾಪೃಥಕ್ ॥ ಅಷ್ಟೋತ್ತರಸಹಸ್ರಂವಾ । ಶತಮಷ್ಟೋತ್ತರಂತುವಾ ॥ ಪುನಃ ಪೂಜಾಂ ತತಃ ಕೃತ್ವಾ । ಗುರುಜಂಪೂಜಯೇದ್ವ್ರತಿ ॥ ಸ್ವರ್ಣಾಂಗುಳೀಯವಾಸೋಭಿಃ। ಕುಂಡಲಾವೃತ ಭೋಜನೈಃ ಸಪ್ತಗಾವಶ್ಚದಾತವ್ಯ । ವಸ್ತ್ರಾಲಂಕಾರಪೂಜಿತಾಃ॥ ದದ್ಯಾದೇಕಂ ಸವತ್ಸಾಂ ಚ। ಗೇರುದೇಕಾಂಪಯಸ್ವಿನೀ ಪೂಜಯೇದೃತ್ವಿಜಃ ಸಪ್ತಾ। ವಾಸೋಭಿರ್ದಕ್ಷಿಣಾದಿಭಿಃ॥ ಕಲಶಾನ್ ಉಪವೀತಾಂಶ್ಚ। ದದ್ಯಾತೇಭ್ಯಸ್ಸಶಕ್ತಿತಂ ॥ಆಚಾರ್ಯಂ ಚ ಸಪತ್ನೀಕಂ ಪ್ರಣೇಪತ್ಯ ಸಮೀಪಯೇತ್ ॥ ಭೋಜಯೇತ್ ಬ್ರಾಹ್ಮಣಾದದ್ಯಾ । ದೀನನಾಥಂಪತರ್ಪ್ಯಚ ॥ಸೋಽಸಸ್ಕನಾಸ್ತಾ ಪ್ರತಿಮ। ಆಚಾರ್ಯೇಭ್ಯೋನಿವೇದಯೇತ್ ॥ ಲಬ್ಧ್ವಾಚಾಜ್ಞಾಂತುಭುಂಜಿತಾ । ಚೇಷ್ಟಯೇದ್ಬಂಧುಜನೈಃಸದಾ ॥ ಉದ್ಯಾಪನ ವಿಧಿಃ ಪ್ರೋಕ್ತಾ॥ ಸರ್ವತ್ರಾಯಂ ಫಲಾರ್ಥಿನಾಂ। ಅನೇನವಿಧಿನಾಸಮ್ಯ । ದ್ವ್ರತಮೇತತ್ಸಮಾಚರೇತ್ ॥ ಸರ್ವವ್ರತೇಷುಯತ್ಪುಣ್ಯಂ। ಸರ್ವತೀರ್ಥೇಷು ಯತ್ಫಲಂ॥ ಸರ್ವದಾನೇಷು ದತ್ತೇಷು। ತದೇತದ್ವ್ರತಚರಿಣಾಂ ಏವಂ ಯಃ ಕುರುತೇ ಭೂಪ । ಉದ್ಯಾಪನವಿಧಿಂ ಪರಂ ॥ ಸರ್ವಪಾಪವಿನಿರ್ಮುಕ್ತಃ। ಸ್ವರ್ಗಲೋಕೇ

ಮಹೀಯತೇ ॥ ಇಹಲೋಕೇ ಚಿರಂಕಾಲಂ । ಭರ್ತ್ರಾ ಸಹಶುಚಿಸ್ಮಿತಾ॥ ಪುತ್ರಪೌತ್ರೈಃ ಪರಿವೃತಾ । ಭುಕ್ತ್ವಾಭೋಗಾನ್ಮನೋಹರಾ ॥ ನಿಷ್ಪಾಪಾಸುಭಗಾ ನಿತ್ಯಂ । ವೀಕ್ಷತೇ–ಚಾಕ್ಷಯಾಂಗತಿಂ ॥ ಉದ್ಯಾಪನವಿಧಿ ಸಂಪೂರ್ಣಂ.

## ವ್ರತ ಕಥಾರ್ಥವು

ಒಂದಾನೊಂದು ದಿನ ಯುಧಿಷ್ಠಿರನು ಶ್ರೀಕೃಷ್ಣಪರಮಾತ್ಮನನ್ನು ನೋಡಿ ದೇವಾದಿದೇವಾ ! ನಿನ್ನಿಂದ ಅನೇಕ ವ್ರತಗಳನ್ನು ಕೇಳಿರುವೆನು. ಪಾಪಗಳನ್ನು ಪಾರುಮಾಡುವ ಒಂದಾನೊಂದು ವ್ರತಗಳನ್ನು ಅಪ್ಪಣೆ ಮಾಡಿಸಬೇಕೆಂದು ಪ್ರಾರ್ಥಿಸಲು, ಶ್ರೀಕೃಷ್ಣನು ಧರ್ಮರಾಯನೊಡನೆ ಇಂತೆಂದನು :– ಎಲೈ ಧರ್ಮನಂದನಾ ! ಋಷಿಪಂಚಮಿ ಎಂಬ ಒಂದು ವ್ರತವುಂಟು. ಇದು ಸಕಲ ಪಾಪಕ್ಷಯವಾದುದು. ಇದನ್ನು ಕುರಿತು ನಿನಗೊಂದು ಇತಿಹಾಸವನ್ನು ಹೇಳುವೆನು ಕೇಳು. ಪೂರ್ವಕಾಲದಲ್ಲಿ ವಿದರ್ಭದೇಶದಲ್ಲಿ ಉದಕನೆಂಬ ವಿಪ್ರವರ್ಯನೊಬ್ಬನಿದ್ದನು. ಆತನಿಗೆ ಸುಶೀಲೆಯೆಂಬುವಳು ಭಾರ್ಯೆಯಾಗಿದ್ದಳು. ಅವರಿಗೆ ಒಬ್ಬ ಹೆಣ್ಣುಮಗಳೂ, ಒಬ್ಬ ಮಗನೂ ಹುಟ್ಟಿದರು. ಆ ವಿಪ್ರನ ಮಗನು ಸಕಲ ಶಾಸ್ತ್ರಪಾರಂಗತನಾದನು. ಮಗಳನ್ನು ಯೋಗ್ಯನಾದ ಒಬ್ಬ ವರನಿಗೆ ಕೊಟ್ಟು ವಿವಾಹವನ್ನು ಮಾಡಿದರು. ಪೂರ್ವಜನ್ಮ ಪಾಪವಿಶೇಷದಿಂದ ಆ ಕನ್ಯೆಯು ವಿವಾಹನಂತರ ಕೆಲವು ದಿನಗಳಲ್ಲಿಯೇ ವೈಧವ್ಯವನ್ನು ಹೊಂದಿದಳು. ತದಾದಿಯಾಗಿ ಆ ಮುಗುದೆಯು ತಂದೆಯ ಮನೆಯಲ್ಲಿಯೇ ಮಾತಾಪಿತೃ ಶುಶ್ರೂಷೆಗಳಿಂದ ಕಾಲ ಕಳೆಯುತ್ತಾ ಇದ್ದಳು. ಈ ರೀತಿಯಾದ ಮಗಳ ವೈಧವ್ಯವನ್ನು ನೋಡಿ ಬ್ರಾಹ್ಮಣನು ತುಂಬಾ ವ್ಯಥೆಯನ್ನು ತಾಳಿದವನಾಗಿ ಯಾವುದೊಂದೂ ತೋರದೆ ಗಂಗಾತೀರದ ಒಂದು ಗ್ರಾಮಕ್ಕೆ ಪ್ರಯಾಣಮಾಡಿ ಸಂಸಾರದ ಭಾರವನ್ನೆಲ್ಲಾ ಮಗನಿಗೆ ವಹಿಸಿ ತಾನು ಭಾರ್ಯಾ ಪುತ್ರಿಯೊಡನೆ ತನ್ನ ಉದ್ದಿಶ್ಯದಂತೆ ಹೊರಟು ಆ ಗ್ರಾಮದಲ್ಲಿ ಕೆಲವು ಮಂದಿ ಶಿಷ್ಯರಿಗೆ ವೇದಪಾಠಗಳನ್ನು ಹೇಳುತ್ತಿದ್ದನು. ಹೀಗಿರಲು ಒಂದು ದಿನ ಬ್ರಾಹ್ಮಣನ ಮಗಳು ಮಲಗಿರಲು ಆಕೆಯ ಶರೀರವೆಲ್ಲಾ ಹುಳುಗಳಾಗಿದ್ದವು. ಇದನ್ನು ನೋಡಿದ ಶಿಷ್ಯರು ಆಶ್ಚರ್ಯಚಕಿತರಾಗಿ ವೃತ್ತಾಂತವನ್ನೆಲ್ಲಾ ಗುರುಪತ್ನಿಗೆ ತಿಳಿಸಲು, ಆಕೆಯು ಮಗಳ ಸ್ಥಿತಿಯನ್ನು ನೋಡಿ ಅತ್ಯಂತ ದುಃಖಿತಳಾಗಿ ಬಹಳವಾಗಿ ಅಳುತ್ತಾ ಎದೆಯನ್ನು ಬಡಿದುಕೊಳ್ಳುತ್ತಾ ಸ್ವಲ್ಪಕಾಲದ ಮೇಲೆ ಸಮಾಧಾನವನ್ನು ತಂದುಕೊಂಡು ಪತಿಯ ಸಮೀಪಕ್ಕೆ ಹೋಗಿ ಸಂಗತಿಯನ್ನೆಲ್ಲಾ ತಿಳಿಸಿ ಮಗಳು ಈ ರೀತಿಯಾದುದಕ್ಕೆ ಕಾರಣವೇನೆಂದು ಕೇಳಲು. ಆ ಬ್ರಾಹ್ಮಣನು ಹೇಳಿದನು :– ಈಕೆಯು ಇದಕ್ಕೆ ಏಳು ಜನ್ಮಗಳ ಹಿಂದೆ ಸ್ತ್ರೀಯಾಗಿದ್ದು ರಜಸ್ವಲೆಯಾಗಿದ್ದಾಗ ಅದನ್ನು ನೋಡದೆ ಮನೆಯಲ್ಲಿನ ಭಾಂಡಾದಿಗಳನ್ನು ಮುಟ್ಟಿದಳು. ಆ ದೋಷದಿಂದ ಹೀಗಾಗಿರುವಳು. ಮೊದಲು ಇಂದ್ರನು ವೃತ್ರಾಸುರನನ್ನು ಕೊಂದಕೂಡಲೆ ಬ್ರಹ್ಮಹತ್ಯೆಯು ಪ್ರಾಪ್ತಿಸಲು ಇದರ ಪರಿಹಾರವು

ಹೇಗೆಂದು ಬ್ರಹ್ಮನನ್ನು ಪ್ರಾರ್ಥಿಸಲು ಬ್ರಹ್ಮನು ಇದನ್ನು ನಾಲ್ಕು ಭಾಗಮಾಡಿ ಮೊದಲನೆಯ ಭಾಗವನ್ನು ಅಗ್ನಿಯ ಪ್ರಥಮಜ್ವಾಲೆಯಲ್ಲಿಯೂ, ಎರಡನೆಯ ಭಾಗವನ್ನು ನದಿಗಳ ಪ್ರಥಮ ಪ್ರವಾಹದಲ್ಲಿಯೂ, ಮೂರನೆಯ ಭಾಗವನ್ನು ಪರ್ವತ ವೃಕ್ಷಾದಿಗಳ ಪ್ರದೇಶಗಳಲ್ಲಿಯೂ, ಉಳಿದ ಭಾಗವನ್ನು ಸ್ತ್ರೀಯರ ರಜಸ್ಸಿನಲ್ಲಿಯೂ ಇಟ್ಟನು. ಆದುದರಿಂದ ಸ್ತ್ರೀಯು ರಜಸ್ವಲೆಯಾದನಂತರ ಕ್ರಮವಾಗಿ ಮೊದಲನೆಯದಿನ ಚಂಡಾಲಸ್ತ್ರೀಯಾಗಿಯೂ, ಎರಡನೆಯ ದಿನ ಬ್ರಹ್ಮಘಾತಕಿಯಾಗಿಯೂ, ಮೂರನೆಯ ದಿನ ಅಗಸಗಿತ್ತಿಯಾಗಿಯೂ ಇದ್ದು ನಾಲ್ಕನೆಯ ದಿನ ಪರಿಶುದ್ಧಳಾಗುವಳು. ಆದುದರಿಂದ ಜ್ಞಾನಾಜ್ಞಾನದಿಂದ ರಜಸ್ವಲೆಯಾದ ಹೆಂಗಸು ಮನೆಯಲ್ಲಿರುವ ಭಾಂಡಾದಿಗಳನ್ನು ಮುಟ್ಟಿದ ಪಾತಕ ಪರಿಹಾರಾರ್ಥವಾಗಿ ಈ ಋಷಿಪಂಚಮಿ ವ್ರತವನ್ನು ಮಾಡುವರು. ಈ ನಮ್ಮ ಮಗಳು ತನ್ನ ಗೆಳತಿಯರು ಋಷಿಪಂಚಮಿ ವ್ರತವನ್ನು ಮಾಡುತ್ತಿರಲು ಅದನ್ನು ಪರಿಹಾಸ್ಯ ಮಾಡಿದ ಕಾರಣಗಳಿಂದ ಹುಳುಗಳ ರಾಶಿಯಾದಳು. ಆದರೂ ವ್ರತವನ್ನು ಮಾಡತಕ್ಕವರ ಸಹವಾಸದಲ್ಲಿದ್ದುದರಿಂದ ಬ್ರಾಹ್ಮಣ ಜನ್ಮವು ಪ್ರಾಪ್ತವಾಯಿತು ಎಂದನು. ಇದೀಗ ಚರಿತ್ರೆಯೆಂದು ಶ್ರೀಕೃಷ್ಣನು ಹೇಳಲು ಯುಧಿಷ್ಠಿರನು ಸ್ವಾಮಿ ! ಋಷಿಪಂಚಮಿ ವ್ರತ ಪ್ರಭಾವವನ್ನು ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥಿಸಲಾಗಿ, ಶ್ರೀಕೃಷ್ಣನು ಇದಕ್ಕಾಗಿ ಒಂದು ಇತಿಹಾಸವನ್ನು ಹೇಳಿದನು :– ಕೃತಯುಗದಲ್ಲಿ ವಿದರ್ಭ ದೇಶದಲ್ಲಿ ಸೇನಚಿತ್ತನೆಂಬ ರಾಜನಿದ್ದನು. ಆತನ ರಾಜ್ಯದಲ್ಲಿ ವೇದವೇದಾಂಗ ಪಾರಂಗತನಾದ ಒಬ್ಬ ಬ್ರಾಹ್ಮಣನಿದ್ದನು. ಆತನಿಗೆ ಜಯಶ್ರೀ ಎಂಬ ಪತ್ನಿಯಿದ್ದಳು. ಆಕೆಯು ಪರಮ ಪತಿವ್ರತೆಯಾಗಿ ಪತಿ ಸೇವಾ ಧುರೀಣೆಯಾಗಿದ್ದಳು. ಆ ಬ್ರಾಹ್ಮಣನ ಹೆಸರು ಸುಮಿತ್ರ. ಈತನು ವ್ಯವಸಾಯ ವೃತ್ತಿಯಿಂದ ಜೀವಿಸುತ್ತಿದ್ದನು. ಈತನ ಹೆಂಡತಿಯು ಹೊಲಗದ್ದೆಗಳ ಕಾವಲಿನಲ್ಲಿ ನಿರತಳಾಗಿದ್ದಳು. ಹೀಗಿರಲಾಗಿ ಜಯಶ್ರೀಯ ರಜಸ್ವಲೆಯಾದಳು. ಆದರೂ ಕೆಲಸದ ಒತ್ತಡದಿಂದ ಆಕೆಯು ಅದನ್ನು ಲಕ್ಷ್ಯವಿಡದೆ ಮನೆಯಲ್ಲಿನ ಭಾಂಡಾದಿಗಳನ್ನು ಮುಟ್ಟಿ ಅಡಿಗೆಯನ್ನು ಮಾಡಿದಳು. ಕೆಲವು ದಿನಗಳು ಕಳೆದ ನಂತರ ಈಕೆಯು ಮೃತಳಾಗಿ ತಾನು ಮಾಡಿದ ಕರ್ಮಫಲದಿಂದ ಹೆಣ್ಣುನಾಯಿಯಾಗಿ ಜನ್ಮಿಸಿದಳು. ಸುಮಿತ್ರನು ಮತ್ತೆ ಕೆಲವು ದಿನಗಳಲ್ಲಿ ಮೃತನಾಗಿ ರಜಸ್ವಲೆಯಾದ ತನ್ನ ಸತಿಯೊಡನೆ ಸಂಪರ್ಕ ಮಾಡಿದ ಕಾರಣದಿಂದ ಎತ್ತಾಗಿ ಜನ್ಮಿಸಿದನು. ಇವರಿಬ್ಬರೂ ತಿರ್ಯಗ್ಜಂತುಗಳಾಗಿದ್ದರೂ ಪೂರ್ವಜನ್ಮಸ್ಮೃತಿಯನ್ನು ಸಂಪೂರ್ಣವಾಗಿ ಪಡೆದು ತಮ್ಮ ಮಗನ ಮನೆಯಲ್ಲಿಯೇ ವಾಸಮಾಡುತ್ತಿದ್ದರು. ಸುಮಿತ್ರನ ಮಗನಾದ ಸುಮತಿಯು ಗುರುಶುಶ್ರೂಷಾ ನಿರತನೂ ಸಕಲ ಶಾಸ್ತ್ರ ಕೋವಿದನು ಆಗಿದ್ದನು. ಹೀಗಿರಲು ಒಂದು ದಿನ ತನ್ನ ತಂದೆಯ ಶ್ರಾದ್ಧದಿನವು ಪ್ರಾಪ್ತಿಸಲು, ಸುಮತಿಯು ತನ್ನ ಪತ್ನಿಯನ್ನು ಕರೆದು ಎಲೈ ವನಿತೆಯೇ, ನಮ್ಮ ತಂದೆಯ ಶ್ರಾದ್ಧದಿನವು ನಾಳೆಯದಿನ ಬರುವುದು. ಆದುದರಿಂದ ನಾನಾವಿಧ ಭಕ್ಷ್ಯಗಳನ್ನು ಬಹಳ ನಿಷ್ಠೆಯಿಂದ ಮಾಡಬೇಕೆಂದು ಹೇಳಲು, ಆಕೆಯು ಹಾಗೆಯೇ

ಆಗಲೆಂದು ನಾನಾವಿಧಗಳಾದ ಭಕ್ಷ್ಯಗಳನ್ನು ಮಾಡಿ ಯಾವುದೇ ಕಾರ್ಯಾಂತರದಿಂದ ಹೊರಗೆ ಹೋದಳು. ಆ ಸಮಯದಲ್ಲಿ ಒಂದು ಸರ್ಪವು ಆಕೆಯು ಮಾಡಿದ್ದ ಪಾಯಸದಲ್ಲಿ ತನ್ನ ವಿಷವನ್ನು ಕಾರಿತು. ಇದನ್ನು ನಾಯಿಯ ರೂಪದಲ್ಲಿದ್ದ ಸುಮತಿಯ ತಾಯಿಯು ನೋಡಿ ಇದನ್ನು ತಿಂದರೆ ಬ್ರಾಹ್ಮಣರು ಸಾಯುವರು. ಬ್ರಹ್ಮಹತ್ಯಾದೋಷವು ತನಗೆ ಬರುವುದೆಂದು ತಿಳಿದು ನನ್ನ ಸೊಸೆಯು ಮನೆಗೆ ಬಂದಮೇಲೆ ಆಕೆಯು ನೋಡುತ್ತಿದ್ದಂತೆಯೇ ಆ ಪಾತ್ರೆಯನ್ನು ಮುಟ್ಟಿತು. ಕೂಡಲೇ ತಾನು ಮಾಡಿದ್ದ ಪದಾರ್ಥಗಳು ನಾಯಿಯ ಮುಟ್ಟುವಿಕೆಯಿಂದ ಅಪರಿಶುದ್ಧವಾಯಿತೆಂದು ನಾಯಿಯನ್ನು ಚೆನ್ನಾಗಿ ಹೊಡೆದು ಪದಾರ್ಥಗಳನ್ನು ಆಚೆಗೆ ಬಿಸಾಟು ಬೇರೆ ಅಡಿಗೆಯನ್ನು ಮಾಡಿ ಬ್ರಾಹ್ಮಣರಿಗೆ ಬಡಿಸಿದಳು. ನಂತರ ವ್ಯಥೆಯನ್ನು ತಾಳಿದ ಸುಮಿತ್ರನ ಪತ್ನಿಯು ಜನ್ಮಾಂತರದ ಪತಿಯಾಗಿದ್ದ ವೃಷಭದ ಸಮೀಪಕ್ಕೆ ಬಂದು ಪ್ರಿಯನೇ ! ಈ ದಿನದ ನನ್ನ ಅವಸ್ಥೆಯನ್ನು ಏನೆಂದು ಹೇಳಲಿ, ವಿಷಮಿಶ್ರವಾದ ಆಹಾರವನ್ನು ಬ್ರಾಹ್ಮಣರು ತಿಂದರೆ ತೊಂದರೆಯಾಗುವುದೆಂದೂ, ನಾನು ಅದನ್ನು ಮುಟ್ಟಿದರೆ ಅಪರಿಶುದ್ಧವೆಂದೂ ಬಗೆದು ಬೇರೆ ಅಡಿಗೆಯನ್ನು ಮಾಡುವರೆಂದು ತಿಳಿದು ನಾನು ಭಾಂಡವನ್ನು ತಾಕಲು ಸೊಸೆಯು ಕೊಳ್ಳಿಯಿಂದ ನನ್ನನ್ನು ಚೆನ್ನಾಗಿ ಹೊಡೆದು ತಿಂಡಿಯ್ನನ್ನು ಕೂಡ ಹಾಕದೆ ಇರುತ್ತಾಳೆ. ಈ ಹಸಿವನ್ನೂ, ಬಾಧೆಯನ್ನೂ ನಾನು ತಾಳಲಾರೆನೆಂದು ಬಹುವಾಗಿ ದುಃಖಿಸಲು, ವೃಷಭವು ಎಲೌ ಪ್ರಿಯೇ ನಾನು ಏನು ತಾನೆ ಮಾಡಲಿ ? ಈ ದಿನ ನನ್ನ ಮಗನು ನಾನು ಮಾಡಲಾಗದ ಕೆಲಸಗಳನ್ನೆಲ್ಲಾ ಮಾಡಿಸಿ ಕೈಲಾಗದೆ ತೊಂದರೆಗೊಳ್ಳಲು ಬಹಳವಾಗಿ ಹೊಡೆದು ಹಿಂಸಿಸಿರುತ್ತಾನೆ. ನನಗೂ ಸಹ ಈ ದಿನ ಗ್ರಾಸವನ್ನು ಕೊಡಲಿಲ್ಲ. ಇವನು ಮಾಡಿದ ಶ್ರಾದ್ಧವು ನಿಷ್ಫಲವಾಯಿತು ಎಂದು ದುಃಖಗೊಂಡಿತು. ಇದನ್ನೆಲ್ಲಾ ಕೇಳಿದ ಸುಮತಿಯು ತಂದೆತಾಯಿಗಳ ಗತಿಗಾಗಿ ಚಿಂತಿಸಿ ಮಾರನೆಯ ದಿನ ಪ್ರಾತಃಕಾಲಕ್ಕೆ ಎದ್ದು ಅವರಿಗೆ ಬೇಕಾದಷ್ಟು ಆಹಾರವನ್ನು ಕೊಟ್ಟು ತಾನು ಬರುವವರೆಗೂ ನಾಯಿ, ಎತ್ತುಗಳನ್ನು ಬಹಳ ಆದರದಿಂದ ನೋಡುತ್ತಿರಬೇಕೆಂದು ಹೆಂಡತಿಗೆ ಹೇಳಿ, ತಾನು ಪೂರ್ವಜನ್ಮಜ್ಞರಾದ ಮಹಾಋಷಿಗಳಿರುವ ವನಕ್ಕೆ ಹೋಗಿ ತನ್ನ ತಂದೆತಾಯಿಗಳ ದುರ್ಗತಿಯ ಕಾರಣವನ್ನು ತಿಳಿಸಬೇಕೆಂದು ಅವರನ್ನು ಪ್ರಾರ್ಥಿಸಿದನು. ಅವರು ಪೂರ್ವಜನ್ಮವೃತ್ತಾಂತವನ್ನು ತಿಳಿಸಿ, ಋಷಿಪಂಚಮಿ ವ್ರತವನ್ನು ಮಾಡಿ ಅದರ ಫಲವನ್ನು ಅವರು ಧಾರೆಯೆರೆದರೆ ಈ ದೋಷವು ನಾಶವಾಗಿ ಅವರಿಗೆ ಸದ್ಗತಿಯುಂಟಾಗುವುದೆಂದು ನಿವಾರಣೋಪಾಯವನ್ನು ತಿಳಿಸಿದರು. ಕೂಡಲೇ ಈ ಸುಮತಿಯು ಋಷಿಪಂಚಮಿವ್ರತ ವಿಧಾನವನ್ನೆಲ್ಲಾ ಮಹನೀಯರಿಂದ ತಿಳಿದು ತಾನು ಸಾಂಗವಾಗಿ ವ್ರತವನ್ನು ನಿರ್ವತಿಸಿ ಆ ಫಲವನ್ನು ಧಾರೆಯೆರೆಯಲು ಪಾಪವಿಮುಕ್ತರಾದರು ಎಂದು ಶ್ರೀ ಕೃಷ್ಣ ಪರಮಾತ್ಮನು ಹೇಳಲಾಗಿ ಧರ್ಮನಂದನನು ಕೃಷ್ಣನನ್ನು ನೋಡಿ ಮಹಾನುಭಾವ ! ಈ ವ್ರತೋದ್ಯಾಪನಾ ಕ್ರಮವನ್ನು ತಿಳಿಸಬೇಕೆಂದು ಪ್ರಾರ್ಥಿಸಲು ಶ್ರೀ ಕೃಷ್ಣನಿಂತೆಂದನು :– ಮೊದಲನೆಯ ದಿನ

ಏಕಭುಕ್ತವನ್ನು ಮಾಡಿ ಮಾರನೆಯ ದಿನ ಪ್ರಾತಃಕಾಲಕ್ಕೆ ಎದ್ದು ಸ್ನಾನಾದಿಗಳನ್ನು ತೀರಿಸಿಕೊಂಡು ಆಚಾರ್ಯರ ಮನೆಗೆ ಹೋಗಿ ತಾನು ಮಾಡಲಿರುವ ವ್ರತಕ್ಕೆ ಪುರೋಹಿತರಾಗಬೇಕೆಂದು ಅವರನ್ನು ಪ್ರಾರ್ಥಿಸಿ ನಂತರ ಕಲ್ಪೋಕ್ತಪ್ರಕಾರವಾಗಿ ಸ್ನಾನವನ್ನಾಚರಿಸಿ ಪರಿಶುದ್ಧವಾದ ಪ್ರದೇಶದಲ್ಲಿ ಸಾರಿಸಿ ರಂಗವಲ್ಲಿಯಿಂದಲಂಕರಿಸಿ ಸರ್ವತೋಭದ್ರವಾದ ಮಂಡಲವನ್ನೇರ್ಪಡಿಸಿ ಅಲ್ಲಿ ತಾಮ್ರ, ರಜತ, ಸ್ವರ್ಣ ಅಥವಾ ಮೃಣ್ಮಯಪಾತ್ರೆಗಳಲ್ಲಿ ಯಾವುದಾದರೊಂದನ್ನು ತಂದು ಅದರಲ್ಲಿ ಜಲವನ್ನು ತುಂಬಿ ಅದರ ಕೊರಳಿಗೆ ವಸ್ತ್ರವನ್ನು ಸುತ್ತಿ ಪಂಚ ಗಂಧಾಕ್ಷತೆಗಳಿಂದ ಆರಾಧಿಸಿ ಮಧ್ಯಾಹ್ನ ಸಕಲ ಪೂಜಾದ್ರವ್ಯಗಳಿಂದ ಸಪ್ತಋಷಿಗಳಿಗೂ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಏಳು ವರ್ಷಗಳ ಕಾಲ ಈ ರೀತಿ ವ್ರತವನ್ನು ಮಾಡಿ ಆದಿಯಲ್ಲಾಗಲೀ, ಮಧ್ಯದಲ್ಲಾಗಲೀ, ಅಂತ್ಯದಲ್ಲಾಗಲೀ ಉದ್ಯಾಪನೆಯನ್ನು ಮಾಡಬೇಕು. ಆ ಉದ್ಯಾಪನೆಗಾಗಿ ಏಳು ಮಂದಿ ಋತ್ವಿಕ್ಕುಗಳನ್ನಾರಿಸಿ ಬಂಗಾರದ ಪ್ರತಿಮೆಗಳನ್ನು ಶಕ್ತ್ಯಾನುಸಾರ ಏಳು ಮಾಡಿಸಿ ಏಳು ಕಲಶಗಳಲ್ಲಿಯೂ ಇಟ್ಟು ಅವುಗಳಲ್ಲಿ ಸಪ್ತಋಷಿಗಳನ್ನು ಆವಾಹನೆಮಾಡಿ ಪೂರ್ವೋಕ್ತ ಕಲ್ಪ ಪ್ರಕಾರವಾಗಿ ಪೂಜಿಸಿ ಆ ರಾತ್ರಿ ಪುರಾಣ ಪುಣ್ಯಕತೆಗಳಿಂದ ಜಾಗರಣೆಯನ್ನು ಮಾಡಿ ಮಾರನೆಯ ದಿನ ಪ್ರಾತಃಕಾಲ ಎದ್ದು ಸ್ನಾನಾದಿ ನಿತ್ಯಕರ್ಮಗಳನ್ನು ನಿರ್ವರ್ತಿಸಿ ಅವರವರ ಯೋಗ್ಯತಾನುಸಾರ ವೇದೋಕ್ತ ಮಂತ್ರಗಳಿಂದಾಗಲೀ, ಪುರಾಣೋಕ್ತ ಶ್ಲೋಕಗಳಿಂದಾಗಲೀ ತಿಲಹೋಮವನ್ನು ಅಷ್ಟೋತ್ತರ ಶತಸಂಖ್ಯೆಗಳಿಂದಾಗಲೀ, ನೂರೆಂಟು ಸಾರಿಯಾಗಲೀ ಮಾಡಿ ನಂತರ ಪುನಃ ಪೂಜೆಯನ್ನು ಮಾಡಿ ಆ ಕಲಶ, ವಸ್ತ್ರ, ಪ್ರತಿಮೆಗಳನ್ನು ಋತ್ವಿಕ್ಕುಗಳಿಗೆ ಕೊಟ್ಟು ಆಚಾರ್ಯರನ್ನು ಸ್ವರ್ಣಾಂಗುಲೀಯ ದಾನಾದಿಗಳಿಂದ ತೃಪ್ತಿಗೊಳಿಸಿ ಏಳು ಗೋದಾನಗಳನ್ನು ಮಾಡಿ ನಂತರ ಆಚಾರ್ಯರನ್ನೂ, ಋತ್ವಿಕ್ಕುಗಳನ್ನೂ ಷಡ್ರಸೋಪೇತಭಕ್ಷ್ಯಭೋಜ್ಯಾದಿಗಳಿಂದ ಸಂತೃಪ್ತಿಗೊಳಿಸಿ ಅವರಿಗೆ ತಾಂಬೂಲ ದಕ್ಷಿಣೆಗಳನ್ನು ಕೊಟ್ಟು ಆಮೇಲೆ ಇತರ ಬ್ರಾಹ್ಮಣರಿಗೂ ಅನಾಥರಿಗೂ ಅನ್ನದಾನವನ್ನು ಮಾಡಿ ತಾನು ಊಟವನ್ನು ಮಾಡಬೇಕು. ಎಲೈ ಧರ್ಮರಾಜನೇ ! ಈ ವ್ರತವನ್ನು ಈ ಪ್ರಕಾರವಾಗಿ ಮಾಡಿದವರಿಗೆ ಸರ್ವತೀರ್ಥದ ಸ್ನಾನ ಫಲಗಳೂ, ಸರ್ವ ವ್ರತಾಚರಣೆಯ ಫಲಗಳೂ, ಸರ್ವ ದಾನ ಫಲಗಳೂ ಉಂಟಾಗುವುವು. ಆದುದರಿಂದ ಈ ವ್ರತವನ್ನು ಭಕ್ತಿಶ್ರದ್ಧೆಗಳಿಂದ ಮಾಡತಕ್ಕ ವನಿತೆಯು ಇಹದಲ್ಲಿ ಸರ್ವಪಾಪ ವಿಮುಕ್ತಳಾಗಿ ಸಮಸ್ತ ಸುಖಗಳನ್ನೂ ಅನುಭವಿಸಿ ಅಂತ್ಯದಲ್ಲಿ ಶಾಶ್ವತ ಸ್ವರ್ಗಸುಖವನ್ನು ಪಡೆಯುವಳು ಎಂದು ಶ್ರೀ ಕೃಷ್ಣನು ಹೇಳಲಾಗಿ ಯುಧಿಷ್ಠಿರನು ಕೇಳಿ ಬಹಳ ಸಂತೋಷಗೊಂಡನೆಂಬಲ್ಲಿಗೆ, ಋಷಿಪಂಚಮಿಾ ವ್ರತಕಥೆ ಸಂಪೂರ್ಣಂ.



# ಶ್ರೀಕೃಷ್ಣಜನ್ಮಾಷ್ಟಮೀ ವ್ರತ

ಶ್ರಾವಣಮಾಸದ ಅಷ್ಟಮೀ ದಿನ ಪ್ರಾತಃಕಾಲಕ್ಕೆ ಎದ್ದು ನಿತ್ಯವಿಧಿಗಳನ್ನು ಪೂರೈಸಿಕೊಂಡು ಕೃಷ್ಣಾಷ್ಟಮೀ ವ್ರತವನ್ನು ಮಾಡುವುದಾಗಿ ಸಂಕಲ್ಪಯುತನಾಗಿ, ಜಯಂತಿಯನ್ನು ಮಾಡುವುದಾಗಿದ್ದಲ್ಲಿ ಅದನ್ನೂ ಮಾಡುವೆನೆಂದು ಸಂಕಲ್ಪಿಸಿ, ಸಕಲ ಪಾಪಗಳನ್ನೂ ಪರಿಹಾರ ಮಾಡತಕ್ಕ ಶ್ರೀಕೃಷ್ಣನ ಉದ್ದಿಶ್ಯದಿಂದ ಉಪವಾಸವನ್ನು ಮಾಡಬೇಕು. ಶಕ್ತಿ ಇಲ್ಲದವರು ಫಲಹಾರವನ್ನು ಮಾಡಬಹುದು. ಶಕ್ತಿಗೆ ಲೋಪಮಾಡದೆ ಬಂಗಾರ, ಬೆಳ್ಳಿ, ತಾಮ್ರದಿಂದಾಗಲೀ, ಮಣ್ಣಿನಿಂದಾಗಲಿ ಪ್ರತಿಮೆಯನ್ನು ಮಾಡಬೇಕು. ಅಥವಾ ಗೋಡೆಯ ಮೇಲೆ ಬರೆಯಬೇಕು. ಬರೆಯುಸತಕ್ಕ ಕ್ರಮವು ಹೇಗೆಂದರೆ – ದೇವಕೀದೇವಿಯು ಮಲಗಿರುವ ಹಾಗೆಯೂ, ಕೃಷ್ಣನು ಸ್ತನ್ಯಪಾನವನ್ನು ಮಾಡುತ್ತಿರುವಂತೆಯೂ ಚಿತ್ರವನ್ನು ನಿರ್ಮಿಸಬೇಕು. ಜಯಂತಿಯು ಪ್ರಾಪ್ತವಾದರೆ ಮತ್ತೊಂದು ಕೃಷ್ಣನ ಪ್ರತಿಮೆಯನ್ನು ಆ ಚಿತ್ರದಲ್ಲಿ ದೇವಕಿಗೆ ಲಕ್ಷ್ಮೀದೇವಿ ಪಾದಗಳನ್ನು ಒತ್ತುವಂತೆ ಇರಬೇಕು ಮತ್ತು ಖಡ್ಗವನ್ನು ಧರಿಸಿರುವ ವಸುದೇವನನ್ನೂ, ನಂದಗೋಪಿಕಾಗೋಪಿಯರನ್ನೂ, ಮತ್ತೊಂದು ಕಡೆ ಮಂಚದಲ್ಲಿ ಕನ್ಯೆಯೊಡನೆ ಯಶೋದ ಇರುವಂತೆಯೂ, ಇನ್ನೊಂದು ಪೀಠದಲ್ಲಿ ವಸುದೇವ, ದೇವಕೀ, ನಂದ, ಯಶೋದೆ, ಶ್ರೀಕೃಷ್ಣ ಬಲರಾಮ, ಚಂಡಿಕೆಗಳ ಪ್ರತಿಮೆಗಳನ್ನು ಬರೆಯಿಸಬೇಕು. ಇಷ್ಟು ಪ್ರತಿಮೆಗಳನ್ನು ಮಾಡಿಸಲು ಶಕ್ತಿಯಿಲ್ಲದಿರುವಾಗ ವಸುದೇವನೇ ಮೊದಲುಗೊಂಡು ಚಂಡಿಗಳವರೆಗೂ ಏಳು ಪ್ರತಿಮೆಗಳನ್ನು ಮಾಡಿಸಿ ಆಚಾರಾನುಸಾರವಾಗಿಯೂ, ಶಕ್ತ್ಯಾನುಸಾರವಾಗಿಯೂ ಪ್ರತಿಮೆಗಳೆಲ್ಲವನ್ನೂ ಪೂಜಿಸಬೇಕು.

## ಅಥ ವ್ರತ ವಿಧಾನಮ್

**ಭೋ ದೀಪ ದೇವೀ ರೂಪಸ್ತ್ವಂ ಕರ್ಮಸಾಕ್ಷೀ ಹ್ಯವಿಘ್ನಕೃತ್ ।**
**ಯಾವತ್ಪೂಜಾ ಸಮಾಪ್ತಿಸ್ಯಾತ್ ತಾವತ್ತ್ವಂ ಸುಸ್ಥಿರೋ ಭವ ॥**

ಇತಿ ದೀಪಂ ಪ್ರಜ್ವಾಲ್ಯ । ದೀಪಂ ನಮಸ್ಕೃತ್ಯ । ದೀಪಗಳನ್ನು ಬೆಳಗಿಸಿ ನಮಸ್ಕರಿಸುವುದು. ಕರ್ತಾ ಆಚಮ್ಯ । ಆಚಮನ ಮಾಡುವುದು.

**ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।**
**ಕುರ್ವೇ ಘಂಟಾರವಂತತ್ರ ದೇವತಾಹ್ವಾನಲಾಂಛನಮ್ ॥**

ಇತಿ ಘಂಟಾನಾದಂ ಕೃತ್ವಾ । ಘಂಟೆ ಬಾರಿಸುವುದು.

**ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।**
**ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥**
**ಅಭೀಪ್ಸಿತಾರ್ಥ ಸಿದ್ಧ್ಯರ್ಥಂ ಪೂಜಿತೋಯಸ್ಸುರೈರಪಿ ।**
**ಸರ್ವವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥**

ಗಣಪತಿಂ ಧ್ಯಾತ್ವಾ । ಗಣಪತಿಗೆ ಕೈ ಮುಗಿಯುವುದು.

**ಓಂ ವಿಷ್ಣುಶಕ್ತಿ ಸಮೋಪೇತೇ ಸರ್ವವರ್ಣೇ ಮಹೀತಲೇ ।**
**ಅನೇಕರತ್ನಸಂಭೂತೇ ಭೂಮಿದೇವಿ ನಮೋಽಸ್ತು ತೇ ॥**

ಇತಿ ಭೂಮಿಂ ಸ್ಪೃಷ್ಟ್ವಾ ಸಂಪ್ರಾರ್ಥ್ಯ ॥ ಕುಳಿತಿರುವ ಪೀಠದ ಕೆಳಗಿನ ಭೂಮಿಯನ್ನು ಮುಟ್ಟಿ ನಮಸ್ಕರಿಸಿ ಪ್ರಾರ್ಥಿಸಿಕೊಳ್ಳುವುದು.

**ಪೃಥ್ವಿ ತ್ವಯಾ ಧೃತಾ ಲೋಕಾಃ ದೇವಿ ತ್ವಂ ವಿಷ್ಣುನಾ ಧೃತಾ ।**
**ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್ ॥**

ಓಂ ಆಸನಾಯ ನಮಃ । ಓಂ ಅನಂತಾಸನಾಯ ನಮಃ । ಓಂ ಕೂರ್ಮಾಸನಾಯ ನಮಃ । ಓಂ ವಿಮಲಾಸನಾಯ ನಮಃ । ಓಂ ಕಮಲಾಸನಾಯ ನಮಃ । ಓಂ ಮಧ್ಯೇ ಶ್ರೀ ಪರಮಸುಖಾಸನಾಯ ನಮಃ । ಓಂ ಭೂರ್ಭುವಸ್ಸುವಃ । ಇತ್ಯಾಸನೇ ಉಪವಿಶ್ಯ । ಆಸನದಲ್ಲಿ ಕುಳಿತುಕೊಳ್ಳುವುದು.

ಸಂಕಲ್ಪ : ಪ್ರಾಣಾನಾಯಮ್ಯ । ಪ್ರಣವಸ್ಯ । ಪರಬ್ರಹ್ಮ ಋಷಿಃ । ಪರಮಾತ್ಮಾ ದೇವತಾ । ದೈವೀ ಗಾಯತ್ರೀ ಛಂದಃ । ಪ್ರಾಣಾಯಾಮೇ ವಿನಿಯೋಗಃ । ಓಂ ಭೂಃ । ಓಂ ಭುವಃ । ಓಗ್ಂ ಸುವಃ । ಓಂ ಮಹಃ । ಓಂ ಜನಃ । ಓಂ ತಪಃ । ಓಗ್ಂ ಸತ್ಯಮ್ ।

**ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ । ಓಂ ಆಪೋ ಜ್ಯೋತೀರಸೋ ಅಮೃತಂ ಬ್ರಹ್ಮ ಭೂರ್ಭುವಸ್ಸುವರೋಮ್ ॥**

ಶುಭೇ । ಶೋಭನೇ ಮುಹೂರ್ತೇ । ಆದ್ಯ ಬ್ರಹ್ಮಣಃ । ದ್ವಿತೀಯ ಪರಾರ್ಧೇ । ಶ್ವೇತವರಾಹಕಲ್ಪೇ । ವೈವಸ್ವತ ಮನ್ವಂತರೇ । ಕಲಿಯುಗೇ । ಪ್ರಥಮಪಾದೇ । ಜಂಬೂದ್ವೀಪೇ । ಭರತವರ್ಷೇ । ಭರತಖಂಡೇ । ದಂಡಕಾರಣ್ಯೇ ಗೋದಾವರ್ಯಾಃ । ದಕ್ಷಿಣೇತೀರೇ । ಶಾಲಿವಾಹನಶಕೇ । ಬೌದ್ಧಾವತಾರೇ । ರಾಮಕ್ಷೇತ್ರೇ । ಅಸ್ಮಿನ್ ವರ್ತಮಾನೇ । ವ್ಯಾವಹಾರಿಕೇ । ಚಾಂದ್ರಮಾನೇ । ಪ್ರಭವಾದಿಷಷ್ಠಿ ಸಂವತ್ಸರಾಣಾಂ ಮಧ್ಯೇ......ನಾಮ ಸಂವತ್ಸರೇ । ದಕ್ಷಿಣಾಯನೇ । ವರ್ಷಋತೌ ಶ್ರಾವಣಮಾಸೇ ಕೃಷ್ಣಪಕ್ಷೇ । ಅಷ್ಟಮ್ಯಾಂ ಶುಭತಿಥೌ । .... ವಾಸರ ಯುಕ್ತಾಯಾಂ । ಶುಭನಕ್ಷತ್ರ ಶುಭಯೋಗ । ಶುಭಕರಣ । ಏವಂಗುಣ ವಿಶೇಷಣ ವಿಶಿಷ್ಟಾಯಾಂ ಅಸ್ಯಾಂ ಶುಭತಿಥೌ । ಮಮ ಇಹ ಜನ್ಮನಿ ಜನ್ಮಾಂತರೇ ಚ ಸಕಲಸೌಭಾಗ್ಯಸಿದ್ಧ್ಯರ್ಥಂ । ಶ್ರೀ ಕೃಷ್ಣಾಷ್ಟಮೀಪ್ರಯುಕ್ತಂ ಷೋಡಶೋಪಚಾರ ಪೂಜಾಂ ಕರಿಷ್ಯೇ ॥

ತದಂಗತ್ವೇನ ಕಲಶಾರ್ಚನಂ ಕರಿಷ್ಯೇ। ಕಲಶಂ ಗಂಧಾಕ್ಷತೆ ಪತ್ರಪುಷ್ಪೈಃ ಅಭ್ಯರ್ಚ॥

ಪಂಚಪಾತ್ರೆಯಲ್ಲಿ ನೀರು ಹಾಕಿಕೊಂಡು ಪಂಚಪಾತ್ರೆಗೆ ಪೂರ್ವದಿಂದ ನಾಲ್ಕೂಕಡೆಗೆ ಗಂಧ ಹಚ್ಚಿ ಅದರ ಮೇಲೆ ಮಂತ್ರಾಕ್ಷತೆ ಇಟ್ಟು, ಒಂದು ಹೂ ಅಥವಾ ತುಳಸೀದಳವನ್ನು ಪಂಚಪಾತ್ರೆಯೊಳಕ್ಕೆ ಹಾಕಿ ಬಲಗೈ ಮೇಲೆ ಬರುವಂತೆ ಮುಚ್ಚಿಕೊಳ್ಳುವುದು.

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥

ಕುಕ್ಷೌತು ಸಾಗರಸ್ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಸ್ಸಾಮವೇದೋ ಹ್ಯಥರ್ವಣಃ ॥

ಅಂಗೈಶ್ಚ ಸಹಿತಾಸ್ಸರ್ವೇ ಕಲಶಾಂಬು ಸಮಾಶ್ರಿತಾಃ ।
ಆಯಾಂತು ದೇವಪೂಜಾರ್ಥಂ ದುರಿತಕ್ಷಯಕಾರಕಾಃ ॥

ಗಂಗೇ ಚ ಯಮುನೇ ಚೈವ ಗೋದಾವರೀ ಸರಸ್ವತೀ ।
ನರ್ಮದೇ ಸಿಂಧು ಕಾವೇರೀ ಜಲೇಽಸ್ಮಿನ್ ಸನ್ನಿಧಿಂ ಕುರು ॥

ಓಂ ಇಮಂ ಮೇ ಗಂಗೇ ಯಮುನೇ ಸರಸ್ವತೀ । ಶುತುದ್ರಿಸ್ತೋಮಗ್ಂ ಸಚತಾ ಪರುಷ್ಣ್ಯಾ ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾರ್ಜಿಕೀಯೇ ಶೃಣುಹ್ಯಾ ಸುಷೋಮಯಾ ॥

ಉದ್ಧರಣೆಯಿಂದ ಪಂಚಪಾತ್ರೆಯ ನೀರನ್ನು ತುಂಬಿಕೊಂಡು ಕಲಶದೊಳಕ್ಕೆ ಹಾಕಿರುವ ಹೂವಿನಿಂದ ಪ್ರೋಕ್ಷಿಸುವುದು.

ಯಾಗಮಂಡಪಂ ಯಾಗಭೂಮಿಂ ಚ ಸಂಪ್ರೋಕ್ಷ್ಯ । ಪೂಜೋಪಕರಣ ದ್ರವ್ಯಾಣಿ ಪುಷ್ಪಾಣಿ ಚ ಸಂಪ್ರೋಕ್ಷ್ಯ । ದೇವತಾಂ ಸಂಪ್ರೋಕ್ಷ್ಯ । ಆತ್ಮಾನಂ





ಸಂಪ್ರೋಕ್ಷ್ಯ। ಶೇಷಂ ಜಲಂ ವಿಸೃಜ್ಯ॥ ಮಂಟಪಕ್ಕೆ, ಪೂಜಾದ್ರವ್ಯಗಳಿಗೆ, ಕುಳಿತಿರುವ ಸ್ಥಳಕ್ಕೆ ದೇವರಿಗೆ ಮತ್ತು ತನ್ನ ಮೇಲೂ ಪ್ರೋಕ್ಷಿಸಿ ಉಳಿದ ನೀರನ್ನು ಅರ್ಘ್ಯಪಾತ್ರೆಗೆ ಹಾಕುವುದು.

## ಗಣಪತಿ ಪೂಜೆ

ಮಯಾ ಕರಿಷ್ಯಮಾಣ ಕೃಷ್ಣಾಷ್ಟಮೀ ವ್ರತಸ್ಯ ನಿರ್ವಿಘ್ನೇನ ಸಮಾಪ್ತ್ಯರ್ಥಂ ಶ್ರೀ ಗಣಪತಿ ಪೂಜಾಂ ಕರಿಷ್ಯೇ ॥

ಓಂ ಗಣಾನಾಂ ತ್ವಾಂ ಗಣಪತಿಗ್ಂ ಹವಾಮಹೇ। ಕವಿಂ ಕವೀನಾಂ ಉಪಮ-ಶ್ರವಸ್ತಮಮ್। ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ನೂತಿ-ಭಿಸ್ಸೀದಸಾದನಮ್ ॥

ಶ್ರೀ ಗಣಪತಯೇ ನಮಃ। ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ। ಹೂವಿನಿಂದ ಪೂಜಿಸುವುದು.

ಆವಾಹಯಾಮಿ। ಆವಾಹನಂ ಸಮರ್ಪಯಾಮಿ। ಹೂವಿನಿಂದ ಪೂಜಿಸುವುದು.

ಸಿಂಹಾಸನಂ ಸಮರ್ಪಯಾಮಿ। ಹೂವಿನಿಂದ ಪೂಜಿಸುವುದು.

ಪಾದ್ಯಂ ಸಮರ್ಪಯಾಮಿ। ಕಾಲುಗಳ ಮೇಲೆ ನೀರು ಪ್ರೋಕ್ಷಿಸುವುದು.

ಅರ್ಘ್ಯಂ ಸಮರ್ಪಯಾಮಿ। ಕೈಗಳ ಮೇಲೆ ನೀರು ಪ್ರೋಕ್ಷಿಸುವುದು.

ಆಚಮನೀಯಂ ಸಮರ್ಪಯಾಮಿ। ಸೊಂಡಿಲ ಮೇಲೆ ನೀರು ಪ್ರೋಕ್ಷಿಸುವುದು.

## ಪಂಚಾಮೃತ ಸ್ನಾನ

ಹಾಲು : ಓಂ ಆಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣಿಯಮ್। ಭವಾವಾಜಸ್ಯ ಸಂಗಥೇ ॥

ಶ್ರೀ ಗಣಪತಯೇ ನಮಃ ಕ್ಷೀರಸ್ನಾನಂ ಸಮರ್ಪಯಾಮಿ ॥ ಹೂವನ್ನು ಹಾಲಿನಲ್ಲಿ ಅದ್ದಿ ಪ್ರೋಕ್ಷಿಸುವುದು.

ಮೊಸರು : ಓಂ ದಧಿಕ್ರಾವ್ಣ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ। ಸುರಭಿನೋ ಮುಖಾಕರತ್ಪ್ರಣ ಆಯೂಗ್ಂ ಷಿತಾರಿಷತ್ ॥

ಶ್ರೀ ಗಣಪತಯೇ ನಮಃ ದಧಿಸ್ನಾನಂ ಸಮರ್ಪಯಾಮಿ ॥ ಮೊಸರಿನಿಂದ ಪ್ರೋಕ್ಷಣೆ ಮಾಡುವುದು.

ತುಪ್ಪ : ಓಂ ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋ-ವಸ್ಸವಿತೋತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಸ್ಸೂರ್ಯಸ್ಯರಶ್ಮಿಭಿಃ ॥

ಶ್ರೀ ಗಣಪತಯೇ ನಮಃ ಘೃತೇನ ಸ್ನಪಯಾಮಿ ॥ ತುಪ್ಪದಿಂದ ಪ್ರೋಕ್ಷಣೆ ಮಾಡುವುದು.

**ಜೇನುತುಪ್ಪ:** ಓಂ ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ। ಮಾಧ್ವೀರ್ನಃ ಸಂತ್ವೋಷಧೀಃ ॥ ಮಧುನಕ್ತಮುತೋಷಸಿ। ಮಧುಮತ್ಪಾರ್ಥಿವಗ್ಂ ರಜಃ ಮಧು ದ್ಯೌರಸ್ತು ನಃ ಪಿತಾ। ಮಧುಮಾನ್ನೋ ವನಸ್ಪತಿರ್ಮಧುಮಾಗ್ಂ ಅಸ್ತುಸೂರ್ಯಃ। ಮಾಧ್ವೀರ್ಗಾವೋ ಭವಂತು ನಃ ॥

ಶ್ರೀ ಗಣಪತಯೇ ನಮಃ ಮಧುನಾ ಸ್ನಪಯಾಮಿ ॥ ಜೇನಿನಿಂದ ಪ್ರೋಕ್ಷಣೆ ಮಾಡುವುದು.

**ಸಕ್ಕರೆ :** ಓಂ ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತು ನಾಮ್ನೇ। ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾಗ್ಂ ಅದಾಭ್ಯಃ ॥

ಶ್ರೀ ಗಣಪತಯೇ ನಮಃ ಶರ್ಕರಯಾ ಸ್ನಪಯಾಮಿ ॥ ಸಕ್ಕರೆಯಿಂದ ಪ್ರೋಕ್ಷಣೆ ಮಾಡುವುದು.

**ಫಲೋದಕ :** ಓಂ ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾಯಾಶ್ಚ ಪುಷ್ಪಿಣೀ। ಬೃಹಸ್ಪತಿ ಪ್ರಸೂತಾಸ್ತಾನೋ ಮುಂಚಂತ್ವಗ್ಂಹಸಃ ॥

ಶ್ರೀ ಗಣಪತಯೇ ಫಲೋದಕೇನ ಸ್ನಪಯಾಮಿ ॥ ಎಳನೀರಿನಿಂದ ಪ್ರೋಕ್ಷಣೆ.

ಪಂಚಾಮೃತ ಸ್ನಾನಾನಂತರೇ ಆಚಮನಂ ಸಮರ್ಪಯಾಮಿ ॥ ಒಂದು ಉದ್ಧರಣೆ ನೀರನ್ನು ಗಣಪತಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕುವುದು.

ವಸ್ತ್ರದ್ವಯಂ ಸಮರ್ಪಯಾಮಿ। ಹತ್ತಿಯಿಂದ ಮಾಡಿದ ಗೆಜ್ಜೆವಸ್ತ್ರಗಳನ್ನಿಡುವುದು.

ಉಪವೀತಂ ಸಮರ್ಪಯಾಮಿ। ಯಜ್ಞೋಪವೀತ ಅಥವಾ ಅಕ್ಷತೆಗಳನ್ನು ಹಾಕುವುದು.

ಗಂಧಾನ್ ಸಮರ್ಪಯಾಮಿ। ಗಂಧ ಹಚ್ಚುವುದು.

ಅಕ್ಷತಾನ್ ಸಮರ್ಪಯಾಮಿ। ಅಕ್ಷತೆಯಿಂದ ಪೂಜಿಸುವುದು.

ಪುಷ್ಪಾಣಿ ಸಮರ್ಪಯಾಮಿ। ಹೂವಿನಿಂದ ಪೂಜಿಸುವುದು.

## ಅಥ ನಾಮ ಪೂಜಾ

ಓಂ ಸುಮುಖಾಯ ನಮಃ
ಓಂ ಏಕದಂತಾಯ ನಮಃ
ಓಂ ಕಪಿಲಾಯ ನಮಃ
ಓಂ ಗಜಕರ್ಣಕಾಯ ನಮಃ
ಓಂ ಲಂಬೋದರಾಯ ನಮಃ
ಓಂ ವಿಕಟಾಯ ನಮಃ
ಓಂ ವಿಘ್ನರಾಜಾಯ ನಮಃ
ಓಂ ಗಣಾಧಿಪಾಯ ನಮಃ
ಓಂ ಧೂಮ್ರಕೇತವೇ ನಮಃ
ಓಂ ಗಣಾಧ್ಯಕ್ಷಾಯ ನಮಃ
ಓಂ ಫಾಲಚಂದ್ರಾಯ ನಮಃ
ಓಂ ಗಜಾನನಾಯ ನಮಃ

ನಾನಾವಿಧ ಪರಿಮಳಪತ್ರಪುಷ್ಪಾಣಿ ಸಮರ್ಪಯಾಮಿ ॥ ಹೂ ಮಂತ್ರಾಕ್ಷತೆಗಳನ್ನು ಹಾಕುವುದು.

**ದಶಾಂಗಂ ಗುಗ್ಗುಲೋ ಧೂಪಃ ಸುಗಂಧಶ್ಚ ಮನೋಹರಃ ।**
**ಕಪಿಲಾಘೃತ ಸಂಯುಕ್ತೋ ಧೂಪೋಽಯಂ ಪ್ರತಿಗೃಹ್ಯತಾಮ್ ॥**

ಶ್ರೀ ಮಹಾಗಣಪತಯೇ ನಮಃ ಧೂಪಮಾಘ್ರಾಪಯಾಮಿ ॥ ಊದಿನಕಡ್ಡಿ ಹಚ್ಚಿ ಬೆಳಗಿಸುವುದು.

**ಸಾಜ್ಯಂ ತ್ರಿವರ್ತಿ ಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ।**
**ಗೃಹಾಣ ಮಂಗಳಂ ದೀಪಂ ತ್ರೈಲೋಕ್ಯತಿಮಿರಾಪಹ ॥**

**ಶ್ರೀಮಹಾಗಣಪತಯೇ ನಮಃ ಏಕಾರ್ತಿದೀಪಂ ದರ್ಶಯಾಮಿ ॥** ಮೂರು ಬತ್ತಿಗಳನ್ನು ಹಚ್ಚಿ ಬೆಳಗುವುದು.

**ಧೂಪದೀಪಾನಂತರೇ ಆಚಮನಮ್ ॥** ಧೂಪದೀಪಗಳಾದ ನಂತರ ಒಂದು ಉದ್ಧರಣೆ ನೀರು ಬಿಡುವುದು.

**ಆಚಮನಾನಂತರೇ ಪತ್ರಪುಷ್ಪಾಣಿ ಸಮರ್ಪಯಾಮಿ ॥** ಹೂವುಗಳಿಂದ ಪೂಜೆ ಮಾಡುವುದು.

## ನೈವೇದ್ಯ

ಕಲಶದ ನೀರನ್ನು ತೆಗೆದುಕೊಂಡು ನೈವೇದ್ಯದ ಮೇಲೆ ಪ್ರೋಕ್ಷಿಸಿ ಪ್ರದಕ್ಷಿಣಾ–ಕಾರವಾಗಿ ಪರಿಷೇಚನೆ ಮಾಡುವುದು.

**ಓಂ ವಿಶ್ವಾಮಿತ್ರ ಋಷಿಃ । ಸವಿತಾ ದೇವತಾ । ಗಾಯತ್ರೀ ಛಂದಃ ।**

**ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯಾತ್ ।**

**ಸತ್ಯಂತ್ವರ್ತೇನ ಪರಿಷಿಂಚಾಮಿ ॥**

ಓಂ ಪ್ರಾಣಾಯ ಸ್ವಾಹಾ । ಓಂ ಅಪಾನಾಯ ಸ್ವಾಹಾ । ಓಂ ವ್ಯಾನಾಯ ಸ್ವಾಹಾ । ಓಂ ಉದಾನಾಯ ಸ್ವಾಹಾ । ಓಂ ಸಮಾನಾಯ ಸ್ವಾಹಾ । ಓಂ ಬ್ರಹ್ಮಣೇ ಸ್ವಾಹಾ ॥

ಶ್ರೀ ಗಣಪತಯೇ ನಮಃ ಕದಲೀಫಲ (ಬಾಳೆಹಣ್ಣು), ನಾರಿಕೇಳಫಲ (ತೆಂಗಿನಕಾಯಿ) ನೈವೇದ್ಯಂ ಸಮರ್ಪಯಾಮಿ । ಚಣಕದಳ ಮುದ್ಗದಳ (ಕಡಲೇಬೇಳೆ, ಹೆಸರುಬೇಳೆ) ನೈವೇದ್ಯಂ ಸಮರ್ಪಯಾಮಿ ।

ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ ॥ ಒಂದು ಉದ್ಧರಣೆ ನೀರು ಬಿಡುವುದು.

ತಾಂಬೂಲಂ ಸಮರ್ಪಯಾಮಿ । ದಕ್ಷಿಣಾಂ ಸಮರ್ಪಯಾಮಿ ॥ ಎಲೆ ಅಡಿಕೆ ದಕ್ಷಿಣೆ ಇಡುವುದು.

## ಮಂಗಳಾರತಿ

ಸಾಮ್ರಾಜ್ಯಂ ಭೌಜ್ಯಂ ಸ್ವಾರಾಜ್ಯಂ ವೈರಾಜ್ಯಂ ಪಾರಮೇಷ್ಟ್ಯಂ ರಾಜ್ಯಂ ಮಹಾರಾಜ್ಯಮಾಧಿಪತ್ಯಮಂ । ಸಮಂತಪರ್ಯಾಯೀ ಸ್ಯಾತ್ಸಾರ್ವಭೌಮಸ್ಸಾರ್ವಾ-ಯುಷ ಆಂತಾದಾ ಪರಾರ್ಧಾತ್ಪೃಥಿವ್ಯೈ ಸಮುದ್ರಪರ್ಯಂತಾಯಾ ಏಕರಾಳಿತಿ ॥

ಶ್ರೀ ಗಣಪತಯೇ ನಮಃ । ಮಂಗಳ ನೀರಾಜನಂ ದರ್ಶಯಾಮಿ । ಒಂದು ಸಾರಿ ನೀರು ಬಿಟ್ಟು ಹಲಗಾರತಿ ಹಿಂದೆ ಇಟ್ಟಿರುವ ಹೂಮಂತ್ರಾಕ್ಷತೆಗಳನ್ನು ದೇವರ ಮೇಲೆ ಹಾಕಿ ಮಂಗಳಾರತಿ ತೆಗೆದುಕೊಳ್ಳುವುದು.

## ಪ್ರದಕ್ಷಿಣೆ ನಮಸ್ಕಾರ

ಗಜಾನನಂ ಭೂತಗಣಾಧಿಸೇವಿತಂ ಕಪಿತ್ಥಜಂಬೂಫಲಸಾರಭಕ್ಷಿತಮ್ ।
ಉಮಾಸುತಂ ಶೋಕವಿನಾಶಕಾರಣಂ ನಮಾಮಿ ವಿಘ್ನೇಶ್ವರ ಪಾದಪಂಕಜಮ್ ॥

ಪ್ರದಕ್ಷಿಣ ನಮಸ್ಕಾರಮ್ ಸಮರ್ಪಯಾಮಿ ॥ ಪ್ರದಕ್ಷಿಣೆ ನಮಸ್ಕಾರ

## ಪುನಃ ಪೂಜಾಂ ಕರಿಷ್ಯೇ

ಶ್ರೀ ಗಣಪತಯೇ ನಮಃ । ಛತ್ರಂ ಸಮರ್ಪಯಾಮಿ । ಚಾಮರೇ ವೀಜಯಾಮಿ । ನೃತ್ಯಂ ದರ್ಶಯಾಮಿ । ಗೀತಂ ಶ್ರಾವಯಾಮಿ । ಸರ್ವೋಪಚಾರ ಪೂಜ್ಞಾಂ ಸಮರ್ಪಯಾಮಿ ॥

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃಪೂಜಾ ಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ಲಂಬೋದರಮ್।

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಗಣಾಧಿಪ ।
ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಮಯಾ ಕೃತೇನ ಷೋಡಶೋಪಚಾರ ಪೂಜಾ ವಿಧಾನೇನ ಭಗವಾನ್ ಸರ್ವಾತ್ಮಕಃ ಶ್ರೀ ಮಹಾಗಣಪತಿಃ ಸುಪ್ರೀತಃ ಸುಪ್ರಸನ್ನೋ ವರದೋ ಭವತು । ಹೂ ಮಂತ್ರಾಕ್ಷತೆಗಳನ್ನು ಕೈಯಲ್ಲಿಟ್ಟುಕೊಂಡು ನೀರು ಹಾಕಿಕೊಂಡು ಅರ್ಘ್ಯಪಾತ್ರೆಗೆ ಬಿಡುವುದು.

ವಕ್ರತುಂಡ ಮಹಾಕಾಯ ಕೋಟಿಸೂರ್ಯ ಸಮಪ್ರಭ ।
ನಿರ್ವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥

ಎಂದು ಹೇಳಿ ಗಣಪತಿ ಪ್ರಸಾದದ ಹೂ ತೆಗೆದುಕೊಂಡು ಮುಡಿದುಕೊಳ್ಳುವುದು.




## ಅಥ ಪ್ರಾಣ ಪ್ರತಿಷ್ಠಾಪನಮ್

ಅಸ್ಯ ಶ್ರೀಕೃಷ್ಣ ಪ್ರಾಣಪ್ರತಿಷ್ಠಾಪನ ಮಹಾಮಂತ್ರಸ್ಯ । ಬ್ರಹ್ಮಾ ವಿಷ್ಣು ಮಹೇಶ್ವರಾ ಋಷಯಃ ॥ ಋಗ್ಯಜುಸ್ಸಾಮಾಥರ್ವಣ ಛಂದಾಸಿ । ಪ್ರಾಣಶಕ್ತಿಃ ಪರಾದೇವತಾ । ಹ್ರಾಂ ಬೀಜಂ ಹ್ರೀಂ ಶಕ್ತಿಃ । ಹ್ರೂಂ ಕೀಲಕಮ್ ॥ ಮಮ ಶ್ರೀಕೃಷ್ಣಪ್ರಾಣಪ್ರತಿಷ್ಠಾಸಿದ್ಧ್ಯರ್ಥೇ ಜಪೇ ವಿನಿಯೋಗಃ ॥

**ಅಥ ಕರನ್ಯಾಸಃ** (ಎರಡೂ ಕೈಗಳಿಂದ) :

ಹ್ರಾಂ ಅಂಗುಷ್ಠಾಭ್ಯಾಂ ನಮಃ ॥ ತೋರುಬೆರಳನ್ನು ಹೆಬ್ಬೆರಳಿಗೆ ಮುಟ್ಟಿಸಿ ಮಿಡಿಯುವುದು.

ಹ್ರೀಂ ತರ್ಜನೀಭ್ಯಾಂ ನಮಃ ॥ ಹೆಬ್ಬೆರಳಿನಿಂದ ತೋರುಬೆರಳನ್ನು ಬುಡದಿಂದ ತುದಿಯವರೆಗೆ ಸವರುವುದು.

ಹ್ರೂಂ ಮಧ್ಯಮಾಭ್ಯಾಂ ನಮಃ ॥ ಹೆಬ್ಬೆರಳಿನಿಂದ ಮಧ್ಯದ ಬೆರಳನ್ನು ಸವರುವುದು.

ಹ್ರೈಂ ಅನಾಮಿಕಾಭ್ಯಾಂ ನಮಃ ॥ ಹೆಬ್ಬೆರಳಿನಿಂದ ಉಂಗುರದ ಬೆರಳನ್ನು ಸವರುವುದು.

ಹ್ರೌಂ ಕನಿಷ್ಠಿಕಾಭ್ಯಾಂ ನಮಃ ॥ ಹೆಬ್ಬೆರಳಿನಿಂದ ಕಿರುಬೆರಳನ್ನು ಸವರುವುದು.

ಹ್ರಃ ಕರತಲಕರಪೃಷ್ಠಾಭ್ಯಾಂ ನಮಃ ॥ ಎರಡೂ ಅಂಗೈಗಳನ್ನು ಒಂದರ ಮೇಲೊಂದನ್ನಿಟ್ಟು ಸವರುವುದು.

**ಅಥ ಹೃದಯಾದಿನ್ಯಾಸಃ :**

ಹ್ರಾಂ ಹೃದಯಾಯ ನಮಃ ॥ ಎದೆಯನ್ನು ಮುಟ್ಟಿಕೊಳ್ಳುವುದು.

ಹ್ರೀಂ ಶಿರಸೇ ಸ್ವಾಹಾ ॥ ತಲೆಯನ್ನು ಮುಟ್ಟಿಕೊಳ್ಳುವುದು.

ಹ್ರೂ ಶಿಖಾಯೈ ವೌಷಟ್ ॥ ತಲೆಯ ಕೂದಲನ್ನು ಮುಟ್ಟಿಕೊಳ್ಳುವುದು.

ಹ್ರೈಂ ಕವಚಾಯ ಹುಂ ॥ ಎರಡು ಕೈಗಳನ್ನು ಸ್ವಸ್ತಿಕರೂಪದಲ್ಲಿ ಭುಜಗಳ ಮೇಲೆ ಇಟ್ಟುಕೊಳ್ಳುವುದು.

ಹ್ರೌಂ ನೇತ್ರತ್ರಯಾಯೈ ವೌಷಟ್ ॥ ಎರಡೂ ಕಣ್ಣುಗಳನ್ನು ಮುಟ್ಟಿಕೊಂಡು ಕೈಯನ್ನು ತಲೆಯ ಸುತ್ತಾ ತಿರುಗಿಸಿ ಚಪ್ಪಾಳೆ ತಟ್ಟುವುದು.

ಹ್ರಃ ಅಸ್ತ್ರಾಯ ಫಟ್ ॥ ಚಪ್ಪಾಳೆ ತಟ್ಟುವುದು.

ಭೂರ್ಭುವಸ್ಸುವರೋಂ ಇತಿ ದಿಗ್ಬಂಧಃ ॥




## ಧ್ಯಾನಮ್

ರಕ್ತಾಂಬೋಧಿ ಸ್ಥಪೋತೋಲ್ಲಸದರುಣಸರೋಜಾಧಿರೂಢಾ ಕರಾಬ್ಜೈಃ।
ಪಾಶಂ ಕೋದಂಡಮಿಕ್ಷೂದ್ಭವಮಣಿಗಣಮಪ್ಯಂಕುಶಂ ಪಂಚಬಾಣಾನ್।
ಬಿಭ್ರಾಣಾಸೃಕ್ಕಪಾಲಂ ತ್ರಿನಯನವಿಲಸತ್ಪೀನವಕ್ಷೋರುಹಾಢ್ಯಾಮ್ ।
ದೇವೀ ಬಾಲಾರ್ಕವರ್ಣಾ ಭವತು ಸುಖಕರೀ ಪ್ರಾಣಶಕ್ತಿಃ ಪರಾ ನಃ ॥

ಓಂ ಹ್ರಾಂ ಹ್ರೀಂ ಹ್ರೂಂ ಕ್ರೋಂ ಯ ರ ಲ ವ ಶ ಸ ಹ ಹಂಸಸ್ಸೋಽಹಂ ಹಂಸಃ। ಶ್ರೀಕೃಷ್ಣ ಪ್ರಾಣಃ ಮಮ ಪ್ರಾಣಃ। ಶ್ರೀಕೃಷ್ಣಜೀವಃ ಮಮಜೀವಃ। ವಾಙ್ಮನಶ್ಚಕ್ಷುಶ್ಶ್ರೋತ್ರ ಜಿಹ್ವಾಘ್ರಾಣೈಃ ಉಚ್ಛ್ವಾಸ ನಿಶ್ವಾಸರೂಪೇಣ ಬಹಿರಾಗತ್ಯ ಅಸ್ಮಿನ್ ಬಿಂಬೇ ಸುಖಂ ಚಿರಂ ತಿಷ್ಠಂತು ಸ್ವಾಹಾ ॥

ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹನೋ ಧೇಹಿ ಭೋಗಮ್ । ಜ್ಯೋಕ್ಪಶ್ಯೇಮ ಸೂರ್ಯಮುಚ್ಚರನ್ತಮನುಮತೇ ಮೃಡಯಾನಃ ಸ್ವಸ್ತಿ॥

ಸ್ವಾಮಿನ್ ಸರ್ವಜಗನ್ನಾಥ ಯಾವತ್ಪೂಜಾವಸಾನಕಮ್ ।
ತಾವತ್ತ್ವಂ ಪ್ರೀತಿಭಾವೇನ ಬಿಂಬೇಽಸ್ಮಿನ್ ಸನ್ನಿಧಿಂ ಕುರು ॥

ಅತ್ರಾವಾಹಿತೋ ಭವ। ಸ್ಥಾಪಿತೋ ಭವ। ಸನ್ನಿಹಿತೋ ಭವ। ಸನ್ನಿರುದ್ಧೋ ಭವ। ಅವಕುಂಠಿತೋ ಭವ।ಸುಪ್ರಸನ್ನೋ ಭವ। ವರದೋ ಭವ। ಶಾಂತೋ ಭವ॥ ಪ್ರಸೀದ ಪ್ರಸೀದ॥

ಧ್ಯಾನ: ಶ್ರೀಕೃಷ್ಣ ಗೋಪೀಜನಮುಖ್ಯ ವಿಷ್ಣೋ ಬ್ರಹ್ಮಾಂಡ ಕುಕ್ಷಿಂಧರ ವಾಸುದೇವ।
ಗೋಪಾಂಗವಲ್ಲಭ ಸಾರಸಾಕ್ಷ ಗೋವಿಂದ ಪೀತಾಂಬರ ಶಂಖಚಕ್ರಿನ್ ॥

ತ್ವಂ ಧ್ಯಾತ್ವಾಹಾರಂ ಸಮ್ಯಕ್ ಶ್ರೀಕೃಷ್ಣಂ ವಿಶ್ವರೂಪಿಣಮ್ ।
ಇಷ್ಟಕಾಮ್ಯಾರ್ಥ ಸಿದ್ಧ್ಯರ್ಥಂ ಪೂಜಾಂ ಕುರ್ಯಾತ್ ಯಥಾವಿಧಿ॥

ಓಂ ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ । ತನ್ನೋ ರುದ್ರಃ ಪ್ರಚೋದಯಾತ್ ॥

ಶ್ರೀ ಕೃಷ್ಣಾಯ ನಮಃ ಧ್ಯಾಯಾಮಿ। ಧ್ಯಾನಂ ಸಮರ್ಪಯಾಮಿ॥ ಧ್ಯಾನಮಾಡುವುದು.

ಆವಾಹನೆ : ಆವಾಹಯಾಮಿ ದೇವೇಶ ಸರ್ವಲೋಕೈಕ ಪೂಜಿತ ।
ಯದ್ರಹಸ್ಯಮಿದಂ ಪುಣ್ಯಂ ಸರ್ವಪಾಪಹರೋ ಹರಿಃ ॥

ಓಂ ಸಹಸ್ರಶೀರ್ಷಾಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । ಸಭೂಮಿಂ ವಿಶ್ವತೋ ವೃತ್ವಾಽತ್ಯತಿಷ್ಠದ್ದಶಾಂಗುಲಮ್ ॥

ಶ್ರೀಕೃಷ್ಣಾಯ ನಮಃ ಆವಾಹಯಾಮಿ । ಆವಾಹನಂ ಸಮರ್ಪಯಾಮಿ । ಹೂವು ಮಂತ್ರಾಕ್ಷತೆಗಳಿಂದ ಪೂಜೆ ಮಾಡುವುದು.

ಸಿಂಹಾಸನ : ದೇವ ದೇವ ಜಗನ್ನಾಥ ಪ್ರಣತಕ್ಲೇಶ ನಾಶನ ।
ರತ್ನ ಸಿಂಹಾಸನ ದಿವ್ಯಂ ಗೃಹಾಣ ಮಧುಸೂದನ ॥

ಓಂ ಪುರುಷ ಏವೇದಗ್ಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ । ಉತಾಮೃತ-ತ್ವಸ್ಯೇಶಾನೋ ಯದನ್ನೇನಾऽತಿರೋಹತಿ ॥

ಶ್ರೀಕೃಷ್ಣಾಯ ನಮಃ ರತ್ನಸಿಂಹಾಸನಂ ಸಮರ್ಪಯಾಮಿ ॥ ಹೂವು ಮಂತ್ರಾಕ್ಷತೆಗಳಿಂದ ಪೂಜೆ ಮಾಡುವುದು.

ಪಾದ್ಯ : ವಾಂಛಿತಂ ಕುರು ಮೇ ದೇವ ದುಷ್ಕೃತಂ ಚ ವಿನಾಶಯ ।
ಪಾದ್ಯಂ ಗೃಹಾಣ ಭಗವಾನ್ ದೇವಕ್ಯುತ್ಸಂಗ ಸಂಚಿತ ॥

ಓಂ ಏತಾವಾನಸ್ಯ ಮಹಿಮಾತೋಜ್ಯಾಯಾಂಶ್ಚ ಪೂರುಷಃ । ಪಾದೋऽಸ್ಯ ವಿಶ್ವಾಭೂತಾನಿ ತ್ರಿಪಾದಾಸ್ಯಾऽಮೃತಂ ದಿವಿ ॥

ಶ್ರೀಕೃಷ್ಣಾಯ ನಮಃ ಪಾದಾರವಿಂದಯೋಃ ಪಾದ್ಯಂ ಪಾದ್ಯಂ ಸಮರ್ಪಯಾಮಿ॥ ಉದ್ಧರಣೆಯಲ್ಲಿ ನೀರು ತೆಗೆದುಕೊಂಡು ದೇವರ ಕಾಲುಗಳಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕುವುದು.

ಅರ್ಘ್ಯ : ಕುರುಷ್ವ ಮೇ ದಯಾಸಿಂಧೋ ಸಂಸಾರಾರ್ತಿಭಯಾಪಹ ।
ದಧಿಕ್ಷೀರ ಜಲೋಪೇತಂ ಗೃಹಾಣಾರ್ಘ್ಯಂ ನಮೋऽಸ್ತುತೇ ॥

ಓಂ ತ್ರಿಪಾದೂರ್ಧ್ವ ಉದೈತ್ಪುರುಷಃ ಪಾದೋಸ್ಯೇಹಾಭವತ್ಪುನಃ । ತತೋ ವಿಶ್ವಂ ವ್ಯಕ್ರಾಮತ್ ಸಾಶನಾನಶನೇ ಅಭಿ ॥

ಶ್ರೀ ಕೃಷ್ಣಾಯ ನಮಃ ಹಸ್ತಯೋ ಅರ್ಘ್ಯಮರ್ಘ್ಯಂ ಸಮರ್ಪಯಾಮಿ ॥ ಉದ್ಧರಣೆಯಲ್ಲಿ ನೀರು ತೆಗೆದುಕೊಂಡು ಗಣಪತಿಯ ಕೈಗಳಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕುವುದು.

ಆಚಮನ : ಶ್ರೀ ವತ್ಸಾಂಕ ಜಗದ್ರೂಪ ಶ್ರೀವತ್ಸ ಶ್ರೀನಿಕೇತನ ।
ಉಪೇಂದ್ರ ದೇವಕೀಪುತ್ರ ಗೃಹಾಣಾಚಮನೀಯಕಮ್ ॥

ಓಂ ತಸ್ಮಾದ್ವಿರಾಳಜಾಯತ ವಿರಾಜೋ ಅಧಿಪುರುಷಃ । ಸಜಾತೋ ಅತ್ಯರಿಚ್ಯತ ಪಶ್ಚಾದ್ಭೂಮಿ ಮಥೋಪುರಃ ।

ಶ್ರೀಕೃಷ್ಣಾಯ ನಮಃ ಮುಖೇ ಆಚಮನಮಾಚಮನಂ ಸಮರ್ಪಯಾಮಿ ॥ ಉದ್ಧರಣೆಯಿಂದ ನೀರು ತೆಗೆದುಕೊಂಡು ಸೊಂಡಲಿಗೆ ತೋರಿಸಿ ಅರ್ಘ್ಯಪಾತ್ರೆಗೆ ಹಾಕುವುದು.

ಮಧುಪರ್ಕ : ಗೋಪವೇಷ ನಮಸ್ತುಭ್ಯಂ ದಧಿಕ್ಷೀರ ಸಮನ್ವಿತಮ್ ।
ಮಧುಪರ್ಕಂ ಗೃಹಾಣೇದಂ ಮಯಾ ದತ್ತಂ ಹಿ ಕೇಶವ ॥

ಶ್ರೀಕೃಷ್ಣಾಯ ನಮಃ ಮಧುಪರ್ಕಂ ಸಮರ್ಪಯಾಮಿ ॥ ಬಾಳೆಹಣ್ಣನ್ನು ಅರ್ಧ ಸುಲಿದು ಅದನ್ನು ಹಾಲು, ಮೊಸರು, ಜೇನು, ತುಪ್ಪ, ಸಕ್ಕರೆಯಲ್ಲಿ ಅದ್ದಿ ಅದನ್ನು ವೀಳೇದೆಲೆಯ ಮೇಲಿರಿಸಿ ದೇವರ ಬಲಗಡೆಗೆ ಇಡುವುದು.

## ಪಂಚಾಮೃತ ಸ್ನಾನಮ್

ಹಾಲು : ಓಂ ಅಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣಿಯಮ್ । ಭವಾವಾಜಸ್ಯ ಸಂಗಥೇ ॥

ಶ್ರೀ ಕೃಷ್ಣಾಯ ನಮಃ ಕ್ಷೀರೇಣ ಸ್ನಪಯಾಮಿ । ಹಾಲಿನಲ್ಲಿ ಹೂ ಅದ್ದಿ ಪ್ರೋಕ್ಷಿಸುವುದು.

ಮೊಸರು : ಓಂ ದಧಿಕ್ರಾವ್‌ಣ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ । ಸುರಭಿನೋ ಮುಖಾಕರತ್ಪ್ರಣ ಆಯೂಗ್‌ಂಷಿತಾರಿಷತ್ ॥

ಶ್ರೀಕೃಷ್ಣಾಯ ನಮಃ ದಧ್ನಾ ಸ್ನಪಯಾಮಿ ॥ ಮೊಸರಿನಲ್ಲಿ ಹೂ ಅದ್ದಿ ಪ್ರೋಕ್ಷಿಸುವುದು.

ತುಪ್ಪ : ಓಂ ಶುಕ್ರಮಸಿ ಜ್ಯೋತಿರಸಿ ತೇಜೋಽಸಿ ದೇವೋವಸ್ಸವಿತೋ–ತ್ಪುನಾತ್ವಚ್ಛಿದ್ರೇಣ ಪವಿತ್ರೇಣ ವಸೋಸ್ಸೂರ್ಯಸ್ಯ ರಶ್ಮಿಭಿಃ ॥

ಶ್ರೀ ಕೃಷ್ಣಾಯ ನಮಃ ಘೃತೇನ ಸ್ನಪಯಾಮಿ ॥ ತುಪ್ಪದಿಂದ ಪ್ರೋಕ್ಷಣೆ.

ಜೇನುತುಪ್ಪ : ಓಂ ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ ॥ ಮಧುನಕ್ತ ಮುತೋಷಸಿ । ಮಧುಮತ್ಪಾರ್ಥಿವಗ್‌ಂ ರಜಃ ಮಧು ದ್ಯೌರಸ್ತು ನಃ ಪಿತಾ । ಮಧುಮಾನ್ನೋ ವನಸ್ಪತಿರ್ಮಧುಮಾಗ್‌ಂ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ॥

ಶ್ರೀಕೃಷ್ಣಾಯ ನಮಃ ಮಧುನಾ ಸ್ನಪಯಾಮಿ । ಜೇನುತುಪ್ಪದಿಂದ ಪ್ರೋಕ್ಷಣೆ.

ಸಕ್ಕರೆ : ಓಂ ಸ್ವಾದು ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತು ನಾಮ್ನೇ । ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾಗ್‌ಂ ಅದಾಭ್ಯಃ ॥

ಶ್ರೀ ಕೃಷ್ಣಾಯ ನಮಃ ಶರ್ಕರಸ್ನಾನಂ ಸಮರ್ಪಯಾಮಿ । ಸಕ್ಕರೆಯಿಂದ ಪ್ರೋಕ್ಷಣೆ.

ಫಲೋದಕ : ಓಂ ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾಯಾಶ್ಚ ಪುಷ್ಪಿಣೀಃ । ಬೃಹಸ್ಪತಿ ಪ್ರಸೂತಾಸ್ತಾನೋ ಮುಂಚಂತ್ವಗ್‌ಂಹಸಃ ॥

ಶ್ರೀ ಕೃಷ್ಣಾಯ ನಮಃ ಫಲೋದಕೇನ ಸ್ನಪಯಾಮಿ । ಎಳನೀರಿನಿಂದ ಪ್ರೋಕ್ಷಣೆ.

ಪಂಚಾಮೃತ ಋಕ್ಕುಗಳನ್ನು ಸಸ್ವರವಾಗಿ ಹೇಳಲು ಬಾರದಿರುವವರು ಈ ಮುಂದೆ ತಿಳಿಸಿರುವ ಶ್ಲೋಕವನ್ನು ಹೇಳಿಕೊಂಡು ಪಂಚಾಮೃತ ಪ್ರೋಕ್ಷಣೆ ಮಾಡಬಹುದು.

ಶರ್ವಾಯ ಸ್ವರ್ಗಪತಯೇ ಗೋವಿಂದಾಯ ಮಹಾತ್ಮನೇ ।
ಸ್ನಾನಂ ಪಂಚಾಮೃತಂ ದೇವ ಗೃಹಾಣ ಸುರಸತ್ತಮ ॥
ತತ್ತತ್ ಮಂತ್ರೇಣ ಕ್ಷೀರಾದ್ಯಭಿಷೇಕಂ ಕುರ್ಯಾತ್ ॥

## ಶುದ್ಧೋದಕ

ನಾರಿಕೇಲೋದಕಂ ದಿವ್ಯ ಗಂಗಾದಿ ಸರಿದುದ್ಭವಮ್ ।
ಶುದ್ಧೋದಕಂ ಗೃಹಾಣೇದಂ ಸ್ನಾನಂ ಕುರು ಯಥಾವಿಧಿ ॥

ಓಂ ಆಪೋಹಿಷ್ಠಾ ಮಯೋಭುವಸ್ತಾನ ಊರ್ಜೇ ದಧಾತನ । ಮಹೇರಣಾಯ ಚಕ್ಷಸೇ ಯೋವಶ್ಶಿವತಮೋರಸಃ ತಸ್ಯ ಭಾಜಯತೇಹ ನಃ । ಉಶತೀರಿವ ಮಾತರಃ ತಸ್ಮಾ ಅರಂಗಮಾಮ ವೋ ಯಸ್ಯ ಕ್ಷಯಾಯ ಜಿನ್ವಥ ಆಪೋಜನ ಯಥಾಚ ನಃ ॥

ಯತ್ಪುರುಷೇಣ ಹವಿಷಾ ದೇವ ಯಜ್ಞ ಮತನ್ವತ । ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ॥

ಶ್ರೀಕೃಷ್ಣಾಯ ನಮಃ ಶುದ್ಧೋದಕಸ್ನಾನಂ ಸಮರ್ಪಯಾಮಿ ॥ ನೀರಿನಿಂದ ಪ್ರೋಕ್ಷಣೆ ಮಾಡುವುದು.

ಆಚಮ್ಯತಾಂ ಜಗನ್ನಾಥ ಸಂಸಾರಾರ್ಣವ ತಾರಕ ।
ಗೋವಿಂದ ಪರಮಾನಂದ ವಿಶ್ವರೂಪ ನಮೋಽಸ್ತು ತೇ ॥

ಶ್ರೀಕೃಷ್ಣಾಯ ನಮಃ ಶುದ್ಧೋದಕಸ್ನಾನಾನಂತರಂ ಪುನರಾಚಮನಂ ಸಮರ್ಪಯಾಮಿ।

ವಸ್ತ್ರ: ಪೀತಾಂಬರಾಣಿ ಸರ್ವೇಶ ನಾನಾವಸ್ತ್ರೋಭಿಶೋಭಿತ ।
ಧಾರಯೇದ್ವಿಶ್ವರೂಪಾತ್ಮನ್ ಶ್ರೀಕೃಷ್ಣ ಜಗತಾಂ ಪತೇ ॥

ಓಂ ಯುವಃ ವಸ್ತ್ರಾಣಿ ಪೀವಸಾ ವಸಾಥೇ ಯುವೋರಚ್ಛಿದ್ರಾಮಂತವೋ ಹಸರ್ಗಾಃ। ಅವಾತಿರತಮನೃತಾನಿ ವಿಶ್ವ ಋತೇನ ಮಿತ್ರಾವರುಣಾ ಸಚೇಥೇ ॥

ಸಪ್ತಾಸ್ಯಾಸನ್ ಪರಿಧಯಃ । ತ್ರಿಸ್ಸಪ್ತ ಸಮಿಧಃ ಕೃತ್ವಾಃ । ದೇವಾ ಯದ್ಯಜ್ಞಂ ತನ್ವಾನಾಃ । ಅಬಧ್ನನ್ ಪುರುಷಂ ಪಶುಮ್ ।

ಶ್ರೀ ಕೃಷ್ಣಾಯ ನಮಃ ವಸ್ತ್ರಯುಗ್ಮಂ ಸಮರ್ಪಯಾಮಿ ॥ ಗೆಜ್ಜೆವಸ್ತ್ರಗಳನ್ನಿಡುವುದು.

ಉಪವೀತ : ಬ್ರಹ್ಮಸೂತ್ರಂ ಚೋಪವೀತಂ ತ್ರಯೀನಾಥ ಧರಾಧರ।
ಗೋವಿಂದ ಪರಮಾನಂದ ವಾಸುದೇವಾಯ ತೇ ನಮಃ ॥

ಓಂ ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹಜಂ ಪುರಸ್ತಾತ್। ಆಯುಷ್ಯಮಗ್ರಿಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ ॥

ತಂ ಯಜ್ಞಂ ಬರ್ಹಿಷಿ ಪ್ರೌಕ್ಷನ್ಪುರುಷಂ ಜಾತಮಗ್ರತಃ । ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ ॥

ಶ್ರೀಕೃಷ್ಣಾಯ ನಮಃ ಯಜ್ಞೋಪವೀತಂ ಸಮರ್ಪಯಾಮಿ । ಯಜ್ಞೋಪವೀತ.

ಗಂಧ : ಚಂದನಾಗರು ಕಸ್ತೂರಿ ಘನಸಾರ ಸಮನ್ವಿತಮ್ ।
ಗಂಧಂ ಗೃಹಾಣ ದೇವೇಶ ನಾನಾ ಗಂಧಾಂಶ್ಚ ಧಾರಯ ॥

ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ । ಈಶ್ವರೀಂ ಸರ್ವಭೂತಾನಾಂ ತ್ವಾಮಿಹೋಪಹ್ವಯೇ ಶ್ರಿಯಮ್ ॥

ಶ್ರೀ ಕೃಷ್ಣಾಯ ನಮಃ ದಿವ್ಯ ಪರಿಮಳಗಂಧಾನ್ ಧಾರಯಾಮಿ । ಗಂಧವನ್ನು ಹಚ್ಚುವುದು.

ಅಕ್ಷತೆ : ವಿಶ್ವೇಶ್ವರ ವಿಶಾಲಾಕ್ಷ ಗೃಹಾಣ ಪರಮೇಶ್ವರ ।
ಗೋವಿಂದ ಪರಮಾನಂದ ಹರಿದ್ರಾ ಮಿಶ್ರಿತಾಕ್ಷತಾನ್ ॥

ಆಯನೇತೇ ಪರಾಯಣೇ ದೂರ್ವಾರೋಹಂತು ಪುಷ್ಪಿಣೀಃ । ಹ್ರದಾಶ್ಚ ಪುಂಡರೀಕಾಣಿ ಸಮುದ್ರಸ್ಯ ಗೃಹಾ ಇಮೇ ॥

ತಸ್ಮಾದ್ಯಜ್ಞಾತ್ಸರ್ವಹುತ ಋಚಃಸ್ಸಾಮಾನಿ ಜಜ್ಞಿರೇ । ಛಂದಾಸಿ ಜಜ್ಞಿರೇ ತಸ್ಮಾತ್ । ಯಜುಸ್ತಸ್ಮಾದಜಾಯತ ॥

ಶ್ರೀ ಕೃಷ್ಣಾಯ ನಮಃ ರಕ್ತಾಕ್ಷತಾನ್ ಧಾರಯಾಮಿ ॥ ಗಂಧದ ಮೇಲೆ ಕೆಂಪು ಅಕ್ಷತೆ ಕಾಳುಗಳನ್ನು ಇಡುವುದು.

ಆಭರಣ : ಕೇಯೂರವಲಯಂ ಚೈವ ಗ್ರೈವೇಯ ಕುಂಡಲದ್ವಯಮ್ ।
ಅಂಗುಲೀಯಕ ರತ್ನಾನಿ ಭೂಷಣಾನಿ ಚ ಗೃಹ್ಯತಾಮ್ ॥

ಓಂ ಹಿರಣ್ಯರೂಪಸ್ಸಹಿರಣ್ಯಸಂದೃಗಪಾನನಪಾತ್ಸೇದು ಹಿರಣ್ಯವರ್ಣಃ । ಹಿರಣ್ಯಯಾತ್ಪರಿಯೋನೇರ್ನಿಷದ್ಯಾ ಹಿರಣ್ಯದಾ ದದತ್ಯನ್ನಮಸ್ಮೈ ॥

ಶ್ರೀಕೃಷ್ಣಾಯ ನಮಃ ನಾನಾವಿಧ ಆಭರಣಾನಿ ಸಮರ್ಪಯಾಮಿ ॥ ಆಭರಣಗಳು.

ಪುಷ್ಪ : ಸೇವಂತಿಕಾ ಬಕುಳ ಪಾಟಲಾಬ್ಜ
ಪುನ್ನಾಗ ಜಾಜಿ ಕರವೀರ ರಸಾಲಪುಷ್ಪೈಃ ।
ಬಿಲ್ವ ಪ್ರವಾಲ ತುಲಸೀದಲ ಮಲ್ಲಿಕಾಭಿಃ
ತ್ವಾಂ ಪೂಜಯಾಮಿ ಜಗದೀಶ್ವರ ವಾಸುದೇವ ॥

ತಸ್ಮಾದಶ್ವಾ ಅಜಾಯಂತ ಯೇ ಕೇ ಚೋ ಭಯಾದತಃ । ಗಾವೋಹ ಜಜ್ಞೀರೇ ತಸ್ಮಾತ್ತಸ್ಮಾಜ್ಜಾತಾ ಅಜಾವಯಃ ॥

ಓಂ ಯೋಽಪಾಂ ಪುಷ್ಪಂ ವೇದ । ಪುಷ್ಪವಾನ್ ಪ್ರಜಾವಾನ್ ಪಶುಮಾನ್ ಭವತಿ। ಚಂದ್ರಮಾ ವಾ ಅಪಾಂ ಪುಷ್ಪಮ್ । ಪುಷ್ಪವಾನ್ ಪ್ರಜಾವಾನ್ ಪಶುಮಾನ್ ಭವತಿ ॥

ಶ್ರೀ ಕೃಷ್ಣಾಯ ನಮಃ ಪುಷ್ಪಮಾಲಿಕಾಂ ಸಮರ್ಪಯಾಮಿ ॥

ಹರಿದ್ರಾಚೂರ್ಣ : ಭಕ್ತಾನಾಂ ಸುಖದಾತಾರ ಸರ್ವಮಂಗಳಕಾರಕ ।
(ಹರಿಶಿನ) ಹರಿದ್ರಾಂ ತೇ ಪ್ರಯಚ್ಛಾಮಿ ಗೃಹಾಣ ಮಧುಸೂಧನ ॥

ಓಂ ಹರಿದ್ರವೇವ ಪತತೋವನೇ । ದುಪ ಸೋಮಂ ಸುತಂ । ಮಹಿಷೇವಾವ ಗಚ್ಛತೇ । ಸಜೋಷತಾ ಉಷಸಾ ಸೂರ್ಯೇಣ ಚಕ್ರವರ್ತಿರ್ಯಾ ತಮಶ್ವಿನಾ ॥

ಶ್ರೀ ಕೃಷ್ಣಾಯ ನಮಃ ಹರಿದ್ರಾಚೂರ್ಣಂ ಸಮರ್ಪಯಾಮಿ ॥ ಅರಿಶಿನದಿಂದ ಪೂಜೆ.

ಕುಂಕುಮಚೂರ್ಣ : ಕುಂಕುಮಂ ಕಾಂತಿದಂ ದಿವ್ಯಂ ಸರ್ವಕಾಮಫಲಪ್ರದಮ್ ।
(ಕುಂಕುಮ) ಸರ್ವದೇವೈಶ್ಚ ಸಂಪೂಜ್ಯ ಗೃಹಾಣ ವರದಾಯಕ ॥

ಓಂ ಅಂಬಿತಮೇ ನದೀತಮೇ ದೇವಿತಮೇ ಸರಸ್ವತಿ । ಅಪ್ರಶಸ್ತಾ ಇವ ಸ್ಮಸಿ ಪ್ರಶಸ್ತಿಮಂಬ ನಸ್ಕೃಧಿ ॥

ಶ್ರೀ ಕೃಷ್ಣಾಯ ನಮಃ ಕುಂಕುಮಚೂರ್ಣಂ ಸಮರ್ಪಯಾಮಿ ॥ ಕುಂಕುಮದಿಂದ ಪೂಜೆ ಮಾಡುವುದು.

ಶ್ರೀಕೃಷ್ಣಂ ಬಲಪ್ರದಂ ಚ ವಸುದೇವಂ ಚ ದೇವಕೀಮ್ ।
ರೋಹಿಣೀಂ ಚ ಸುಭದ್ರಾಂ ಚ ಯಶೋದಾನನ್ದಮೇವ ಚ ॥
ದುರ್ಗಾಂಶ್ಚೈವ ಮುನೀಂಶ್ಚೈವ ಪೂಜಯೇದ್ಗೋಪವರ್ಧನಮ್ ॥

## ಅಥ ಅಂಗಪೂಜಾ

| | |
|---|---|
| ಓಂ ತ್ರಿವಿಕ್ರಮಾಯ ನಮಃ | ಪಾದೌ ಪೂಜಯಾಮಿ |
| ಓಂ ಗಂಗಾ ಪ್ರಭವಾಯ ನಮಃ | ಗುಲ್ಫೌ ಪೂಜಯಾಮಿ |
| ಓಂ ವಿಷ್ವಕ್ಸೇನಾಯ ನಮಃ | ಜಂಘೇ ಪೂಜಯಾಮಿ |
| ಓಂ ಜನಾರ್ದನಾಯ ನಮಃ | ಜಾನುನೀ ಪೂಜಯಾಮಿ |
| ಓಂ ಪೀತಾಂಬರಧಾರಿಣೇ ನಮಃ | ಊರೂ ಪೂಜಯಾಮಿ |
| ಓಂ ಗರುಡವಾಹನಾಯ ನಮಃ | ಕಟಿಂ ಪೂಜಯಾಮಿ |
| ಓಂ ಲೋಕಪ್ರಭಾಯ ನಮಃ | ಗುಹ್ಯಂ ಪೂಜಯಾಮಿ |
| ಓಂ ಪದ್ಮನಾಭಾಯ ನಮಃ | ನಾಭಿಂ ಪೂಜಯಾಮಿ |
| ಓಂ ಕೌಸ್ತುಭಧಾರಿಣೇ ನಮಃ | ಹೃದಯಂ ಪೂಜಯಾಮಿ |
| ಓಂ ವನಮಾಲಿನೇ ನಮಃ | ಸ್ತನೌ ಪೂಜಯಾಮಿ |
| ಓಂ ಕಂಬುಗ್ರೀವಾಯ ನಮಃ | ಕಂಠಂ ಪೂಜಯಾಮಿ |
| ಓಂ ದಿವ್ಯಾಯುಧಧರಾಯ ನಮಃ | ಸ್ಕಂದೌ ಪೂಜಯಾಮಿ |
| ಓಂ ಶಾರ್ಙ್ಗಪಾಣಯೇ ನಮಃ | ಬಾಹೂನ್ ಪೂಜಯಾಮಿ |
| ಓಂ ಶಂಖಚಕ್ರಧರಾಯ ನಮಃ | ಹಸ್ತೌ ಪೂಜಯಾಮಿ |
| ಓಂ ಚಂದ್ರಮುಖಾಯ ನಮಃ | ಮುಖಂ ಪೂಜಯಾಮಿ |

ಓಂ ದೇವಗರ್ಭಾಯ ನಮಃ ಓಷ್ಠಂ ಪೂಜಯಾಮಿ
ಓಂ ಉಪೇಂದ್ರಾಯ ನಮಃ ಘ್ರಾಣಂ ಪೂಜಯಾಮಿ
ಓಂ ಪುಂಡರೀಕಾಕ್ಷಾಯ ನಮಃ ನೇತ್ರೇ ಪೂಜಯಾಮಿ
ಓಂ ವಿಷ್ಟರಶ್ರವಸೇ ನಮಃ ಕರ್ಣೌ ಪೂಜಯಾಮಿ
ಓಂ ಮಾಧವಾಯ ನಮಃ ಲಲಾಟಂ ಪೂಜಯಾಮಿ
ಓಂ ಸರ್ವಾತ್ಮನೇ ನಮಃ ಶಿರಃ ಪೂಜಯಾಮಿ
ಓಂ ದೇವಕೀಪುತ್ರಾಯ ನಮಃ ಸರ್ವಾಣ್ಯಂಗಾನಿ ಪೂಜಯಾಮಿ

ಅಂಗಪೂಜಾಂ ಸಮರ್ಪಯಾಮಿ ॥

## ಅಥ ಪತ್ರಪೂಜಾ

ಓಂ ತ್ರಿವಿಕ್ರಮಾಯ ನಮಃ ಮಾಚೀಪತ್ರಂ ಸಮರ್ಪಯಾಮಿ (ಮಾಚಿ)
ಓಂ ಗಂಗಾಪ್ರಭವಾಯ ನಮಃ ಭೃಂಗರಾಜಪತ್ರಂ ಸಮರ್ಪಯಾಮಿ (ಗರಗ)
ಓಂ ವಿಷ್ವಕ್ಸೇನಾಯ ನಮಃ ಬಿಲ್ವಪತ್ರಂ ಸಮರ್ಪಯಾಮಿ (ಬಿಲ್ವಪತ್ರೆ)
ಓಂ ಜನಾರ್ದನಾಯ ನಮಃ ದೂರ್ವಾಪತ್ರಂ ಸಮರ್ಪಯಾಮಿ (ಗರಿಕೆ)
ಓಂ ಪೀತಾಂಬರಧಾರಿಣೇ ನಮಃ ಬದರೀಪತ್ರಂ ಸಮರ್ಪಯಾಮಿ (ಬದರಿಪತ್ರ)
ಓಂ ಗರುಡವಾಹನಾಯ ನಮಃ ದತ್ತೂರಪತ್ರಂ ಸಮರ್ಪಯಾಮಿ (ದತ್ತೂರಿಎಲೆ)
ಓಂ ಲೋಕಪ್ರಭಾಯ ನಮಃ ತುಳಸೀಪತ್ರಂ ಸಮರ್ಪಯಾಮಿ (ತುಳಸೀ)
ಓಂ ಪದ್ಮನಾಭಾಯ ನಮಃ ಶಮೀಪತ್ರಂ ಸಮರ್ಪಯಾಮಿ (ಬನ್ನಿ ಎಲೆ)
ಓಂ ಕೌಸ್ತುಭಧಾರಿಣೇ ನಮಃ ಅಪಾಮಾರ್ಗಪತ್ರಂ ಸಮರ್ಪಯಾಮಿ (ಉತ್ತರಣೆ)
ಓಂ ವನಮಾಲಿನೇ ನಮಃ ಚೂತಪತ್ರಂ ಸಮರ್ಪಯಾಮಿ (ಮಾವು)
ಓಂ ಕಂಬುಗ್ರೀವಾಯ ನಮಃ ಕರವೀರಪತ್ರಂ ಸಮರ್ಪಯಾಮಿ (ಕಣಗಲೆ)
ಓಂ ದಿವ್ಯಾಯುಧಧರಾಯ ನಮಃ ಅರ್ಕಪತ್ರಂ ಸಮರ್ಪಯಾಮಿ (ಎಕ್ಕದಎಲೆ)
ಓಂ ಶಾರ್ಙ್ಗಪಾಣಯೇ ನಮಃ ಸಿಂಧುವಾರಪತ್ರಂ ಸಮರ್ಪಯಾಮಿ (ಲಕ್ಕಿಸೊಪ್ಪು)
ಓಂ ಶಂಖಚಕ್ರಧರಾಯ ನಮಃ ವಿಷ್ಣುಕ್ರಾಂತಪತ್ರಂ ಸಮರ್ಪಯಾಮಿ (ವಿಷ್ಣುಕ್ರಾಂತಿ)
ಓಂ ಚಂದ್ರಮುಖಾಯ ನಮಃ ದಾಡಿಮಪತ್ರಂ ಸಮರ್ಪಯಾಮಿ (ದಾಳಿಂಬೆ)
ಓಂ ದೇವಗರ್ಭಾಯ ನಮಃ ದವನಪತ್ರಂ ಸಮರ್ಪಯಾಮಿ (ದವನ)
ಓಂ ಉಪೇಂದ್ರಾಯ ನಮಃ ಮರುವಕಪತ್ರಂ ಸಮರ್ಪಯಾಮಿ (ಮರುಗ)
ಓಂ ಪುಂಡರೀಕಾಕ್ಷಾಯ ನಮಃ ಅಶ್ವತ್ಥಪತ್ರಂ ಸಮರ್ಪಯಾಮಿ (ಅರಳೀ)
ಓಂ ವಿಷ್ಟರಶ್ರವಸೇ ನಮಃ ಜಾಜೀಪತ್ರಂ ಸಮರ್ಪಯಾಮಿ (ಜಾಜೀ)
ಓಂ ಮಾಧವಾಯ ನಮಃ ಮಲ್ಲಿಕಾಪತ್ರಂ ಸಮರ್ಪಯಾಮಿ (ಮಲ್ಲಿಗೆ)
ಓಂ ಸರ್ವಾತ್ಮನೇ ನಮಃ ಅತಸೀಪತ್ರಂ ಸಮರ್ಪಯಾಮಿ (ಅಗಸೆ)
ಓಂ ದೇವಕೀ ಪುತ್ರಾಯ ನಮಃ ನಾನಾವಿಧ ಪತ್ರಾಣಿ ಪೂಜಯಾಮಿ

ಹರಿದ್ರಾಚೂರ್ಣ : ಭಕ್ತಾನಾಂ ಸುಖದಾತಾರ ಸರ್ವಮಂಗಳಕಾರಕ ।
(ಹರಿಶಿನ) ಹರಿದ್ರಾಂ ತೇ ಪ್ರಯಚ್ಛಾಮಿ ಗೃಹಾಣ ಮಧುಸೂಧನ ॥

ಓಂ ಹರಿದ್ರವೇವ ಪತತೋವನೇ । ದುಪ ಸೋಮಂ ಸುತಂ । ಮಹಿಷೇವಾವ ಗಚ್ಛತೇ । ಸಜೋಷತಾ ಉಷಸಾ ಸೂರ್ಯೇಣ ಚಕ್ರವರ್ತಿರ್ಯಾ ತಮಶ್ವಿನಾ ॥

ಶ್ರೀ ಕೃಷ್ಣಾಯ ನಮಃ ಹರಿದ್ರಾಚೂರ್ಣಂ ಸಮರ್ಪಯಾಮಿ ॥ ಅರಿಶಿನದಿಂದ ಪೂಜೆ.

ಕುಂಕುಮಚೂರ್ಣ : ಕುಂಕುಮಂ ಕಾಂತಿದಂ ದಿವ್ಯಂ ಸರ್ವಕಾಮಫಲಪ್ರದಮ್ ।
(ಕುಂಕುಮ) ಸರ್ವದೇವೈಶ್ಚ ಸಂಪೂಜ್ಯ ಗೃಹಾಣ ವರದಾಯಕ ॥

ಓಂ ಅಂಬಿತಮೇ ನದೀತಮೇ ದೇವಿತಮೇ ಸರಸ್ವತಿ । ಅಪ್ರಶಸ್ತಾ ಇವ ಸ್ಮಸಿ ಪ್ರಶಸ್ತಿಮಂಬ ನಸ್ಕೃಧಿ ॥

ಶ್ರೀ ಕೃಷ್ಣಾಯ ನಮಃ ಕುಂಕುಮಚೂರ್ಣಂ ಸಮರ್ಪಯಾಮಿ ॥ ಕುಂಕುಮದಿಂದ ಪೂಜೆ ಮಾಡುವುದು.

ಶ್ರೀಕೃಷ್ಣಂ ಬಲಪ್ರದಂ ಚ ವಸುದೇವಂ ಚ ದೇವಕೀಮ್ ।
ರೋಹಿಣೀಂ ಚ ಸುಭದ್ರಾಂ ಚ ಯಶೋದಾನನ್ದಮೇವ ಚ ॥
ದುರ್ಗಾಂಶ್ಚೈವ ಮುನೀಂಶ್ಚೈವ ಪೂಜಯೇದ್ಗೋಪವರ್ಧನಮ್ ॥

## ಅಥ ಅಂಗಪೂಜಾ

ಓಂ ತ್ರಿವಿಕ್ರಮಾಯ ನಮಃ ಪಾದೌ ಪೂಜಯಾಮಿ
ಓಂ ಗಂಗಾ ಪ್ರಭವಾಯ ನಮಃ ಗುಲ್ಫೌ ಪೂಜಯಾಮಿ
ಓಂ ವಿಷ್ವಕ್ಸೇನಾಯ ನಮಃ ಜಂಘೇ ಪೂಜಯಾಮಿ
ಓಂ ಜನಾರ್ದನಾಯ ನಮಃ ಜಾನುನೀ ಪೂಜಯಾಮಿ
ಓಂ ಪೀತಾಂಬರಧಾರಿಣೇ ನಮಃ ಊರೂ ಪೂಜಯಾಮಿ
ಓಂ ಗರುಡವಾಹನಾಯ ನಮಃ ಕಟಿಂ ಪೂಜಯಾಮಿ
ಓಂ ಲೋಕಪ್ರಭಾಯ ನಮಃ ಗುಹ್ಯಂ ಪೂಜಯಾಮಿ
ಓಂ ಪದ್ಮನಾಭಾಯ ನಮಃ ನಾಭಿಂ ಪೂಜಯಾಮಿ
ಓಂ ಕೌಸ್ತುಭಧಾರಿಣೇ ನಮಃ ಹೃದಯಂ ಪೂಜಯಾಮಿ
ಓಂ ವನಮಾಲಿನೇ ನಮಃ ಸ್ತನೌ ಪೂಜಯಾಮಿ
ಓಂ ಕಂಬುಗ್ರೀವಾಯ ನಮಃ ಕಂಠಂ ಪೂಜಯಾಮಿ
ಓಂ ದಿವ್ಯಾಯುಧಧರಾಯ ನಮಃ ಸ್ಕಂದೌ ಪೂಜಯಾಮಿ
ಓಂ ಶಾರ್ಙ್ಗಪಾಣಯೇ ನಮಃ ಬಾಹೂನ್ ಪೂಜಯಾಮಿ
ಓಂ ಶಂಖಚಕ್ರಧರಾಯ ನಮಃ ಹಸ್ತೌ ಪೂಜಯಾಮಿ
ಓಂ ಚಂದ್ರಮುಖಾಯ ನಮಃ ಮುಖಂ ಪೂಜಯಾಮಿ

| | |
|---|---|
| ಓಂ ದೇವಗರ್ಭಾಯ ನಮಃ | ಓಷ್ಠಂ ಪೂಜಯಾಮಿ |
| ಓಂ ಉಪೇಂದ್ರಾಯ ನಮಃ | ಘ್ರಾಣಂ ಪೂಜಯಾಮಿ |
| ಓಂ ಪುಂಡರೀಕಾಕ್ಷಾಯ ನಮಃ | ನೇತ್ರೇ ಪೂಜಯಾಮಿ |
| ಓಂ ವಿಷ್ಟರಶ್ರವಸೇ ನಮಃ | ಕರ್ಣೌ ಪೂಜಯಾಮಿ |
| ಓಂ ಮಾಧವಾಯ ನಮಃ | ಲಲಾಟಂ ಪೂಜಯಾಮಿ |
| ಓಂ ಸರ್ವಾತ್ಮನೇ ನಮಃ | ಶಿರಃ ಪೂಜಯಾಮಿ |
| ಓಂ ದೇವಕೀಪುತ್ರಾಯ ನಮಃ | ಸರ್ವಾಣ್ಯಂಗಾನಿ ಪೂಜಯಾಮಿ |

ಅಂಗಪೂಜಾಂ ಸಮರ್ಪಯಾಮಿ ॥

## ಅಥ ಪತ್ರಪೂಜಾ

| | | |
|---|---|---|
| ಓಂ ತ್ರಿವಿಕ್ರಮಾಯ ನಮಃ | ಮಾಚೀಪತ್ರಂ ಸಮರ್ಪಯಾಮಿ | (ಮಾಚಿ) |
| ಓಂ ಗಂಗಾಪ್ರಭವಾಯ ನಮಃ | ಭೃಂಗರಾಜಪತ್ರಂ ಸಮರ್ಪಯಾಮಿ | (ಗರಗ) |
| ಓಂ ವಿಷ್ವಕ್ಸೇನಾಯ ನಮಃ | ಬಿಲ್ವಪತ್ರಂ ಸಮರ್ಪಯಾಮಿ | (ಬಿಲ್ವಪತ್ರೆ) |
| ಓಂ ಜನಾರ್ದನಾಯ ನಮಃ | ದೂರ್ವಾಪತ್ರಂ ಸಮರ್ಪಯಾಮಿ | (ಗರಿಕೆ) |
| ಓಂ ಪೀತಾಂಬರಧಾರಿಣೇ ನಮಃ | ಬದರೀಪತ್ರಂ ಸಮರ್ಪಯಾಮಿ | (ಬದರಿಪತ್ರ) |
| ಓಂ ಗರುಡವಾಹನಾಯ ನಮಃ | ದತ್ತೂರಪತ್ರಂ ಸಮರ್ಪಯಾಮಿ | (ದತ್ತೂರಿಎಲೆ) |
| ಓಂ ಲೋಕಪ್ರಭಾಯ ನಮಃ | ತುಳಸೀಪತ್ರಂ ಸಮರ್ಪಯಾಮಿ | (ತುಳಸೀ) |
| ಓಂ ಪದ್ಮನಾಭಾಯ ನಮಃ | ಶಮೀಪತ್ರಂ ಸಮರ್ಪಯಾಮಿ | (ಬನ್ನಿ ಎಲೆ) |
| ಓಂ ಕೌಸ್ತುಭಧಾರಿಣೇ ನಮಃ | ಅಪಾಮಾರ್ಗಪತ್ರಂ ಸಮರ್ಪಯಾಮಿ | (ಉತ್ತರಣೆ) |
| ಓಂ ವನಮಾಲಿನೇ ನಮಃ | ಚೂತಪತ್ರಂ ಸಮರ್ಪಯಾಮಿ | (ಮಾವು) |
| ಓಂ ಕಂಬುಗ್ರೀವಾಯ ನಮಃ | ಕರವೀರಪತ್ರಂ ಸಮರ್ಪಯಾಮಿ | (ಕಣಗಲೆ) |
| ಓಂ ದಿವ್ಯಾಯುಧಧರಾಯ ನಮಃ | ಅರ್ಕಪತ್ರಂ ಸಮರ್ಪಯಾಮಿ | (ಎಕ್ಕದಎಲೆ) |
| ಓಂ ಶಾರ್ಙ್ಗಪಾಣಯೇ ನಮಃ | ಸಿಂಧುವಾರಪತ್ರಂ ಸಮರ್ಪಯಾಮಿ | (ಲಕ್ಕಿಸೊಪ್ಪು) |
| ಓಂ ಶಂಖಚಕ್ರಧರಾಯ ನಮಃ | ವಿಷ್ಣುಕ್ರಾಂತಪತ್ರಂ ಸಮರ್ಪಯಾಮಿ | (ವಿಷ್ಣುಕ್ರಾಂತಿ) |
| ಓಂ ಚಂದ್ರಮುಖಾಯ ನಮಃ | ದಾಡಿಮಪತ್ರಂ ಸಮರ್ಪಯಾಮಿ | (ದಾಳಿಂಬೆ) |
| ಓಂ ದೇವಗರ್ಭಾಯ ನಮಃ | ದವನಪತ್ರಂ ಸಮರ್ಪಯಾಮಿ | (ದವನ) |
| ಓಂ ಉಪೇಂದ್ರಾಯ ನಮಃ | ಮರುವಕಪತ್ರಂ ಸಮರ್ಪಯಾಮಿ | (ಮರುಗ) |
| ಓಂ ಪುಂಡರೀಕಾಕ್ಷಾಯ ನಮಃ | ಅಶ್ವತ್ಥಪತ್ರಂ ಸಮರ್ಪಯಾಮಿ | (ಅರಳೀ) |
| ಓಂ ವಿಷ್ಟರಶ್ರವಸೇ ನಮಃ | ಜಾಜೀಪತ್ರಂ ಸಮರ್ಪಯಾಮಿ | (ಜಾಜೀ) |
| ಓಂ ಮಾಧವಾಯ ನಮಃ | ಮಲ್ಲಿಕಾಪತ್ರಂ ಸಮರ್ಪಯಾಮಿ | (ಮಲ್ಲಿಗೆ) |
| ಓಂ ಸರ್ವಾತ್ಮನೇ ನಮಃ | ಅತಸೀಪತ್ರಂ ಸಮರ್ಪಯಾಮಿ | (ಅಗಸೆ) |
| ಓಂ ದೇವಕೀ ಪುತ್ರಾಯ ನಮಃ | ನಾನಾವಿಧ ಪತ್ರಾಣಿ ಪೂಜಯಾಮಿ | |





## ಅಥ ಪುಷ್ಪಪೂಜಾ

| | | |
|---|---|---|
| ಓಂ ತ್ರಿವಿಕ್ರಮಾಯ ನಮಃ | ಜಾಜೀಪುಷ್ಪಂ ಸಮರ್ಪಯಾಮಿ | (ಜಾಜೀ ಹೂ) |
| ಓಂ ಗಂಗಾ ಪ್ರಭವಾಯ ನಮಃ | ಶತಪತ್ರಪುಷ್ಪಂ ಸಮರ್ಪಯಾಮಿ | (ಕಮಲ) |
| ಓಂ ವಿಷ್ವಕ್ಸೇನಾಯ ನಮಃ | ಮಾಲತೀಪುಷ್ಪಂ ಸಮರ್ಪಯಾಮಿ | (ಮಾಲತೀ) |
| ಓಂ ಜನಾರ್ದನಾಯ ನಮಃ | ಚಂಪಕಪುಷ್ಪಂ ಸಮರ್ಪಯಾಮಿ | (ಸಂಪಿಗೆ) |
| ಓಂ ಪೀತಾಂಬರಧಾರಿಣೇನಮಃ | ಕಲ್ಹಾರಪುಷ್ಪಂ ಸಮರ್ಪಯಾಮಿ | (ಬೆಟ್ಟತಾವರೆ) |
| ಓಂ ಗರುಡವಾಹನಾಯ ನಮಃ | ದತ್ತೂರಪುಷ್ಪಂ ಸಮರ್ಪಯಾಮಿ | (ದತ್ತೂರಿ ಹೂ) |
| ಓಂ ಲೋಕಪ್ರಭಾಯ ನಮಃ | ಉತ್ ಪಲಪುಷ್ಪಂ ಸಮರ್ಪಯಾಮಿ | (ನೈದಿಲೆ ಹೂ) |
| ಓಂ ವಾಸುದೇವಾಯ ನಮಃ | ಪಾರಿಜಾತಪುಷ್ಪಂ ಸಮರ್ಪಯಾಮಿ | (ಪಾರಿಜಾತ) |
| ಓಂ ಪದ್ಮನಾಭಾಯ ನಮಃ | ಮಾಧವೀಪುಷ್ಪಂ ಸಮರ್ಪಯಾಮಿ | (ದುಂಡುಮಲ್ಲಿಗೆ) |
| ಓಂ ಕೌಸ್ತುಭಧಾರಿಣೇನಮಃ | ಸೂಚೀಮಲ್ಲಿಕಾ ಸಮರ್ಪಯಾಮಿ | (ಸೂಜೀಮಲ್ಲಿಗೆ) |
| ಓಂ ವನಮಾಲಿನೇ ನಮಃ | ಕರ್ಣಿಕಾಪುಷ್ಪಂ ಸಮರ್ಪಯಾಮಿ | (ಬಸವನ ಪಾದ) |
| ಓಂ ಕಂಬುಗ್ರೀವಾಯ ನಮಃ | ಕುಮುದಪುಷ್ಪಂ ಸಮರ್ಪಯಾಮಿ | (ಕನ್ನೈದಿಲೆ) |
| ಓಂ ದಿವ್ಯಾಯುಧಧರಾಯ ನಮಃ | ವಕುಳಪುಷ್ಪಂ ಸಮರ್ಪಯಾಮಿ | (ವಕುಳ) |
| ಓಂ ಶಾರ್ಙ್ಗಪಾಣಯೇ ನಮಃ | ಪುನ್ನಾಗಪುಷ್ಪಂ ಸಮರ್ಪಯಾಮಿ | (ನಾಗಸಂಪಿಗೆ) |
| ಓಂ ದೇವಗರ್ಭಾಯ ನಮಃ | ಪಾಟಲಪುಷ್ಪಂ ಸಮರ್ಪಯಾಮಿ | (ಪಾದರೀ) |
| ಓಂ ಉಪೇಂದ್ರಾಯ ನಮಃ | ಕುರಂಟಕಪುಷ್ಪಂ ಸಮರ್ಪಯಾಮಿ | (ಪಟಿಕದ ಹೂ) |
| ಓಂ ಪುಂಡರೀಕಾಕ್ಷಾಯ ನಮಃ | ಯೂಥಿಕಾಪುಷ್ಪಂ ಸಮರ್ಪಯಾಮಿ | (ಸೇವಂತಿಗೆ) |
| ಓಂ ವಿಷ್ವರಶ್ರವಸೇ ನಮಃ | ಸ್ಥಲಪದ್ಮಪುಷ್ಪಂ ಸಮರ್ಪಯಾಮಿ | (ಗುಲಾಬಿ) |
| ಓಂ ಮಾಧವಾಯ ನಮಃ | ನಾನಾವಿಧಪರಿಮಳ ಪುಷ್ಪಾಣಿ ಸಮರ್ಪಯಾಮಿ॥ | |

## ಅಥ ಅಷ್ಟೋತ್ತರ ಶತನಾಮಪೂಜಾ

ಓಂ ಶ್ರೀ ಕೃಷ್ಣಾಯ ನಮಃ
ಓಂ ಕಮಲಾನಾಥಾಯ ನಮಃ
ಓಂ ವಾಸುದೇವಾಯ ನಮಃ
ಓಂ ಸನಾತನಾಯ ನಮಃ
ಓಂ ವಾಸುದೇವಾತ್ಮಜಾಯ ನಮಃ
ಓಂ ಪುಣ್ಯಾಯ ನಮಃ
ಓಂ ಪೂತನಾಜೀವಿತ ಹರಾಯ ನಮಃ
ಓಂ ಶಕಟಾಸುರಭಂಜನಾಯ ನಮಃ
ಓಂ ನಂದವ್ರಜಜನಾನಂದಿನೇ ನಮಃ
ಓಂ ಸಚ್ಚಿದಾನಂದವಿಗ್ರಹಾಯ ನಮಃ
ಓಂ ನವನೀತವಿಲಿಪ್ತಾಂಗಾಯ ನಮಃ
ಓಂ ನವನೀತನಟಾಯ ನಮಃ
ಓಂ ಲೀಲಾಮಾನುಷವಿಗ್ರಹಾಯ ನಮಃ
ಓಂ ಶ್ರೀವತ್ಸಕೌಸ್ತುಭಧರಾಯ ನಮಃ
ಓಂ ಯಶೋದಾವತ್ಸಲಾಯ ನಮಃ
ಓಂ ಚತುರ್ಭುಜಾತ್ತಚಕ್ರಾಸಿಗದಾ–
ಶಂಖಾದ್ಯಾಯುಧಾಯ ನಮಃ
ಓಂ ದೇವಕೀನಂದನಾಯ ನಮಃ
ಓಂ ಶ್ರೀಶಾಯ ನಮಃ
ಓಂ ನಂದಗೋಪಪ್ರಿಯಾತ್ಮಜಾಯನಮಃ
ಓಂ ಯಮುನಾವೇಗಸಂಹಾರಿಣೇ ನಮಃ
ಓಂ ಬಲಭದ್ರಪ್ರಿಯಾಯ ನಮಃ
ಓಂ ಅನಂತಾಯ ನಮಃ
ಓಂ ಧೇನುಕಾಸುರಭಂಜನಾಯ ನಮಃ

ಓಂ ತೃಣೀಕೃತತೃಣಾವರ್ತಾಯ ನಮಃ
ಓಂ ಯಮಳಾರ್ಜುನ ಭಂಜನಾಯ ನಮಃ
ಓಂ ಉತ್ತಾಲತಾಲಭೇತ್ರೇ ನಮಃ
ಓಂ ತಮಾಲಶ್ಯಾಮಲಾಕೃತಯೇ ನಮಃ
ಓಂ ಗೋಪಗೋಪೀಶ್ವರಾಯ ನಮಃ
ಓಂ ಇಳಾಪತಯೇ ನಮಃ
ಓಂ ಪರಂಜ್ಯೋತಿಷೇ ನಮಃ
ಓಂ ಯಾದವೇಂದ್ರಾಯ ನಮಃ
ಓಂ ಯದೂದ್ವಹಾಯ ನಮಃ
ಓಂ ವನಮಾಲಿನೇ ನಮಃ
ಓಂ ಪೀತವಾಸಸೇ ನಮಃ
ಓಂ ಪಾರಿಜಾತಾಪಹಾರಕಾಯ ನಮಃ
ಓಂ ಗೋವರ್ಧನಾಚಲೋದ್ಧರ್ತ್ರೇ ನಮಃ
ಓಂ ನಿರಂಜನಾಯ ನಮಃ
ಓಂ ಸರ್ವಪಾಲಕಾಯ ನಮಃ
ಓಂ ಅಜಾಯ ನಮಃ
ಓಂ ಕಾಮಜನಕಾಯ ನಮಃ
ಓಂ ಕಂಜಲೋಚನಾಯ ನಮಃ
ಓಂ ಮಧುಘ್ನೇ ನಮಃ
ಓಂ ಮಧುರಾನಾಥಾಯ ನಮಃ
ಓಂ ಅನಘಾಯ ನಮಃ
ಓಂ ನವನೀತವಾಹಾರಾಯ ನಮಃ
ಓಂ ಮುಚುಕುಂದಪ್ರಸಾದಕಾಯ ನಮಃ
ಓಂ ಷೋಡಶ ಸ್ತ್ರೀ ಸಹಸ್ರೇಶಾಯ ನಮಃ
ಓಂ ತ್ರಿಭಂಗಿನೇ ನಮಃ
ಓಂ ಮಧುರಾಕೃತಯೇ ನಮಃ
ಓಂ ಶುಕವಾಗಮೃತಾಬ್ಧೀಂದವೇ ನಮಃ
ಓಂ ಗೋವಿಂದಾಯ ನಮಃ
ಓಂ ಯೋಗಿನಾಂಪತಯೇ ನಮಃ
ಓಂ ವತ್ಸವಾಟಚರಾಯ ನಮಃ

ಓಂ ಮುಷ್ಟಿಕಾಸುರ ಚಾಣೂರ ಮಲ್ಲಯುದ್ಧವಿಶಾರದಾಯ ನಮಃ
ಓಂ ಸಂಸಾರವೈರಿಣೇ ನಮಃ
ಓಂ ಕಂಸಾರಯೇ ನಮಃ
ಓಂ ಮುರಾರಯೇ ನಮಃ
ಓಂ ನರಕಾಂತಕಾಯ ನಮಃ
ಓಂ ಅನಾದಿ ಬ್ರಹ್ಮಚಾರಿಣೇ ನಮಃ
ಓಂ ಕೃಷ್ಣಾವ್ಯಸನಕರ್ಷಿಕಾಯ ನಮಃ
ಓಂ ಶಿಶುಪಾಲ ಶಿರಚ್ಛೇತ್ರೇ ನಮಃ
ಓಂ ದುರ್ಯೋಧನ ಕುಲಾಂತಕಾಯ ನಮಃ
ಓಂ ವಿದುರಾಕ್ರೂರವರದಾಯ ನಮಃ
ಓಂ ವಿಶ್ವರೂಪಪ್ರದರ್ಶನಾಯ ನಮಃ
ಓಂ ಸತ್ಯಸಂಕಲ್ಪಾಯ ನಮಃ
ಓಂ ಸತ್ಯವಾಚೇ ನಮಃ
ಓಂ ಸತ್ಯಭಾಮಾರತಾಯ ನಮಃ
ಓಂ ಜಯಿನೇ ನಮಃ
ಓಂ ಸುಭದ್ರಾಪೂರ್ವಜಾಯ ನಮಃ
ಓಂ ಜಿಷ್ಣವೇ ನಮಃ
ಓಂ ಭೀಷ್ಮಮುಕ್ತಿಪ್ರದಾಯಕಾಯ ನಮಃ
ಓಂ ಜಗದ್ಗುರವೇ ನಮಃ
ಓಂ ಜಗನ್ನಾಥಾಯ ನಮಃ
ಓಂ ವೇಣುನಾದ ವಿಶಾರದಾಯ ನಮಃ
ಓಂ ದ್ವಾರಕಾನಾಯಕಾಯ ನಮಃ
ಓಂ ಬಲಿನೇ ನಮಃ
ಓಂ ಬೃಂದಾವನಾಂತ ಸಂಚಾರಿಣೇ ನಮಃ
ಓಂ ತುಲಸೀಧಾಮಭೂಷಣಾಯ ನಮಃ
ಓಂ ಸ್ಯಮಂತಕಮಣೇರ್ಹರ್ತ್ರೇ ನಮಃ
ಓಂ ನರನಾರಾಯಣಾತ್ಮಕಾಯ ನಮಃ
ಓಂ ಕುಬ್ಜಾಕೃಷ್ಣಾಂಬರಧರಾಯ ನಮಃ
ಓಂ ಮಾಯಿನೇ ನಮಃ
ಓಂ ಪರಮಪುರುಷಾಯ ನಮಃ
ಓಂ ಯಜ್ಞಭೋಕ್ತ್ರೇ ನಮಃ

ಓಂ ಗಾನವೇಂದ್ರವಿನಾಕಾಯ ನಮಃ
ಓಂ ನಾರಾಯಣಾಯ ನಮಃ
ಓಂ ಪರಬ್ರಹ್ಮಣೇ ನಮಃ
ಓಂ ಪನ್ನಗಾಶನ ವಾಹನಾಯ ನಮಃ
ಓಂ ಜಲಕ್ರೀಡಾಸಮಾಸಕ್ತ–
ಗೋಪೀವಸ್ತ್ರಾಪಹಾರಕಾಯ ನಮಃ
ಓಂ ಪುಣ್ಯಶ್ಲೋಕಾಯ ನಮಃ
ಓಂ ತೀರ್ಥಪಾದಾಯ ನಮಃ
ಓಂ ವೃಷಭಾಸುರ ವಿಧ್ವಂಸಿನೇ ನಮಃ
ಓಂ ಬಾಣಾಸುರ ಕುಲಾಂತಕಾಯ ನಮಃ
ಓಂ ಯುಧಿಷ್ಠಿರ ಪ್ರತಿಷ್ಠಾತ್ರೇ ನಮಃ
ಓಂ ಬರ್ಹಿಬರ್ಹಾವಸಂತಕಾಯ ನಮಃ
ಓಂ ಪಾರ್ಥಸಾರಥಯೇ ನಮಃ (ನಮಃ
ಓಂ ಅವ್ಯಕ್ತಗೀತಾಮೃತಮಹೋದಧಯೇ
ಓಂ ಕಾಲಿಯ ಫಣಿಮಾಣಿಕ್ಯರಂಜಿತ
ಶ್ರೀಪಾದಾಂಬುಜಾಯ ನಮಃ
ಓಂ ದಾಮೋದರಾಯ ನಮಃ
ಓಂ ವೇದವೇದ್ಯಾಯ ನಮಃ
ಓಂ ದಯಾನಿಧಯೇ ನಮಃ
ಓಂ ಸರ್ವದೇವಾತ್ಮಕಾಯ ನಮಃ
ಓಂ ಸರ್ವಗ್ರಹರೂಪಿಣೇ ನಮಃ
ಓಂ ಪರಾತ್ಪರಾಯ ನಮಃ
ಓಂ ಗೋಪಾಲಕೃಷ್ಣಾಯ ನಮಃ
ಓಂ ಪುಂಡರೀಕಾಕ್ಷಾಯ ನಮಃ
ಓಂ ವನಮಾಲಿನೇ ನಮಃ
ಓಂ ಗೋಪಾಲಕೃಷ್ಣ ಸ್ವಾಮಿನೇ ನಮಃ

**॥ ಇತಿ ಅಷ್ಟೋತ್ತರ ಶತನಾಮಪೂಜಾಂ ಸಂಪೂರ್ಣಮ್ ॥**

**ಧೂಪ : ದಶಾಂಗಂ ಗುಗ್ಗುಳಂ ದಿವ್ಯಂ ಸುಗಂಧಂ ಚ ಮನೋಹರಮ್ ।**
**ಧೂಪಂ ಗೃಹಾಣ ದೇವೇಶ ಸರ್ವಲೋಕೈಕ ಪೂಜಿತ ॥**

ಓಂ ಯತ್ಪುರುಷಂ ವ್ಯದಧುಃ ಕತಿಧಾ ವ್ಯಕಲ್ಪಯನ್ । ಮುಖಂ ಕಿಮಸ್ಯ ಕೌ ಬಾಹೂ ಕಾ ಊರೂ ಪಾದಾ ಉಚ್ಯತೇ ॥

ಶ್ರೀಕೃಷ್ಣಾಯ ನಮಃ ಧೂಪಮಾಘ್ರಾಪಯಾಮಿ ॥ ಗಂಧದಕಡ್ಡಿ ಹೊತ್ತಿಸಿ ಬೆಳಗುವುದು.

**ದೀಪ : ತ್ರಿಲೋಕೇಶ ವಾಸುದೇವ ಸರ್ವಜ್ಞಾನ ಪ್ರದಾಯಕ ।**
**ದೀಪಂ ದಾಸ್ಯಾಮಿ ದೇವೇಶ ರಕ್ಷ ಮಾಂ ಭಕ್ತವತ್ಸಲ ॥**

ಓಂ ಬ್ರಾಹ್ಮಣೋಸ್ಯ ಮುಖಮಾಸೀದ್ಬಾಹೂರಾಜನ್ಯಃ ಕೃತಃ । ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂಶೂದ್ರೋ ಅಜಾಯತ ॥

ಶ್ರೀ ಕೃಷ್ಣಾಯ ನಮಃ ಏಕಾರ್ತಿದೀಪಂ ದರ್ಶಯಾಮಿ ॥ ಮೂರು ತುಪ್ಪದ ದೀಪ ಹಚ್ಚಿ ಬೆಳಗುವುದು.

ಧೂಪದೀಪಾನಂತರೇ ಆಚಮನಂ । ಆಚಮನಾನಂತರೇ ಪುಷ್ಪಾಣಿ ಸಮರ್ಪಯಾಮಿ ।

**ನೈವೇದ್ಯ : ಸರ್ವಭಕ್ಷ್ಯೈಶ್ಚ ಭೋಜ್ಯೈಶ್ಚ ರಸ್ಯೈಃ ಷಡ್ಭಿಃ ಸಮನ್ವಿತಮ್ ।**
**ನೈವೇದ್ಯಂ ದೇವದೇವೇಶ ಗೃಹಾಣ ಪುರುಷೋತ್ತಮ ॥**

ಓಂ ವಿಶ್ವಾಮಿತ್ರ ಋಷಿಃ ಸವಿತಾ ದೇವತಾ ಗಾಯತ್ರೀ ಛಂದಃ ।

**ಓಂ ಭೂರ್ಭುವಸ್ಸುವಃ । ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ ॥**

ನೈವೇದ್ಯಗಳ ಮೇಲೆ ನೀರು ಚಿಮುಕಿಸುವುದು.

ಸತ್ಯಂತ್ವರ್ತೇನ ಪರಿಷಿಂಚಾಮಿ ॥ ಪ್ರದಕ್ಷಿಣಾಕಾರವಾಗಿ ಪರಿಷೇಚನೆ ಮಾಡುವುದು.

ದೇವರ ಕಡೆಗೆ ಕೈ ತೋರಿಸುತ್ತಾ ಹೀಗೆ ಹೇಳುವುದು.

ಓಂ ಪ್ರಾಣಾಯ ಸ್ವಾಹಾ । ಓಂ ಅಪಾನಾಯ ಸ್ವಾಹಾ । ಓಂ ವ್ಯಾನಾಯ ಸ್ವಾಹಾ । ಓಂ ಉದಾನಾಯ ಸ್ವಾಹಾ । ಓಂ ಸಮಾನಾಯ ಸ್ವಾಹಾ । ಓಂ ಬ್ರಹ್ಮಣೇ ಸ್ವಾಹಾ ॥

**ಓಂ ಚಂದ್ರಮಾ ಮನಸೋಜಾತಶ್ಚಕ್ಷೋಃ ಸೂರ್ಯೋ ಅಜಾಯತ । ಮುಖಾದಿಂದ್ರಶ್ಚಾಗ್ನಿಶ್ಚಪ್ರಾಣಾದ್ವಾಯುರಜಾಯತ ।**

**ಶ್ರೀಕೃಷ್ಣಾಯ ನಮಃ ನಾನಾ ವಿಧ ನೈವೇದ್ಯಂ ಸಮರ್ಪಯಾಮಿ ।**

ಮಹಾನೈವೇದ್ಯಂ (ಅನ್ನ) ಪರಮಾನ್ನಂ (ಪಾಯಸ) ಚಿತ್ರಾನ್ನಂ (ಚಿತ್ರಾನ್ನ) ಸೂಪಂ (ತೊವ್ವೆ) ಮೋದಕಾನ್ (ಕಡುಬು) ಷಷ್ಕುಲಿ (ಚಕ್ಕುಲಿ) ತಿಲಚಂಪಕಂ (ಬೆರೆಸಿದ ಎಳ್ಳು) ಇಕ್ಷು (ಕಬ್ಬು) ಭಕ್ಷ್ಯ (ಕರಿದವಸ್ತುಗಳು) ಲೇಹ್ಯ ಚೋಷ್ಯ (ಗೊಜ್ಜು ಚಟ್ನಿ ಮುಂತಾದವು) ದಾಡಿಮಂ (ದಾಳಿಂಬೆ) ಮಿಷ್ಟನಿಂಬೂಕಂ (ಮೋಸಂಬಿ) ಸೀತಾಫಲಂ (ಸೀತಾಫಲ) ಮಧುರ ಫಲಾನಿ (ಸೇಬು, ಮುಂತಾದವು) ದ್ರಾಕ್ಷಾಫಲಾನಿ (ದ್ರಾಕ್ಷಿ) ಖರ್ಜೂರಫಲ (ಉತ್ತುತ್ತೆ) ಕದಲೀಫಲಾನಿ (ಬಾಳೆಹಣ್ಣು) ನಾರೀಕೇಳಫಲ (ತೆಂಗಿನಕಾಯಿ) ಚ ಸಮರ್ಪಯಾಮಿ ।

**ಪಾನೀಯಂ ಪಾವನಂ ಶ್ರೇಷ್ಠಂ ಕಜ್ಜಲಾದಿ ಸುವಾಸಿತಮ್ ।**
**ಕರ್ಪೂರ ಮಿಶ್ರಿತಂ ತೋಯಂ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥**

ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ । ಒಂದು ಉದ್ಧರಣೆ ನೀರು ಬಿಡುವುದು.

ಉತ್ತರಾಪೋಶನಂ, ಹಸ್ತಪ್ರಕ್ಷಾಳನಂ ಪಾದಪ್ರಕ್ಷಾಳನಂ ಸಮರ್ಪಯಾಮಿ ।

**ತಾಂಬೂಲ : ಪೂಗೀಫಲ ಸಮಾಯುಕ್ತಂ ನಾಗವಲ್ಲೀದಳೈರ್ಯುತಮ್ ।**
**ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥**

ನಾಭ್ಯಾಅಸೀದಂತರಿಕ್ಷಂ ಶೀರ್ಷ್ಣೋದ್ಯೌಃ ಸಮವರ್ತತ । ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್ತಥಾ ಲೋಕಾ ಅಕಲ್ಪಯನ್ ॥

ಶ್ರೀಕೃಷ್ಣಾಯ ನಮಃ ತಾಂಬೂಲಂ ಸಮರ್ಪಯಾಮಿ ॥ ವೀಳೇದೆಲೆಗಳ ತುದಿ ಮುರಿಯುವುದು ಹಾಗೂ ಸ್ವಲ್ಪ ನೀರು ಹಾಕುವುದು.

ನಂತರ ಪ್ರಾತಃಕಾಲದ ಸೂರ್ಯಬಿಂಬದಂತೆ ರಾರಾಜಿಸುತ್ತಿರುವ ಲೋಕೈಕ ಮಾತೆಯೂ, ಗಿರಿರಾಜಪುತ್ರಿಯೂ, ಸಾಕ್ಷಾತ್ ಶ್ರೀಸಾಂಬಮೂರ್ತಿಯ ಸತಿಯೂ ಆಗಿರುವ ಗಿರಿಜೆಯನ್ನು ಭಕ್ತಿಯಿಂದ ಅರ್ಚಿಸಬೇಕು. ನಂತರ ನಂದಿವಾಹನನಾಗಿಯೂ, ಭೃಂಗಿರಿಟಿ ಮೊದಲಾದ ಗಣಗಳಿಂದ ಪರಿವೃತನಾಗಿಯೂ ಇರುವ ಸಾಂಬಮೂರ್ತಿಯನ್ನು ಆವಾಹನೆ ಮಾಡಬೇಕು. ಅಲ್ಲಿ ರತ್ನಪಾತ್ರೆಯಲ್ಲಿರುವ ಪಂಚಾಮೃತವನ್ನು ಸ್ವಾಮಿಗೆ ಅಭಿಷೇಕ ಮಾಡಬೇಕು. ಆಮೇಲೆ ಹರಿದ್ರಾ ಕುಂಕುಮ ಗಳಿಂದಲೂ, ನಾನಾವಿಧಗಳಾದ ಪುಷ್ಪಗಳಿಂದಲೂ ಸ್ವಾಮಿಯನ್ನು ಯಥಾವಿಧಿಯಾಗಿ ಪೂಜೆ ಮಾಡಬೇಕು. ಬಿಲ್ವಾರ್ಕಪತ್ರ (ಬಿಲ್ವ, ಎಕ್ಕೆ)ಗಳಿಂದಲೂ, ಕರ್ಣಿಕಾ ಮಲ್ಲಿಕಾದಿಗಳಿಂದಲೂ, ಪುನ್ನಾಗ ವಕುಳಾದಿ ಪುಷ್ಪಗಳಿಂದಲೂ ಪರಬ್ರಹ್ಮಸ್ವರೂಪನಾದ ಪರಶಿವನನ್ನು ಸಹಸ್ರನಾಮಗಳಿಂದ ಆರಾಧಿಸಿ, ನಂದಿ ಭೃಂಗ್ಯಾದಿಗಳನ್ನೂ, ಸಪ್ತಮಹಾಮಾತೃಕೆಗಳನ್ನೂ, ಅಷ್ಟದಿಕ್ಪಾಲಕರನ್ನೂ, ಮೂವತ್ತಮೂರುಕೋಟಿ ದೇವತೆಗಳನ್ನೂ, ಪ್ರಭವಾದಿ ಷಷ್ಠಿ ಸಂವತ್ಸರಗಳನ್ನೂ, ಚೈತ್ರಾದಿ ದ್ವಾದಶ ಮಾಸಗಳನ್ನೂ ಕಲ್ಪೋಕ್ತವಿಧಿಯಿಂದಲೂ, ಶಿವಾಷ್ಟೋತ್ತರ ಶಿವಸಹಸ್ರನಾಮ ಗಳಿಂದಲೂ, ಶಿವಪಂಚಾಕ್ಷರೀಸ್ತೋತ್ರ ಮಹಾಮಂತ್ರದಿಂದಲೂ, ಕೇಶವನಾಮ ಗಳಿಂದಲೂ ಪೂಜಿಸಿ ನಂತರ ಧೂಪದೀಪ ನೈವೇದ್ಯಾದಿಗಳಿಂದ ಸಾಂಬಮೂರ್ತಿಯನ್ನು ಆರಾಧಿಸಬೇಕು, ಪಂಚಭಕ್ಷ್ಯ ಪರಮಾನ್ನಾದಿಗಳಿಂದಲೂ, ದಧಿಮಧ್ವಾಜ್ಯಗಳಿಂದಲೂ, ವಿಚಿತ್ರವಾದ ಅನ್ನದಿಂದಲೂ, ಲಡ್ಡು ಮೊದಲಾದವುಗಳಿಂದಲೂ ಪರಮೇಶ್ವರನಿಗೆ ಪ್ರೀತಿಯಾಗಲು ನಿವೇದನವನ್ನು ಮಾಡಬೇಕು. ಉತ್ತಮವಾದ ತಾಂಬೂಲವನ್ನು ಏಲಾಲವಂಗಾದಿಗಳನ್ನು ದೇವರಿಗೆ ಅರ್ಪಿಸೇಕು. ತನ್ನ ಶಕ್ತಿಗೆ ಲೋಪವನ್ನು ಮಾಡದೆ ಸುವರ್ಣದಾನವನ್ನು ಮಾಡಿ ಮಂಗಳಾರತಿಯನ್ನು ಆಚರಿಸಿ, ಅಣುಗಳಲ್ಲಿ ಅಣುವಾಗಿರುವ ಮತ್ತು ಮಹತ್ತರವಾದ ವಸ್ತುಗಳಿಂದಲೂ ಮಹತ್ತಾಗಿರುವ ವಿಶ್ವಾತ್ಮಕನೂ ವಿಶ್ವಾಕಾರನೂ ಆದ ಪರಮೇಶ್ವನನ್ನು ಮಂತ್ರಪುಷ್ಪಾದಿಗಳಿಂದಲೂ, ಭಕ್ತವತ್ಸಲನೂ, ಸೃಷ್ಟಿಸ್ಥಿತಿಗಳಿಗೆ ಕಾರಣಭೂತನೂ ಆದ ಈಶ್ವರನನ್ನು ಪ್ರದಕ್ಷಿಣ ನಮಸ್ಕಾರದಿಂದಲೂ ಅರ್ಚಿಸಬೇಕು. ಮನ್ಮಥವೈರಿಯೂ, ಕಾಲಕೂಟಧರನೂ, ತ್ರಿಪುರಾಂತಕನೂ ಆಗಿರುತ್ತಾ ಸಮಸ್ತ ಜೀವರಾಶಿಗಳಿಗೂ ದುಃಖವನ್ನೂ ಋಣಬಾಧೆಯನ್ನೂ ಹರಿಸಿ ಕಾಪಾಡಬೇಕೆಂದು ಆತನನ್ನು ಪ್ರಾರ್ಥಿಸಬೇಕು. ಆಮೇಲೆ ಶಿವಶಂಕರನೂ, ನೀಲಕಂಠನೂ ಆದ ಮಹಾನುಭಾವನೇ, ನಮ್ಮ ಅಪರಾಧಗಳನ್ನೆಲ್ಲಾ ಕ್ಷಮಿಸಿ ಕಾಪಾಡಬೇಕೆಂದು ಆತನಲ್ಲಿ ಅಪರಾಧ ಕ್ಷಮಾಪಣೆಯನ್ನು ಬೇಡಿಕೊಳ್ಳಬೇಕು. ತಿಲಾಕ್ಷತೆ, ಹಿರಣ್ಯ, ದೂರ್ವಾಂಕುರ, ದಧಿ, ಕ್ಷೀರ ಇವುಗಳಿಂದ ತ್ರಯೋದಶೀಯುತವಾದ ಶನಿವಾರದ ದಿನದಲ್ಲಿ ನಿನಗೆ ಅರ್ಘ್ಯವನ್ನು ಕೊಡುತ್ತೇನೆಂದೂ, ಋಣದಾರಿದ್ರ್ಯದೋಷ, ಅಪಮೃತ್ಯು ಭಯಗಳನ್ನು ಹೋಗಲಾಡಿಸಿ ಇಷ್ಟಾರ್ಥಗಳನ್ನು ಸಲ್ಲಿಸಲು ಈ ಅರ್ಘ್ಯವನ್ನು ಕೊಡುವೆನೆಂಬುದಾಗಿಯೂ, ದೇವತೆಗಳಲ್ಲೆಲ್ಲಾ ಶ್ರೇಷ್ಠಳಾಗಿಯೂ, ಲೋಕನಾಯಕಿ

ಯಾಗಿರುವ ಗೌರೀದೇವಿಗೆ ಅರ್ಘ್ಯವೆಂಬುದಾಗಿಯೂ, ಚಂಡೀಶ್ವರನಿಗೆ ಅರ್ಘ್ಯವೆಂಬುದಾಗಿಯೂ, ವೃಷಭರೂಪನಾಗಿರುವ ಧರ್ಮವೇ ! ನಿನಗೆ ಅರ್ಘ್ಯ ವೆಂಬುದಾಗಿಯೂ, ಅಷ್ಟಮೂರ್ತಿಗಳಿಗೆ ಆಧಾರಭೂತನೂ, ಆದ್ಯಂತರಹಿತನೂ ಆದ ದೇವಾಧಿದೇವನಿಗೆ ಅರ್ಘ್ಯವೇಬುದಾಗಿಯೂ ಮಂತ್ರಪೂರ್ವಕವಾಗಿ ಅರ್ಘ್ಯವನ್ನು ಬಿಡಬೇಕು. ಋಣ, ರೋಗ, ದಾರಿದ್ರ್ಯ, ದುಃಖ, ಪಾಪ, ಕ್ಷುದ್ಭಯ, ಅಪಮೃತ್ಯುಭಯ ಇವುಗಳೆಲ್ಲಾ ನಿವಾರಣೆಯಾಗಲು ಮಹೇಶ್ವರನನ್ನು ಅನನ್ಯವಾದ ಭಯಭಕ್ತಿಗಳಿಂದ ಅರ್ಚಿಸಬೇಕು. ಇಷ್ಟೆಲ್ಲಾ ಆದ ಮೇಲೆ ರಾತ್ರಿ ಸಮರ್ಪಣೆಯನ್ನು ಮಾಡಿ ಪುನಃ ಪೂಜೆಯನ್ನು ಮಾಡಬೇಕು. ಆಮೇಲೆ ಇಷ್ಟ ಬಂಧು ಪರಿವೃತನಾಗಿಯೂ ಶಾಂತಚಿತ್ತನಾಗಿಯೂ ಕಾಲವನ್ನು ಕಳೆಯಬೇಕು. ಈ ವ್ರತವನ್ನು ಯಾರು ಭಕ್ತಿಯಿಂದ ಆಚರಿಸುವರೋ ಅವರು ದಾರಿದ್ರ್ಯದೋಷವನ್ನೂ, ಋಣಬಾಧೆಯನ್ನೂ, ರೋಗಪೀಡೆಯನ್ನು ಪರಿಹರಿಸಿಕೊಂಡು ಸುಖಸಂತೋಷಗಳಿಂದ ಇರುವರೆಂದು ಸೂತಮಹಾಮುನಿಗಳು ಮೊದಲು ವ್ರತವಿಧಾನವನ್ನೆಲ್ಲಾ ಋಷಿಗಳಿಗೆ ತಿಳಿಸಿದವರಾಗಿ ನಂತರ ಕಥೆಯನ್ನು ಹೇಳತೊಡಗಿದರು.

ಎಲೈ ಶೌನಕಾದಿ ಋಷಿಗಳಿರಾ ಕೇಳಿ! ಶನಿತ್ರಯೋದಶೀ ಎಂಬ ಈ ವ್ರತವನ್ನು ಶ್ರಾವಣ ಅಥವಾ ಕಾರ್ತಿಕ ಮಾಸದಲ್ಲಿ ಶುಕ್ಲಪಕ್ಷದಲ್ಲಿ ತ್ರಯೋದಶಿಯು ಶನಿವಾರ ವಾಗಿಯೂ, ಜಯನಾಮಯೋಗವಾಗಿಯೂ ಇರುವಾಗ ಆಚರಿಸಬೇಕು ಎಂದು ಹೇಳಲು, ರೋಮಶಮಹಾಮುನಿಯು ಸೂತರನ್ನು ಕುರಿತು ಸೂತಮಹಾಮುನಿಯೇ! ಪೂರ್ವದಲ್ಲಿ ಈ ವ್ರತವನ್ನು ಯಾರು ಅರ್ಚಿಸಿ ಯಾವ ಫಲಗಳನ್ನು ಪಡೆದರು ಎಂಬುದನ್ನು ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥಿಸಲು, ಸೂತಪುರಾಣೀಕರು ಹೇಳುತ್ತಾರೆ. ರೋಮಶಮಹಾಮುನಿಗಳೇ ! ಪೂರ್ವದಲ್ಲಿ ದೇವತೆಗಳಿಗೂ, ವೃತ್ರಾಸುರನಿಗೂ ಅಸಾಧ್ಯವಾದ ಒಂದು ಯುದ್ಧವು ನಡೆಯಿತು. ಯುದ್ಧಕಾಲದಲ್ಲಿ ದೇವತೆಗಳು ವೃತ್ರಾಸುರನ ಸೈನ್ಯದ ಮೇಲೆ ಬಾಣಗಳನ್ನು ಪ್ರಯೋಗಿಸಲು ಅವನ ಸೈನ್ಯವೆಲ್ಲವೂ ದಿಕ್ಕಾಪಾಲಾಗಿ ಚದುರಿ ಓಡಿಹೋಯಿತು. ಇದನ್ನು ನೋಡಿದ ಆ ರಾಕ್ಷಸನು ಪ್ರಳಯಕಾಲದ ರುದ್ರನಂತೆ ಕೋಪಗೊಂಡವನಾಗಿ ಭೂಮ್ಯಾಕಾಶಗಳು ನಡುಗುವಂತೆ ಆರ್ಭಟವನ್ನು ಮಾಡುತ್ತಾ ದೇವತೆಗಳ ಮೇಲೆ ಬಿದ್ದನು. ಆಗ ದೇವತೆಗಳು ತಮ್ಮ ಮೇಲೆ ಕೈಮಾಡಲು ಬಂದಿರುವ ವೃತ್ರಾಸುರನನ್ನು ಜೈಸಲು ಯತ್ನವಿಲ್ಲದೆ ಭಯಾನ್ವಿತರಾಗಿ ತಮ್ಮ ಗುರುಗಳಾದ ಬೃಹಸ್ಪತ್ಯಾಚಾರ್ಯರ ಬಳಿಗೆ ಬಂದರು.

ಎಲೈ ಗುರುವರ್ಯರೇ! ವೃತ್ರಾಸುರನ ಕಾಟವನ್ನು ಸಹಿಸುವುದು ನಮಗೆ ಅಸಾಧ್ಯವಾಗಿರುವುದು, ಈಗ ಒದಗಿರುವ ಕಷ್ಟವನ್ನು ಪರಿಹರಿಸಲು ತಕ್ಕ ಉಪಾಯವನ್ನು ಹೇಳಬೇಕೆಂದು ಪ್ರಾರ್ಥಿಸಲು, ಬೃಹಸ್ಪತಿಯು ಇವರನ್ನು ನೋಡಿ ಎಲೈ ದೇವತೆಗಳಿರಾ! ಇವನು ಅಜೇಯನು, ತ್ರಿಮೂರ್ತಿಗಳಿಗೂ ಈತನನ್ನು ಗೆಲ್ಲಲು ಸಾಧ್ಯವಿಲ್ಲದ ಬಲದಿಂದ ಕೂಡಿರುವನು. ಇವನನ್ನು ಗೆಲ್ಲಬೇಕಾದರೆ ನೀವು ಲೋಕರಕ್ಷಕನಾದ ಈಶ್ವರನನ್ನು

ಪೂಜಿಸಬೇಕು. ಶ್ರಾವಣ ಅಥವಾ ಕಾರ್ತೀಕಮಾಸದಲ್ಲಿ ಶನಿವಾರದೊಡನೆ ಕೂಡಿಕೊಂಡಿರುವ ತ್ರಯೋದಶಿಯ ದಿನ ಈಶ್ವರನನ್ನು ವಿಧಿಪ್ರಕಾರವಾಗಿ ಪೂಜಿಸಿ ನೂರೆಂಟು ನಮಸ್ಕಾರಗಳನ್ನು ಮಾಡಬೇಕು. ಈ ವ್ರತವನ್ನು ಊರಿನಲ್ಲಿ ಆಚರಿಸುವುದಕ್ಕಿಂತಲೂ ಊರ ಹೊರಗೆ ಆಚರಿಸುವುದು ಒಳ್ಳೆಯದು. ಸಾಯಂಕಾಲದಲ್ಲಿ ವ್ರತವನ್ನು ಆಚರಿಸತಕ್ಕದ್ದು. ಪುಣ್ಯನದಿಗಳಲ್ಲಿಯಾಗಲೀ, ಸರೋವರಗಳಲ್ಲಿಯಾಗಲೀ, ಪರಮೇಶ್ವನನ್ನು ಅರ್ಚಿಸಬೇಕು. ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿ ಭಕ್ತಿಯಿಂದ ಶಿವನನ್ನು ಧ್ಯಾನಿಸುತ್ತಾ ಪ್ರದೋಷವು ಬಂದಮೇಲೆ ಮತ್ತೆ ಸ್ನಾನವನ್ನು ಮಾಡಬೇಕು. ಆಮೇಲೆ ಯಾರೊಡನೆಯೂ ಮಾತನಾಡದೆ ಮೌನದಿಂದ ತನ್ನ ಶಕ್ತಿಗೆ ಲೋಪವನ್ನು ಮಾಡದೆ ಒಂದು ಸಾವಿರವಾಗಲಿ, ಯತ್ನವಿಲ್ಲದಿದ್ದಲ್ಲಿ ಒಂದುನೂರಾಗಲಿ, ಇಲ್ಲವಾದರೆ ಮೂವತ್ತೆರಡಾಗಲಿ ದೀಪಗಳನ್ನು ಹಚ್ಚಬೇಕು. ಆಮೇಲೆ ಕಲ್ಪದಲ್ಲಿ ಉಕ್ತವಾಗಿರುವಂತೆ ಶಿವನನ್ನು ಧ್ಯಾನವಾಹನಾದಿ ಷೋಡಶೋಪಚಾರಗಳಿಂದರ್ಚಿಸಿ ನಮಸ್ಕಾರವನ್ನು ಮಾಡುವಾಗ ಋಣದಾರಿದ್ರ್ಯ ಕಷ್ಟಗಳನ್ನು ಪರಿಹರಿಸು ಎಂಬುದಾಗಿ ಪ್ರಾರ್ಥಿಸಿ ಅರ್ಘ್ಯವನ್ನು ಕೊಡಬೇಕು ಎಂದು ಹೇಳಲು, ಇಂದ್ರನು ಸಂತೋಷಚಿತ್ತನಾಗಿ ಗುರುವರ್ಯರೇ! ಈ ವ್ರತವನ್ನು ಆದಿಯಲ್ಲಿ ಯಾರು ಮಾಡಿದರು? ಅವರಿಗೆ ಅದರಿಂದ ಯಾವ ಫಲ ಉಂಟಾಯಿತು? ಅನುಗ್ರಹಿಸಬೇಕೆಂದು ಪ್ರಾರ್ಥಿಸಲು, ಬೃಹಸ್ಪತ್ಯಾಚಾರ್ಯರು ಆನಂದಗೊಂಡವರಾಗಿ ಇಂತೆಂದರುಃ ಎಲೈ ದೇವನಾಥನೇ ಕೇಳು, ಈ ವೃತ್ರಾಸುರನು ಹೆಚ್ಚಾದ ತಪಸ್ಸನ್ನು ಮಾಡಿದವನಾಗಿ ಪೂರ್ವದಲ್ಲಿ ಗಂಧಮಾದನವೆಂಬ ಪರ್ವತದಲ್ಲಿ ಈಶ್ವರನಿಂದ ವರವನ್ನು ಪಡೆದಿರುವನು. ಹಿಂದೆ ಚಿತ್ರರಥವೆಂಬ ವನದಲ್ಲಿ ಅನೇಕ ಮಹರ್ಷಿಗಳು ವಾಸಮಾಡುತ್ತಿದ್ದರು. ಚಿತ್ರರಥನೆಂಬ ರಾಜನ ವನವಾದುದರಿಂದ ಇದಕ್ಕೆ ಚಿತ್ರರಥವೆಂದು ಹೆಸರು ಬಂದಿತು. ಈ ವನವು ನಿನ್ನ ಅಮರಾವತಿಗೆ ಬಹಳ ದೂರದಲ್ಲಿರುವುದು. ಈಶ್ವರನು ಚಿತ್ರರಥ ರಾಜನಿಗೆ ಬೇಕಾದ ವರಗಳನ್ನು ಕೊಟ್ಟು ಒಂದು ವಿಮಾನವನ್ನು ಕೊಟ್ಟಿರುವನು. ಆ ವಿಮಾನವಾದರೋ ಸುವರ್ಣಮಯಗಳಾದ ಗಂಟೆಗಳಿಂದ ಪ್ರಕಾಶವಾಗಿಯೂ, ಕಿನ್ನರ, ಕಿಂಪುರುಷ, ಸಿದ್ಧ ವಿದ್ಯಾಧರಾದಿಗಳಿಂದಲೂ, ಅನೇಕರಾದ ಅಪ್ಸರ ಸ್ತ್ರೀಯರು ಗಳಿಂದಲೂ ರಾರಾಜಿಸುತ್ತಾ ಸ್ವೇಚ್ಛಾಗಮನವುಳ್ಳದ್ದಾಗಿತ್ತು. ಚಿತ್ರರಥನು ಆ ವಿಮಾನದಲ್ಲಿ ಕುಳಿತು ಭೂಪ್ರದಕ್ಷಿಣೆ ಮಾಡುತ್ತಾ ಭೂಲೋಕದಲ್ಲಿರುವ ಸಮಸ್ತ ಆಶ್ಚರ್ಯಗಳನ್ನೂ ನೋಡುತ್ತಾ ಕೈಲಾಸಪರ್ವತ ಪ್ರಾಂತ್ಯಕ್ಕೆ ಬಂದನು. ಅಲ್ಲಿ ಪ್ರಮಥಗಣಗಳಿಂದಲೂ, ವಸಿಷ್ಠಾದಿ ಮಹಾಮುನಿಗಳಿಂದಲೂ ರಾರಾಜಿಸುತ್ತಿರುವ ಪತ್ನೀಯುತನಾದ ಈಶ್ವರನನ್ನು ನೋಡಿ ನಗುತ್ತಾ ಇಂತೆಂದನು; ಲೋಕದಲ್ಲಿ ಸಂಚರಿಸುವ ಜನಗಳು ಕಾಮಾದಿ ಅರಿಷಡ್ವರ್ಗಗಳಿಗೆ ಸಿಕ್ಕಿ ಬಹಳ ತೊಂದರೆಗೊಂಡು ಪತ್ನೀಯುತರಾಗಿರುವುದು ನ್ಯಾಯವಾಗಿದೆ. ಹೀಗಿರುವಲ್ಲಿ ದೇವಾಧಿದೇವನಾದ ನೀನು ನೆರೆದಿರುವ ಸಭೆಯಲ್ಲಿ ಪತ್ನಿಯನ್ನು ಆಲಿಂಗನ ಮಾಡಿಕೊಳ್ಳುವುದು ನ್ಯಾಯವೇ? ಎಂದು ಕೇಳಲಾಗಿ, ಈ ಮಾತನ್ನು ಕೇಳಿ

ಪರಮೇಶ್ವರನು ಮಂದಹಾಸವುಳ್ಳವನಾಗಿ ಎಲ್ಲರೂ ಕೇಳುವಂತೆ ಹೇಳುತ್ತಾನೆ. ಎಲೈ ಚಿತ್ರರಥನೇ? ಲೋಕದಲ್ಲಿ ಯಾರೂ ಮಾಡದಿರುವ ದೋಷವು ನನ್ನಲ್ಲಿರುವುದೆಂದು ಹೇಳುತ್ತಿರುವಿಯಲ್ಲಾ! ನಾನು ಸಕಲ ಲೋಕಗಳಿಗೂ ಅಶಕ್ಯವಾದ ವಿಷವನ್ನು ಪಾನಮಾಡಿರುತ್ತೇನೆ, ಆದುದರಿಂದ ನನ್ನ ಚರಿತ್ರೆಯು ಪ್ರಪಂಚದಲ್ಲಿ ಬಹಳ ವಿನೋದಕರವಾದುದು. ಹೀಗಿದ್ದಾಗ್ಯೂ ನೀನು ನನ್ನನ್ನು ಹಾಸ್ಯ ಮಾಡುತ್ತಿರುವೆಯಲ್ಲಾ ಎನ್ನಲು, ಪರ್ವತರಾಜನ ಪುತ್ರಿಯಾದ ಪಾರ್ವತಿಯು ಕೋಪಾರೂಢಳಾಗಿ ಚಿತ್ರರಥನೊಡನೆ ಎಲೈ ಮೂಢನೇ! ನೀನು ಪಾವನಮೂರ್ತಿಯೂ, ಮುನಿವಂದ್ಯನೂ, ಕಳಂಕರಹಿತನೂ ಆದ ಈಶ್ವರನನ್ನೂ, ನನ್ನನ್ನೂ ಹಾಸ್ಯಮಾಡಿರುತ್ತೀಯೆ. ಇದಕ್ಕೆ ತಕ್ಕ ಫಲವನ್ನು ಈಗಲೇ ಹೊಂದುವೆಯೆಂದು ಪಾಪಿಯಾದ ಅವನಿಗೆ ರಾಕ್ಷಸತ್ವವು ಬರುವಂತೆ ಶಾಪವನ್ನು ನೀಡಿದಳು. ಶಾಪ ವಾಕ್ಯವು ಪರ್ವತರಾಜ ನಂದಿನಿಯ ಬಾಯಿಂದ ಹೊರಡುತ್ತಲೇ ರಾಜನ ವಿಮಾನ ನೆಲದಲ್ಲಿ ಬಿದ್ದಿತು. ಅವನು ವೃತ್ರಾಸುರನಾಗಿ ಜನ್ಮಿಸಿ ಬ್ರಹ್ಮನನ್ನು ಮೆಚ್ಚಿಸಲು ತಪಸ್ಸನ್ನು ಮಾಡಿ ನಂತರ ಈಶ್ವರನನ್ನು ಮೆಚ್ಚಿಸಿ ಆತನಿಂದ ವರವನ್ನು ಪಡೆದು ಅಜೇಯನಾಗಿರುತ್ತಾನೆ. ನೀನು ವೃತ್ರಾಸುರನನ್ನು ಗೆಲ್ಲಬೇಕಾದರೆ ಮೊದಲು ಶನಿತ್ರಯೋದಶೀ ವ್ರತವನ್ನು ಮಾಡು. ನಂತರ ಆ ರಾಕ್ಷಸನೊಡನೆ ಯುದ್ಧವನ್ನು ಮಾಡು; ನಿನಗೆ ತಪ್ಪದೇ ಜಯವಾಗುವುದೆಂದು ಹೇಳಲು, ಇಂದ್ರನು ಅದರಂತೆ ಈ ವ್ರತವನ್ನು ಮಾಡಿ ವೃತ್ರಾಸುರನನ್ನು ಜೈಸಿ ಇಷ್ಟಾರ್ಥಗಳನ್ನು ಪಡೆದನು ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು. ಲೋಕದಲ್ಲಿ ಈ ವ್ರತವನ್ನು ಯಾರು ಮಾಡುತ್ತಾರೆಯೋ, ಯಾರು ಕಥೆಯನ್ನು ಕೇಳುತ್ತಾರೆಯೋ, ಯಾರು ಬರೆಯುತ್ತಾರೆಯೋ ಅವರೆಲ್ಲರೂ ಶಿವಸಾಯುಜ್ಯವನ್ನು ಹೊಂದುವರು. ಇದರಲ್ಲಿ ಸಂಶಯವಿಲ್ಲ ಎಂದು ಶೌನಕಾದಿ ಮಹರ್ಷಿಗಳಿಗೆ ಸೂತಪುರಾಣೀಕರು ಹೇಳಿದರೆಂಬಲ್ಲಿಗೆ,

**ಶನಿಪ್ರದೋಷವ್ರತ ಕಥೆಯು ಸಂಪೂರ್ಣವಾಯಿತು**

# ಹರಿತಾಳಕಗೌರೀ ವ್ರತ

(ಆದೌ ತಿಥಿ ನಿರ್ಣಯಃ) ಭಾದ್ರಪದ ಶುಕ್ಲ ತೃತೀಯಾ । ಶಿಷ್ಟಪರಿ ಗೃಹೀತ್ವಂ ಹರಿತಾಳಕಾವ್ರತಂ । ತತ್ರಪರಿವಿದ್ಧಾಯಾಂ ಕಾರ್ಯ । ಮುಹೂರ್ತಮಾತ್ರಂ ಸತ್ವೇಪಿ ದಿನೇ ಗೌರೀವ್ರತಂ ಪರೇ । ಇತಿ ಮಾಧವಪ್ರೋಕ್ತೇಃ ॥ ಹರಿತಾಳಕಾವ್ರತ ಸತ್ವಪುರ–ಸ್ಕಾರೇಣೋಪಿ । ಪರಿವಿದ್ಧಾಗ್ರಹಣ ವಚನಾದ್ಧಿವೋದಾಸಿಯ ಉದಾಹೃತತ್ವಾಚ್ಚ ॥ ತತ್ರ ವ್ರತವಿಧಿಃ ॥ ಭಾದ್ರಪದ ಶುಕ್ಲ ತೃತೀಯಾಯಾಂ ಪ್ರಾತಃ ತಿಲಾಮಲಕೇನ ಸ್ನಾತ್ವಾ । ಪಟ್ಟವಸ್ತ್ರಂ ಪರಿಧಾಯ । ಮಾಸಪಕ್ಷಾದ್ಯುಲಿಖ್ಯ ॥ ಆಚಮ್ಯ ॥

**(ಈ ವ್ರತವನ್ನು ಭಾದ್ರಪದ ಶುದ್ಧ ತದಿಗೆ ದಿವಸ ಮಾಡತಕ್ಕದ್ದು. ಮುಹೂರ್ತ ಮಾತ್ರ ತದಿಗೆ ಇದ್ದರೂ ಈ ವ್ರತವನ್ನು ಆಚರಿಸತಕ್ಕದೆಂದು ಮಾಧವಪ್ರೋಕ್ತವಿರುತ್ತದೆ. ಭಾದ್ರಪದ ಶುಕ್ಲ ತದಿಗೆ ದಿನ ಪ್ರಾತಃಕಾಲ ಎದ್ದು ತಿಲಾಮಲಕಸ್ನಾನವನ್ನು ಮಾಡಿ ಮಡಿಯನ್ನುಟ್ಟು ವ್ರತವನ್ನಾಚರಿಸಬೇಕು.)**

ಸಂಕಲ್ಪ್ಯ – ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ॥ ಮಮ ಆತ್ಮನಃ ಪುರಾಣೋಕ್ತ ಕಲ್ಪಪ್ರಕಾರೇಣ ಇಹಜನ್ಮನಿ ಜನ್ಮಾಂತರೇಚ ಸಮಸ್ತಪಾಪಕ್ಷಯ–ಪೂರ್ವಕರಾಜ್ಯಾಖಂಡಿತ ಸೌಭಾಗ್ಯಾದಿ ವಿವೃದ್ಧಯ ಪ್ರತಿವಾರ್ಷಿಕಂ ಉಮಾ ಮಹೇಶ್ವರ ಪ್ರೀತ್ಯರ್ಥಂ ಹರಿತಾಳಕಾವ್ರತಮಹಂ ಕರಿಷ್ಯೇ ॥ ತದಂಗಕಲಶಾರಾಧನಂ ಕರಿಷ್ಯೇ ॥ ಅನಂತರಂ ಮಹಾಗಣಪತಿಪೂಜಾ (ಕಲಶಪೂಜೆ, ಗಣಾಧಿಪತಿಪೂಜೆ ವಿನಾಯಕ ವ್ರತದಲ್ಲಿರುವಂತೆ) ಅಪವಿತ್ರಃ ಪವಿತ್ರೋವಾ ಇತಿ ಮಂತ್ರೇಣ ಶರೀರ ಶುದ್ಧ್ಯರ್ಥಂ ಕಲಶೋಧಕಂ ಆತ್ಮಾನಾಂಪ್ರೋಕ್ಷ್ಯ॥

ಧ್ಯಾನಂ :- ಪೀತಕೌಶೇಯವಸನಾಂ । ಹೇಮಾಭ್ರಾಂ ಕಮಲಾಸನಾಂ । ಭಕ್ತಾನಾಂ ವರದಾನಿತ್ಯ ಪಾರ್ವತೀಂ ಚಿಂತಯಾಮ್ಯಹಂ ॥ ಮಂದಾರಮಾಲಾಕುಲಿತಾಲಕಾಯೈ । ಕಪಾಲಮಾಲಾಂಕಿತಶೇಖರಾಯೈ । ದಿವ್ಯಾಂಬರಾಯೈ ಚ ದಿಗಂಬರಾಯೈ । ನಮಶ್ಶಿವಾಯೈ ಚ ನಮಶ್ಶಿವಾಯೈ ॥ ಇತಿ ಧ್ಯಾನಂ ॥ ದೇವಿ ದೇವಿ ಸಮಾಗಚ್ಛ ಪ್ರಾರ್ಥಯೇಹಂ ಜಗನ್ಮಯೇ । ಇಮಾಂ ಮಯಾಕೃತಾಂ ಪೂಜಾಂ ಗೃಹಾಣ ಸುರಪೂಜಿತೆ ॥ **ಆವಾಹನಂ** ॥

**(ಪ್ರಾಣಪ್ರತಿಷ್ಠಾವಿಧಿ ವಿನಾಯಕ ವ್ರತಕಲ್ಪದಲ್ಲಿರುವಂತೆ ಆಚರಿಸತಕ್ಕದ್ದು)**

ಭವಾನ್ವಿತಂ ಮಹಾದೇವಿ ಸರ್ವಸೌಭಾಗ್ಯದಾಯಕಿ । ಅನೇಕರತ್ನ ಸಂಯುಕ್ತ–ಮಾಸನಂ ಪ್ರತಿಗೃಹ್ಯತಾಂ ॥ ಆಸನಂ ॥ ಸುಚಾರುಶೀತಲಂ ದಿವ್ಯಂ ನಾನಾಗಂಧ ಸಮನ್ವಿತಂ । ಪಾದ್ಯಂ ಗೃಹಾಣ ದೇವೇಶಿ ಮಹಾದೇವಿ ನಮೋಽಸ್ತುತೇ॥ ಪಾದ್ಯಂ ॥ ಶ್ರೀಪಾರ್ವತೀ ಮಹಾಭಾಗೇ ಶಂಕರಪ್ರಿಯವಾದಿನಿ । ಅರ್ಘ್ಯಂ ಗೃಹಾಣ ಕಲ್ಯಾಣಿ

ಪರಮೇಶ್ವರನು ಮಂದಹಾಸವುಳ್ಳವನಾಗಿ ಎಲ್ಲರೂ ಕೇಳುವಂತೆ ಹೇಳುತ್ತಾನೆ. ಎಲೈ ಚಿತ್ರರಥನೇ? ಲೋಕದಲ್ಲಿ ಯಾರೂ ಮಾಡದಿರುವ ದೋಷವು ನನ್ನಲ್ಲಿರುವುದೆಂದು ಹೇಳುತ್ತಿರುವಿಯಲ್ಲಾ! ನಾನು ಸಕಲ ಲೋಕಗಳಿಗೂ ಅಶಕ್ಯವಾದ ವಿಷವನ್ನು ಪಾನಮಾಡಿರುತ್ತೇನೆ, ಆದುದರಿಂದ ನನ್ನ ಚರಿತ್ರೆಯು ಪ್ರಪಂಚದಲ್ಲಿ ಬಹಳ ವಿನೋದಕರವಾದುದು. ಹೀಗಿದ್ದಾಗ್ಯೂ ನೀನು ನನ್ನನ್ನು ಹಾಸ್ಯ ಮಾಡುತ್ತಿರುವೆಯಲ್ಲಾ ಎನ್ನಲು, ಪರ್ವತರಾಜನ ಪುತ್ರಿಯಾದ ಪಾರ್ವತಿಯು ಕೋಪಾರೂಢಳಾಗಿ ಚಿತ್ರರಥನೊಡನೆ ಎಲೈ ಮೂಢನೇ! ನೀನು ಪಾವನಮೂರ್ತಿಯೂ, ಮುನಿವಂದ್ಯನೂ, ಕಳಂಕರಹಿತನೂ ಆದ ಈಶ್ವರನನ್ನೂ, ನನ್ನನ್ನೂ ಹಾಸ್ಯಮಾಡಿರುತ್ತೀಯೆ. ಇದಕ್ಕೆ ತಕ್ಕ ಫಲವನ್ನು ಈಗಲೇ ಹೊಂದುವೆಯೆಂದು ಪಾಪಿಯಾದ ಅವನಿಗೆ ರಾಕ್ಷಸತ್ವವು ಬರುವಂತೆ ಶಾಪವನ್ನು ನೀಡಿದಳು. ಶಾಪ ವಾಕ್ಯವು ಪರ್ವತರಾಜ ನಂದಿನಿಯ ಬಾಯಿಂದ ಹೊರಡುತ್ತಲೇ ರಾಜನ ವಿಮಾನ ನೆಲದಲ್ಲಿ ಬಿದ್ದಿತು. ಅವನು ವೃತ್ರಾಸುರನಾಗಿ ಜನ್ಮಿಸಿ ಬ್ರಹ್ಮನನ್ನು ಮೆಚ್ಚಿಸಲು ತಪಸ್ಸನ್ನು ಮಾಡಿ ನಂತರ ಈಶ್ವರನನ್ನು ಮೆಚ್ಚಿಸಿ ಆತನಿಂದ ವರವನ್ನು ಪಡೆದು ಅಜೇಯನಾಗಿರುತ್ತಾನೆ. ನೀನು ವೃತ್ರಾಸುರನನ್ನು ಗೆಲ್ಲಬೇಕಾದರೆ ಮೊದಲು ಶನಿತ್ರಯೋದಶೀ ವ್ರತವನ್ನು ಮಾಡು. ನಂತರ ಆ ರಾಕ್ಷಸನೊಡನೆ ಯುದ್ಧವನ್ನು ಮಾಡು; ನಿನಗೆ ತಪ್ಪದೇ ಜಯವಾಗುವುದೆಂದು ಹೇಳಲು, ಇಂದ್ರನು ಅದರಂತೆ ಈ ವ್ರತವನ್ನು ಮಾಡಿ ವೃತ್ರಾಸುರನನ್ನು ಜೈಸಿ ಇಷ್ಟಾರ್ಥಗಳನ್ನು ಪಡೆದನು ಎಂದು ಭೀಷ್ಮನು ಧರ್ಮರಾಯನಿಗೆ ಹೇಳಿದನು. ಲೋಕದಲ್ಲಿ ಈ ವ್ರತವನ್ನು ಯಾರು ಮಾಡುತ್ತಾರೆಯೋ, ಯಾರು ಕಥೆಯನ್ನು ಕೇಳುತ್ತಾರೆಯೋ, ಯಾರು ಬರೆಯುತ್ತಾರೆಯೋ ಅವರೆಲ್ಲರೂ ಶಿವಸಾಯುಜ್ಯವನ್ನು ಹೊಂದುವರು. ಇದರಲ್ಲಿ ಸಂಶಯವಿಲ್ಲ ಎಂದು ಶೌನಕಾದಿ ಮಹರ್ಷಿಗಳಿಗೆ ಸೂತಪುರಾಣಿಕರು ಹೇಳಿದರೆಂಬಲ್ಲಿಗೆ,

**ಶನಿಪ್ರದೋಷವ್ರತ ಕಥೆಯು ಸಂಪೂರ್ಣವಾಯಿತು**

---

# ಹರಿತಾಳಕಗೌರೀ ವ್ರತ

(ಆದೌ ತಿಥಿ ನಿರ್ಣಯಃ) ಭಾದ್ರಪದ ಶುಕ್ಲ ತೃತೀಯಾ । ಶಿಷ್ಟಪರಿ ಗೃಹೀತ್ವಂ ಹರಿತಾಳಕಾವ್ರತಂ । ತತ್ರಪರಿವಿದ್ಧಾಯಾಂ ಕಾರ್ಯ । ಮುಹೂರ್ತಮಾತ್ರಂ ಸತ್ವೇಪಿ ದಿನೇ ಗೌರೀವ್ರತಂ ಪರೇ । ಇತಿ ಮಾಧವಪ್ರೋಕ್ತೇಃ ॥ ಹರಿತಾಳಕಾವ್ರತ ಸತ್ವಪುರ–ಸ್ಕಾರೇಣೋಪಿ । ಪರಿವಿದ್ಧಾಗ್ರಹಣ ವಚನಾದ್ಧಿವೋದಾಸಿಯ ಉದಾಹೃತತ್ವಾಚ್ಚ ॥ ತತ್ರ ವ್ರತವಿಧಿಃ ॥ ಭಾದ್ರಪದ ಶುಕ್ಲ ತೃತೀಯಾಯಾಂ ಪ್ರಾತಃ ತಿಲಾಮಲಕೇನ ಸ್ನಾತ್ವಾ । ಪಟ್ಟವಸ್ತ್ರಂ ಪರಿಧಾಯ । ಮಾಸಪಕ್ಷಾದ್ಯುಲಿಖ್ಯ ॥ ಆಚಮ್ಯ ॥

**(ಈ ವ್ರತವನ್ನು ಭಾದ್ರಪದ ಶುದ್ಧ ತದಿಗೆ ದಿವಸ ಮಾಡತಕ್ಕದ್ದು. ಮುಹೂರ್ತ ಮಾತ್ರ ತದಿಗೆ ಇದ್ದರೂ ಈ ವ್ರತವನ್ನು ಆಚರಿಸತಕ್ಕದೆಂದು ಮಾಧವಪ್ರೋಕ್ತವಿರುತ್ತದೆ. ಭಾದ್ರಪದ ಶುಕ್ಲ ತದಿಗೆ ದಿನ ಪ್ರಾತಃಕಾಲ ಎದ್ದು ತಿಲಾಮಲಕಸ್ನಾನವನ್ನು ಮಾಡಿ ಮಡಿಯನ್ನುಟ್ಟು ವ್ರತವನ್ನಾಚರಿಸಬೇಕು.)**

ಸಂಕಲ್ಪ್ಯ – ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ॥ ಮಮ ಆತ್ಮನಃ ಪುರಾಣೋಕ್ತ ಕಲ್ಪಪ್ರಕಾರೇಣ ಇಹಜನ್ಮನಿ ಜನ್ಮಾಂತರೇಚ ಸಮಸ್ತಪಾಪಕ್ಷಯ–ಪೂರ್ವಕರಾಜ್ಯಾಖಂಡಿತ ಸೌಭಾಗ್ಯಾದಿ ವಿವೃದ್ಧಯ ಪ್ರತಿವಾರ್ಷಿಕಂ ಉಮಾ ಮಹೇಶ್ವರ ಪ್ರೀತ್ಯರ್ಥಂ ಹರಿತಾಳಕಾವ್ರತಮಹಂ ಕರಿಷ್ಯೇ ॥ ತದಂಗಕಲಶಾರಾಧನಂ ಕರಿಷ್ಯೇ ॥ ಅನಂತರಂ ಮಹಾಗಣಪತಿಪೂಜಾ (ಕಲಶಪೂಜೆ, ಗಣಾಧಿಪತಿಪೂಜೆ ವಿನಾಯಕ ವ್ರತದಲ್ಲಿರುವಂತೆ) ಅಪವಿತ್ರಃ ಪವಿತ್ರೋವಾ ಇತಿ ಮಂತ್ರೇಣ ಶರೀರ ಶುದ್ಧ್ಯರ್ಥಂ ಕಲಶೋಧಕಂ ಆತ್ಮಾನಾಂಪ್ರೋಕ್ಷ್ಯ॥

ಧ್ಯಾನಂ :– ಪೀತಕೌಶೇಯವಸನಾಂ । ಹೇಮಾಭ್ರಾಂ ಕಮಲಾಸನಾಂ । ಭಕ್ತಾನಾಂ ವರದಾನಿತ್ಯ ಪಾರ್ವತೀಂ ಚಿಂತಯಾಮ್ಯಹಂ ॥ ಮಂದಾರಮಾಲಾಕುಲಿತಾಲಕಾಯ್ಕೆ । ಕಪಾಲಮಾಲಾಂಕಿತಶೇಖರಾಯ್ಕೆ । ದಿವ್ಯಾಂಬರಾಯ್ಕೆ ಚ ದಿಗಂಬರಾಯ್ಕೆ । ನಮಶ್ಶಿವಾಯ್ಕೆ ಚ ನಮಶ್ಶಿವಾಯ್ಕೆ ॥ ಇತಿ ಧ್ಯಾನಂ ॥ ದೇವಿ ದೇವಿ ಸಮಾಗಚ್ಛ ಪ್ರಾರ್ಥಯೇಹಂ ಜಗನ್ಮಯೇ । ಇಮಾಂ ಮಯಾಕೃತಾಂ ಪೂಜಾಂ ಗೃಹಾಣ ಸುರಪೂಜಿತೆ ॥ **ಆವಾಹನಂ** ॥

**(ಪ್ರಾಣಪ್ರತಿಷ್ಠಾವಿಧಿ ವಿನಾಯಕ ವ್ರತಕಲ್ಪದಲ್ಲಿರುವಂತೆ ಆಚರಿಸತಕ್ಕದ್ದು)**

ಭವಾನ್ವಿತಂ ಮಹಾದೇವಿ ಸರ್ವಸೌಭಾಗ್ಯದಾಯಕಿ । ಅನೇಕರತ್ನ ಸಂಯುಕ್ತ–ಮಾಸನಂ ಪ್ರತಿಗೃಹ್ಯತಾಂ ॥ ಆಸನಂ ॥ ಸುಚಾರುಶೀತಲಂ ದಿವ್ಯಂ ನಾನಾಗಂಧ ಸಮನ್ವಿತಂ । ಪಾದ್ಯಂ ಗೃಹಾಣ ದೇವೇಶಿ ಮಹಾದೇವಿ ನಮೋಽಸ್ತುತೇ॥ ಪಾದ್ಯಂ ॥ ಶ್ರೀಪಾರ್ವತೀ ಮಹಾಭಾಗೇ ಶಂಕರಪ್ರಿಯವಾದಿನಿ । ಅರ್ಘ್ಯಂ ಗೃಹಾಣ ಕಲ್ಯಾಣಿ

ಭರ್ತ್ರಾಸಹಪತಿವ್ರತೆ ॥ ಅರ್ಘ್ಯಂ ॥ ಗಂಗಾಜಲಂ ಸಮಾನೀತಂ ಸುವರ್ಣಕಲಶೇ–ಸ್ಥಿತಂ। ಆಚಮ್ಯತಾಂ ಮಹಾಭಾಗೇ ರುದ್ರೇಣಸಹಿತೇನಘೆ ॥ ಆಚಮನಂ ॥ ಗಂಗಾ ಸರಸ್ವತೀರೇವ ವಿಮಲೆ ನರ್ಮದಾಜಲ್ಯೆಃ। ಸ್ನಾಪಿತಾನಿ ಮಹಾದೇವಿ ತಥಾ ಶಾಂತಿಂ ಪ್ರಯಚ್ಛಮೇ ॥ ಸ್ನಾನಂ ॥ ಸರ್ವಭೂಷಾದಿಕೆ ಸೌಮ್ಯೇ। ಲೋಕಲಜ್ಜಾ ನಿವಾರಿಣೀ ಮಯೋಪಾಪದಿತೆ ತುಭ್ಯಂ। ವಾಸಸೀ ಪ್ರತಿಗೃಹ್ಯತಾಂ ॥ ವಸ್ತ್ರಂ ॥ ನಾನಾಮಂತ್ರೈಃ ಸಮುದ್ಭೂತಂ ತ್ರಿವೃತಂ ಬ್ರಹ್ಮಸೂತ್ರಕಂ। ಭವಂತು ಸಂಪ್ರಯಚ್ಛಾಮಿ ತ್ವಯಾಭಕ್ತ್ಯಾತುಗೃಹ್ಯತಾಂ ॥ ಉಪವೀತಂ। ಕಂಚುಕಿಮುಪವಸ್ತ್ರಂ ಚ ನಾನಾರತ್ನೈಃ ಸಮನ್ವಿತಂ। ಗೃಹಾಣತ್ವಂ ಮಯಾದತ್ತಂ ಚಂಡಿಕೇ ನಮೋಽಸ್ತುತೇ ॥ ಭೂಷಣಂ ॥ ಕುಂಕುಮಾಗರುಕರ್ಪೂರ ಚಂದನಂ ಕಸ್ತೂರಿಯುತಂ। ವಿಲೇಪನಂ ಮಹಾದೇವಿ ಗಂಧಂ ದಾಸ್ಯಾಮಿ ಭಕ್ತಿತೆ ॥ ಗಂಧಂ ॥ ರಂಜಿತಾಃ ಕುಂಕುಮಾಘೇನ ಅಕ್ಷತಾಶ್ಚಾತಿ ಶೋಭನಾಃ ॥ ಭಕ್ತ್ಯಾಸಮರ್ಪಿತಾತಾತುಭ್ಯಂ ಪ್ರಸನ್ನಾಭವ ಪಾರ್ವತಿ॥ ಅಕ್ಷತಾನ್ ॥ ಹರಿದ್ರಾ ಕುಂಕುಮಂಚೈವ ಸಿಂಧೂರ ಕಜ್ಜಲಾನ್ವಿತಂ ॥ ಸೌಭಾಗ್ಯದ್ರವ್ಯಾಣಿ ಸೇವಂತಿಕಾ ವಕುಳ ಚಂಪಕ ಪಾಟಲಾಬ್ಜೈ। ಪುನ್ನಾಗ ಜಾತಿ ಕರವೀರ ರಸಾಲ ಪುಷ್ಪೈಃ। ಬಿಲ್ವ ಪ್ರವಾಳ ತುಲಸೀದಳಮಾಲತಾಭಿಃ ತ್ವಾಂ ಪೂಜಯಾಮಿ ಜಗದೀಶ್ವರಿ ಮೇ ಪ್ರಸೀದ ॥ ಪುಷ್ಪಂ ॥

## ಅಥಾಂಗ ಪೂಜಾ

| | | | |
|---|---|---|---|
| ಉಮಾಯೈನಮಃ | ಪಾದೌ | ಪೂಜಯಾಮಿ | (ಪಾದಗಳು) |
| ಗೌರ್ಯೈನಮಃ | ಜಂಘೇ | '' | (ಹಿಂಭಾಗ) |
| ಪಾರ್ವತ್ಯೈನಮಃ | ಜಾನುನೀ | '' | (ಮೊಣಕಾಲು) |
| ಜಗದ್ಧಾತ್ರೇನಮಃ | ಊರೂನ್ | '' | (ತೊಡೆ) |
| ಜಗತ್ಪ್ರತಿಷ್ಠಾಯೈನಮಃ | ಕಟಿಂ | '' | (ಹೊಕ್ಕಳು) |
| ದೇವ್ಯೈನಮಃ | ಉದರಂ | '' | (ಹೊಟ್ಟೆ) |
| ಲೋಕವಂದಿತಾಯೈನಮಃ | ಸ್ತನಂ | '' | (ಮೊಲೆ) |
| ಕಾಳ್ಯೈನಮಃ | ಕಂಠಂ | '' | (ಕುತ್ತಿಗೆ) |
| ಶಿವಾಯೈನಮಃ | ಮುಖಂ | '' | (ಮುಖ) |
| ಭವಾನ್ಯೈನಮಃ | ನೇತ್ರಾಣಿ | '' | (ಕಣ್ಣುಗಳು) |
| ರುದ್ರಾಣ್ಯೈನಮಃ | ಕರ್ಣೌ | '' | (ಕಿವಿಗಳು) |
| ಶರ್ವಾಣ್ಯೈನಮಃ | ಲಲಾಟಂ | '' | (ಹಣೆ) |
| ಮಂಗಳದಾತ್ರ್ಯೈನಮಃ | ಶಿರಃ | '' | (ತಲೆ) |
| ಶ್ರೀ ಹರಿತಾಳಕಾಯೈನಮಃ | ಸರ್ವಾಂಗಾನಿ | '' | (ಎಲ್ಲಾ ಅಂಗಗಳು) |

## ಅಥ ಪತ್ರಪೂಜಾ

| | | | |
|---|---|---|---|
| ಗೌರ್ಯೈನಮಃ | ಜಾಜೀ | ಪತ್ರಂ | ಸಮರ್ಪಯಾಮಿ |
| ಶಿವಪ್ರಿಯಾಯ್ಯೆನಮಃ | ಕಲ್ಹಾರ | ,, | ,, |
| ಜಗನ್ಮಾತ್ರೇನಮಃ | ಬಿಲ್ವ | ,, | ,, |
| ವಿದ್ಯಾಧಾರಿಣ್ಯೇನಮಃ | ತುಳಸೀ | ,, | ,, |
| ಕ್ಷಮಾಯ್ಯೆನಮಃ | ದೂರ್ವಾರ | ,, | ,, |

ಶ್ರೀ ಹರಿತಾಳಕಗೌರ್ಯೈ ನಮಃ ಪತ್ರಪೂಜಾಂ ಸಮರ್ಪಯಾಮಿ

## ಅಥ ಪುಷ್ಪಪೂಜಾ

| | | | |
|---|---|---|---|
| ಶಿವಾಯನಮಃ | ಕರವೀರ | ಪುಷ್ಪಂ | ಸಮರ್ಪಯಾಮಿ |
| ಮಹೇಶ್ವರಾಯನಮಃ | ಜಾಜೀ | ,, | ,, |
| ಶಂಭವೇನಮಃ | ವಕುಳ | ,, | ,, |
| ಪಿನಾಕಿನೇನಮಃ | ಶತಪತ್ರ | ,, | ,, |
| ಶಶಿಶೇಖರಾಯನಮಃ | ಕಲ್ಹಾರ | ,, | ,, |
| ವಾಮದೇವಾಯನಮಃ | ಮಲ್ಲಿಕಾ | ,, | ,, |
| ವಿರೂಪಾಕ್ಷಾಯನಮಃ | ಪಾಟಲೀ | ,, | ,, |
| ಕಪರ್ದಿನೇನಮಃ | ಕೇತಕೀ | ,, | ,, |
| ನೀಲಲೋಹಿತಾಯನಮಃ | ಬಿಲ್ವಪತ್ರಂ | ,, | ,, |
| ಶೂಲಪಾಣಯೇನಮಃ | ಪುನ್ನಾಗ | ,, | ,, |
| ಖಟ್ವಾಂಗಿನೇನಮಃ | ನೀಲೋತ್ಪಲ | ,, | ,, |

ಶ್ರೀಹರಿತಾಳಕಗೌರ್ಯೈನಮಃ ಪುಷ್ಪಪೂಜಾಂ ಸಮರ್ಪಯಾಮಿ

## ಅಥ ಅಷ್ಟೋತ್ತರ ಶತನಾಮಪೂಜಾ

ಗೌರ್ಯೈ ನಮಃ। ಅಂಬಿಕಾಯ್ಯೆ ನಮಃ। ಕೌಮಾರಯೇ ನಮಃ। ಗಂಗಾಧರ ಕುಟುಂಬಿನ್ಯೈ ನಮಃ। ರಾಕ್ಷಸಮರ್ದಿನ್ಯೈ ನಮಃ। ಮಹಾದೇವ್ಯೈ ನಮಃ। ಹರಪತ್ನ್ಯೈ ನಮಃ। ಗಿರಿಜಾತನೂಭವಾಯ್ಯೆ ನಮಃ। ಅಮರಸಂಪೂಜಿತಾಯ್ಯೆ ನಮಃ। ಲೋಕಮಾತ್ರೇ ನಮಃ। ಅಕ್ಷಯಾಯ್ಯೆ ನಮಃ। ಶಂಭುಪ್ರಿಯಾಯ್ಯೆ ನಮಃ। ಮಂಗಳ–ಗೌರ್ಯೈ ನಮಃ। ಮಾಂಗಲ್ಯದಾಯಿನ್ಯೈ ನಮಃ। ಅಮರವಂದಿತಾಯ್ಯೆ ನಮಃ। ಅಭಯ–ಪ್ರದಾಯಿನ್ಯೈ ನಮಃ। ಆಗಮಸನ್ನುತಾಯ್ಯೆ ನಮಃ। ಪ್ರಳಯ ಕಾರಣಾಯ್ಯೆ ನಮಃ।

ಕೈಲಾಸವಾಸಿನ್ಯೈ ನಮಃ। ಕಮಲಹಸ್ತಾಯೈ ನಮಃ। ವಿಶ್ವಂಭರಪ್ರಿಯಾಯೈ ನಮಃ। ನಾಗಾಭರಣಪ್ರಿಯಾಯೈ ನಮಃ। ಲೋಕಸಂಹಾರಿಣೇ ನಮಃ। ವಿಶ್ವಪಾಲಿನೇ ನಮಃ। ಅಖಿಲಾಗಮಸನ್ನುತಾಯೈ ನಮಃ। ವಿಭೂತಿಪ್ರಿಯಾಯೈ ನಮಃ। ರಜತಾಚಲವಾಸಿನ್ಯೈ ನಮಃ। ಹ್ರಸ್ವಗ್ರೀವಾಯೈ ನಮಃ। ಇಂದ್ರಾಣ್ಯೈ ನಮಃ। ಮಹಾಕಾಳ್ಯೈ ನಮಃ। ಮಹೋದರ್ಯೈ ನಮಃ। ಮಧುಪ್ರಿಯಾಯೈ ನಮಃ। ಮಕರಧ್ವಜಸನ್ನುತಾಯೈ ನಮಃ। ಚಾಮುಂಡಾಯೈ ನಮಃ। ಲಕ್ಷ್ಮೀಪ್ರಿಯಾಯೈ ನಮಃ। ಕಾಲಲೋಹಿತಾಯೈ ನಮಃ। ನೀಲಕಂಠ ಪ್ರಿಯದಾಯೈ ನಮಃ। ಅಂಬುಜಾಕ್ಷ್ಯೈ ನಮಃ। ಹ್ರಸ್ವಗ್ರೀವಾಯೈ ನಮಃ। ವಿಶಾಲಾಕ್ಷ್ಯೈ ನಮಃ। ವಿಮಲಾಂಗಾಯೈ ನಮಃ। ಮಂಗಳತನೂಭವಾಯೈ ನಮಃ। ಮಹಾಮಾತ್ರೇ ನಮಃ। ಮಧುಸೂದನವಂದಿತಾಯೈ ನಮಃ। ಕದಳೀದಳ–ಲೋಚನಾಯೈನಮಃ। ವಿಶಾಲಾಕ್ಷ್ಯೈನಮಃ। ವಿಮಲಗಾತ್ರ್ಯೈನಮಃ। ಮಹಾಭಯಂಕರ ರೂಪಿಣ್ಯೈ ನಮಃ। ನೈರ್ಮಲ್ಯಪ್ರಿಯಾಯೈ ನಮಃ। ಇಷ್ಟಾರ್ಥಸಿದ್ಧಿದಾಯೈ ನಮಃ। ಜಗನ್ಮಾತ್ರೇ ನಮಃ। ವಿಶ್ವೇಶ್ವರಕುಟುಂಬಿನ್ಯೈ ನಮಃ। ಅಘಹರಾಯೈ ನಮಃ। ಹರಾರ್ಧಶರೀರಿಣ್ಯೈ ನಮಃ। ಮೇನಕಾತ್ಮಜಾಯೈ ನಮಃ। ಅಪರ್ಣೇಭ್ಯೋ ನಮಃ। ಪಾರ್ವತ್ಯೈ ನಮಃ। ದುರ್ಗ್ಯೈ ನಮಃ। ಮೃಡಾಣ್ಯೈ ನಮಃ। ಚಂಡಿಕಾಯೈ ನಮಃ। ಅಂಬಿಕಾಯೈ ನಮಃ। ದಾಕ್ಷಾಯಿಣ್ಯೈ ನಮಃ। ಮೇನಕಾತ್ಮಜಾಯೈ ನಮಃ। ಪಿನಾಕಹಸ್ತಾಯೈ ನಮಃ। ಲೋಲಲೋಚನಾಯೈ ನಮಃ। ಖಟ್ವಾಂಗಿನ್ಯೈ ನಮಃ। ಮಾಹೇಶ್ವರ್ಯೈ ನಮಃ। ಭವಾನ್ಯೈ ನಮಃ। ಕಾಳ್ಯೈ ನಮಃ। ಜಗತ್ಪ್ರತಿಷ್ಠಾಯೈ ನಮಃ। ಪಿನಾಕಿನ್ಯೈ ನಮಃ। ಕ್ಷಮಾಯೈ ನಮಃ। ಮಂಗಳದಾತ್ರ್ಯೈ ನಮಃ। ಶಿವಾಯೈ ನಮಃ। ಶಿವಪ್ರಿಯಾಯೈ ನಮಃ। ಶಾಂತರೂಪಿಣ್ಯೈ ನಮಃ। ಉಮಾಯೈ ನಮಃ। ವಿದ್ಯಾದಾರಿಣ್ಯೈ ನಮಃ। ಅಪಾಮಾರ್ಗಪ್ರದಾಯಿನ್ಯೈ ನಮಃ। ಲೋಕಪಾಲಿನ್ಯೈ ನಮಃ। ಸತ್ಯಸಂಕಲ್ಪಾಯೈ ನಮಃ। ಭವರೋಗಪರಿಹಾರಾಯೈ ನಮಃ। ಜಗದಂಬಿಕಾಯೈ ನಮಃ। ಲೋಕಪಾವನಾಯೈ ನಮಃ। ಮಧುಸೂದನವಂದ್ಯೈ ನಮಃ। ಆರ್ತತ್ರಾಣ–ಪಾರಾಯಣಾಯೈ ನಮಃ। ಅಹಂಕಾರಮರ್ದಿನ್ಯೈ ನಮಃ। ಆಶ್ರಿತವತ್ಸಲಾಯೈ ನಮಃ। ಅಭಿವಂದಿತಾಯೈ ನಮಃ। ನಂದಿವಾಹನಾಯೈ ನಮಃ। ಅಂಕುಶಧಾರಿಣ್ಯೈ ನಮಃ। ಪಾಶಹಸ್ತಾಯೈ ನಮಃ। ಪ್ರತಿವಂದಿತಾಯೈ ನಮಃ। ಅಕ್ರಮಸಂಹಾರಿಣ್ಯೈ ನಮಃ। ರಾಕ್ಷಸಮರ್ದಿನ್ಯೈ ನಮಃ। ಮಹೇಶ್ವರ್ಯೈ ನಮಃ। ಇಂದುವದನಾಯೈ ನಮಃ। ಇಭವಕ್ತ್ರಾಯೈ ನಮಃ। ಈಪ್ಸಿತಾರ್ಥ ಪ್ರದಾಯಿನ್ಯೈ ನಮಃ। ಅಖಂಡವರದಾಯೈ ನಮಃ। ಆಮಲಕಪ್ರಿಯಾಯೈ ನಮಃ। ಅಕ್ಷ ಹೃದಯಾಯೈ ನಮಃ। ಮಂಗಳಸ್ವರೂಪಿಣ್ಯೈ ನಮಃ। ಮಹಾಮಾತ್ರೇ ನಮಃ। ಸಾವಿತ್ರ್ಯೈ ನಮಃ। ಸಾಮಗಾನಲೋಲಾಯೈ ನಮಃ। ಸಿಂಧೂರಮಜ್ಜನಾಯೈ ನಮಃ। ಶ್ರೀಹರಿತಾಳಕಗೌರ್ಯೈ ನಮಃ॥

ನಾನಾವಿಧ ಪರಿಮಳಪತ್ರಪುಷ್ಪಾಣಿ ಸಮರ್ಪಯಾಮಿ

ದೇವದ್ರುಮ ಸುರದ್ಭೂತಃ ಕೃಷ್ಣಾಗರುಸಮನ್ವಿತಃ ಆನೀತೋಯಂ ಮಯಾಧೂಪಃ ಭವಾನಿ ಪ್ರತಿಗೃಹ್ಯತಾಂ॥ ದೀಪಂ॥ ಸಾಜ್ಯಂತ್ರಿವರ್ತಿರಿತಿ (ದೀಪಂ) ಅನ್ನಂ ಚತುರ್ವಿಧಂ ಸ್ವಾದು ರಸೈಃ ಷಡ್ಭಿಃ ಸಮನ್ವಿತಂ। ನಾನಾ ಪಕ್ವಾನ್ನ ಪೂಪೈಶ್ಚ ದದಾಮಿ ವ್ಯಂಜನಾದಿಕಂ ॥ ನೈವೇದ್ಯಂ ॥ ಇದಂ ಫಲಂ ಮಯಾದೇವಿ ಸ್ಥಾಪಿತಂ ಪುರತಸ್ತವತೇನಮೇ ಸಫಲಾವಾಪ್ತಿರ್ಭವೇಜ್ಜನ್ಮನಿಜನ್ಮನಿ ॥ ಪೂರ್ಣಫಲಂ ॥ ಪೂಗೀಫಲಸಮಾಯುಕ್ತಂ ನಾಗವಲ್ಲೀ ದಳೈರ್ಯುತಂ। ಕರ್ಪೂರಚೂರ್ಣ ಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ॥ ತಾಂಬೂಲಂ॥ ಹಿರಣ್ಯಗರ್ಭೆ.....ಪ್ರಯಚ್ಛಮೆ। ಸುವರ್ಣಪುಷ್ಪಂ।

## ಅಥ ದೋರಗ್ರಂಥಿ ಪೂಜಾ

| | | | |
|---|---|---|---|
| ಉಮಾಯ್ಯೆ ನಮಃ | ಪ್ರಥಮ | ಗ್ರಂಥಿಂ | ಪೂಜಯಾಮಿ |
| ಗೌರ್ಯ್ಯೆ ನಮಃ | ದ್ವಿತೀಯ | " | " |
| ಪಾರ್ವತ್ಯ್ಯೆ ನಮಃ | ತೃತೀಯ | " | " |
| ಜಗದ್ಧಾತ್ರ್ಯೈ ನಮಃ | ಚತುರ್ಥ | " | " |
| ಜಗತ್ಪ್ರತಿಷ್ಠಾಯೈ ನಮಃ | ಪಂಚಮ | " | " |
| ಶಾಂತರೂಪಿಣ್ಯೈ ನಮಃ | ಷಷ್ಠ | " | " |
| ಹರಾಯ ನಮಃ | ಸಪ್ತಮಿ | " | " |
| ಮಹೇಶ್ವರಾಯ ನಮಃ | ಅಷ್ಟಮಿ | " | " |
| ಶೂಲಪಾಣಯೇ ನಮಃ | ನವಮ | " | " |
| ಪಿನಾಕಧೃತೇನಮಃ | ದಶಮ | " | " |
| ಶಿವಾಯ ನಮಃ | ಏಕಾದಶ | " | " |
| ಪಶುಪತೇ ನಮಃ | ದ್ವಾದಶ | " | " |
| ಮಹಾದೇವಾಯ ನಮಃ | ತ್ರಯೋದಶ | " | " |

### ಇತಿ ಗ್ರಂಥಿಪೂಜಾಂ ಸಮರ್ಪಯಾಮಿ

ದೃಢವ್ರತೆ ದೃಢಮತೆ ಭರ್ತುಶ್ಚ ಪ್ರಿಯವಾದಿನಿ। ಅವೈಧವ್ಯಂ ಚ ಸೌಭಾಗ್ಯಂ ದೇಹಿತ್ವಂ ಮಮ ಸುವ್ರತೆ ॥ ಇತಿ ದೋರಬಂಧನಂ ॥ ಯಾನಿಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ। ತಾನಿತಾನಿ ವಿನಶ್ಯಂತಿ ಪ್ರದಕ್ಷಿಣ ಪದೇಪದೇ ॥ ಪಾಪೋಽಹಂ ಪಾಪಕರ್ಮಾಹಂ ಪಾಪಾತ್ಮಾ ಪಾಪಸಂಭವಃ। ತ್ರಾಹಿಮಾಂ ಕೃಪಯಾದೇವೀ ಶರಣಾ–ಗತವತ್ಸಲೆ॥ ಅನ್ಯಥಾಶರಣಂ ನಾಸ್ತಿತ್ವಮೇವ ಶರಣಂ ಮಮ। ತಸ್ಮಾತ್ಕಾರುಣ್ಯ ಭಾವೇನ

ರಕ್ಷ ರಕ್ಷ ಮಹೇಶ್ವರಿ ॥ ಆತ್ಮಪ್ರದಕ್ಷಿಣ ನಮಸ್ಕಾರಂ ಸಮರ್ಪಯಾಮಿ ॥ ಓಂಕಾರಪೂರ್ವಕೇ ದೇವಿ ಸರ್ವದುಃಖನಿವಾರಿಣಿ ॥ ವೇದಮೂರ್ತೆ ನಮಸ್ತುಭ್ಯಂ ಅವೈಧವ್ಯಂ ಪ್ರಯಚ್ಛಮಿ ॥ ಅರ್ಘ್ಯಂ ॥ ಪತಿವ್ರತೆ ಮಹಾಭಾಗೆ ವಹ್ನಿ ಜಾತೆ ಶುಚಿಸ್ಮಿತೆ। ದೃಢವ್ರತೆ ದೃಢಮತೆ ಭರ್ತುಶ್ಚ ಪ್ರಿಯವಾದಿನಿ ॥ ಅರ್ಘ್ಯಂ ॥ ಅವೈಧವ್ಯಂ ಚ ಸೌಭಾಗ್ಯಂ ದೇಹಿತ್ವಂ ಮಮ ಸುವ್ರತೆ । ಪುತ್ರಾನ್ ಪೌತ್ರಾಂಶ್ಚ ಸೌಖ್ಯಂ ಚ ಗೃಹಾಣಾರ್ಘ್ಯಂ ನಮೋಸ್ತುತೇ ॥ ಅರ್ಘ್ಯಂ ॥ ಪುತ್ರಾನ್‌ದೇಹಿ ಧನಂದೇಹಿ ಸೌಭಾಗ್ಯಂದೇಹಿ ಸುವ್ರತೆ । ಅನ್ಯಾಂಶ್ಚ ಸರ್ವಕಾಮಾಂಶ್ಚ ದೇಹಿದೇಹಿ ನಮೋಸ್ತುತೇ ॥ ಇತಿ ಪ್ರಾರ್ಥನಾಂ ಸಮರ್ಪಯಾಮಿ ॥ ಇತಿ ಚತುರ್ಯಾಮ ಪೂಜಾಂಚ ಚತುರ್ವಾರಂ ಕುರ್ಯಾತ್ ॥ ತತೋವೈಣವಪಾತ್ರಾಣಿ ಸೌಭಾಗ್ಯದ್ರವ್ಯ ಸಹಿತಾನಿವಾಯನಾನಿದದ್ಯಾತ್ ॥ (ಈ ರೀತಿಯಾಗಿ ನಾಲ್ಕು ಯಾಮಗಳಲ್ಲಿಯೂ ನಾಲ್ಕು ಬಾರಿ ಪೂಜೆಯನ್ನು ಮಾಡಿ ಕಡೆಯಲ್ಲಿ ಮಂಗಳದ್ರವ್ಯಗಳಿಂದ ಕೂಡಿದ ಮರದ ಬಾಗಿನವನ್ನು ಗೌರಿಗೆ ಪ್ರೀತಿಯಾಗಿ ಕೊಡಬೇಕು) ಅನ್ನಂ ಸುವರ್ಣಪಾತ್ರಸ್ಥಂ ಸವಸ್ತ್ರಫಲದಕ್ಷಿಣಂ। ವಾಯನಂ ಗೌರಿ ವಿಪ್ರಾಯ ದದಾಮಿ ಪ್ರೀತಯೇ ತವ ॥ ಸೌಭಾಗ್ಯಾರೋಗ್ಯ ಕಾಮಾಯ ಸರ್ವಸಂಪತ್ಸಮೃದ್ಧಯೇ ಗೌರೀಗೌರೀಶ ತುಷ್ಟ್ಯರ್ಥಂವಾಯನಂತೆ ದದಾಮಿತಿ ॥ ಮಂತ್ರಾಭ್ಯಾಂ ವಾಯನಂ ದದ್ಯಾತ್ ॥ ತಸ್ಮಿನ್ನಹನಿಕರ್ತವ್ಯ ಪೂಜನಂ ರಜನೀಮುಖೇ । ಅರ್ಧರಾತ್ರ್ಯಾಂ ಉಮಾಕಾಂತಂ ಅರ್ಚಯೇತ್ ಜಾಗರಣಂ ಕುರ್ಯಾತ್ ॥ (ಈ ರೀತಿ ವ್ರತವನ್ನು ಆಚರಿಸಿ ಅರ್ಧರಾತ್ರಿಯಲ್ಲಿ ಉಮಾಕಾಂತನನ್ನು ಪೂಜಿಸಿ ಜಾಗರಣೆಯನ್ನು ಮಾಡಬೇಕು.)

ಇತಿ ಪೂಜಾವಿಧಾನಂ ಸಂಪೂರ್ಣಂ

## ಹರಿತಾಳಕಗೌರೀ ವ್ರತಕಥಾ

ಅರಣ್ಯದಲ್ಲಿ ವಾಸಮಾಡುತ್ತಿದ್ದ ಶೌನಕಾದಿ ಮಹಾಋಷಿಗಳು ನಿತ್ಯವೂ ಸೂತ ಪುರಾಣಿಕರಲ್ಲಿ ಬಂದು ಯಾವುದಾದರೊಂದು ವ್ರತವಿಧಾನವನ್ನೂ ಅದರ ಫಲಗಳನ್ನೂ ಕೇಳುವ ಪದ್ಧತಿಯಂತೆ ಒಂದಾನೊಂದು ದಿನ ಅವರಲ್ಲಿಗೆ ಬಂದು ಕೇಳುತ್ತಾರೆ:– ಎಲೈ ಪ್ರಾಜ್ಞನಾದ ಸೂತಮಹಾಮುನಿಯೇ ! ತಾವು ಹೇಳುತ್ತಿರುವ ವ್ರತಗಳು ಒಂದಕ್ಕಿಂತ ಒಂದು ಅಮೋಘವಾಗಿರುತ್ತವೆಯಾದುದರಿಂದ ಕೇಳಬೇಕೆಂಬ ಅಪೇಕ್ಷೆಯು ನಮ್ಮನ್ನು ಬಾಧಿಸುತ್ತಿರುವುದು. ಈ ದಿನ ಯಾವುದಾದರೂ ಒಂದು ವ್ರತವನ್ನು ಅನುಗ್ರಹಿಸಬೇಕು. ಆ ವ್ರತವು ಅತ್ಯಂತ ಗೂಢವಾದುದಾಗಿಯೂ, ಅಲ್ಪ ಶಕ್ತಿಯಿಂದ ಮಹತ್ತರವಾದ ಫಲ ಗಳನ್ನು ಕೊಡತಕ್ಕದಾಗಿಯೂ ಇರಬೇಕು ಎಂದು ಪ್ರಾರ್ಥಿಸಲು, ಸೂತಮಹಾಮುನಿಗಳು ಸಂತೋಷಚಿತ್ತರಾಗಿ ಹೇಳುತ್ತಾರೆ:– ಎಲೈ ಶೌನಕಾದಿ ಋಷಿಗಳಿರಾ ! ನೀವು ಕೇಳಿದ

ಪ್ರಶ್ನೆಯು ಬಹಳ ಯುಕ್ತಿಯುಕ್ತವಾದುದಾಗಿರುತ್ತದೆ. ಸಾವಧಾನದಿಂದ ಕೇಳುವವರಾಗಿ. ನಿಮ್ಮ ಉದ್ದಿಶ್ಯದಂತೆ ಫಲದಾಯಕವಾದ ಒಂದು ವ್ರತವನ್ನು ಹೇಳುತ್ತೇನೆ. ಈಗ ನೀವು ನನ್ನನ್ನು ಕುರಿತು ಯಾವ ರೀತಿ ಪ್ರಶ್ನೆಯನ್ನು ಮಾಡಿದಿರೋ ಹಾಗೆಯೇ ಪೂರ್ವದಲ್ಲಿ ಪಾರ್ವತೀದೇವಿಯು ಪ್ರಮಥಗಣಗಳಿಂದಲೂ, ಮುನಿಗಳಿಂದಲೂ ಪರಿವೃತನಾದ ಈಶ್ವರನನ್ನು ಪ್ರಾರ್ಥಿಸಿದಳು, ಹೇಗೆಂದರೆ–ಪರಾತ್ಪರನಾದ ಎಲೈ ಸಾಂಬಮೂರ್ತಿಯೇ! ಲೋಕದಲ್ಲಿ ಅಲ್ಪಪ್ರಯಾಸದಿಂದ ಅಧಿಕ ಫಲವನ್ನು ಕೊಡುವಂಥಾ ಒಂದು ವ್ರತವನ್ನು ದಯವಿಟ್ಟು ನನಗೆ ತಿಳಿಸಬೇಕು ಮತ್ತು ಯಾವ ವ್ರತಾಚರಣೆಯಿಂದ ನೀನು ನನ್ನನ್ನು ವರಿಸಿದೆ ? ಆ ಸಂಗತಿಯನ್ನು ಸಮಗ್ರವಾಗಿ ತಿಳಿಸಬೇಕೆಂದು ಪ್ರಾರ್ಥಿಸಿದ ಪತ್ನಿಯನ್ನು ಕುರಿತು ಸಾಂಬಮೂರ್ತಿಯು ಹೇಳುತ್ತಾನೆ:– ಎಲೈ ಪರ್ವತರಾಜ ನಂದಿನಿಯೇ! ನಿನ್ನ ಇಷ್ಟದಂತೆ ಉತ್ತಮೋತ್ತಮವಾದ ಒಂದು ವ್ರತವನ್ನು ನಿನಗೆ ಹೇಳುತ್ತೇನೆ ಕೇಳುವವಳಾಗು. ಯಾವುದು ಅತ್ಯಂತ ಗೋಪ್ಯವಾದುದೋ ಅದನ್ನೇ ನಿನಗೆ ತಿಳಿಸುತ್ತೇನೆ. ವರ್ಣಗಳಲ್ಲಿ ಬ್ರಾಹ್ಮಣವರ್ಣವು ಶ್ರೇಷ್ಠವೆನಿಸಿರುವಂತೆಯೂ, ನಕ್ಷತ್ರಗಳಲ್ಲಿ ಚಂದ್ರನು ಉತ್ತಮನಾದಂತೆಯೂ, ಗ್ರಹಗಳ ರಾಶಿಯಲ್ಲಿ ಸೂರ್ಯನು ಉಚ್ಚಪದವಿಯನ್ನು ಪಡೆದಂತೆಯೂ, ವೇದಗಳ ಗುಂಪಿನಲ್ಲಿ ಸಾಮವೇದವು ಅಧಿಕವನ್ನು ಹೊಂದಿದಂತೆಯೂ, ದೇವಕೋಟಿಯಲ್ಲಿ ಶ್ರೀಮನ್ನಾರಾಯಣಮೂರ್ತಿಯು ಅಗ್ರನೆನಿಸಿಕೊಂಡಂತೆಯೂ, ಸರ್ವೇಂದ್ರಿಯಗಳಲ್ಲಿ ಮನಸ್ಸು ಉಚ್ಚಸ್ಥಾನವನ್ನು ಹೊಂದಿದಂತೆಯೂ ನಾನು ಈ ಧರ್ಮಾಸನವನ್ನು ಹೇಗೆ ಧರಿಸಿದೆನೆಂಬುದನ್ನು ವಿವರವಾಗಿ ತಿಳಿಸುತ್ತೇನೆ. ಈ ಸ್ಥಾನವು ನನಗೆ ದೊರೆಯುವುದಕ್ಕಾಗಿ ನಾನು ಆಚರಿಸಿದ ವ್ರತಮಹಿಮೆಯನ್ನೇ ಹೇಳುವೆನು ಕೇಳುವವಳಾಗು. ಭಾದ್ರಪದ ಮಾಸದ ತದಿಗೆಯ ದಿನ ಹಸ್ತಾನಕ್ಷತ್ರವು ಸೇರಿರಲಾಗಿ ಅಂತಹ ದಿನವು ಸಮಸ್ತವಾದ ಪಾಪಗಳನ್ನೂ ಪರಿಹರಿಸತಕ್ಕದೆಂದು ಎಲ್ಲರೂ ನಂಬತಕ್ಕದ್ದು. ಆದಿಯಲ್ಲಿ ನೀನು ಹಿಮಪರ್ವತದಲ್ಲಿ ಆಚರಿಸಿದ ವ್ರತಪ್ರಭಾವವನ್ನೇ ಈಗ ಅರುಹುವೆನು: ಸಮಾಧಾನ ಚಿತ್ತದಿಂದ ಕೇಳುವವಳಾಗು ಎಂದು ಆಜ್ಞಾಪಿಸಲು, ಪಾರ್ವತಿಯು ಆನಂದದಿಂದ ಕೂಡಿದವಳಾಗಿ ಮಹಾನುಭಾವನೇ! ಆದಿಯಲ್ಲಿ ನಾನು ಆಚರಿಸಿದ ವ್ರತವ್ಯಾವುದು? ಅದರ ಪ್ರಭಾವವೇನು? ಇದರ ವಿಷಯಗಳೆಲ್ಲವನ್ನೂ ನಿಮ್ಮಿಂದಲೇ ಸಮಗ್ರವಾಗಿ ತಿಳಿಯಬೇಕೆಂಬ ಅಭಿಲಾಷೆಯು ನನಗೆ ಸಂಪೂರ್ಣವಾಗಿ ಉಂಟು. ದಯವಿಟ್ಟು ಅದರ ಮಹಿಮೆಯನ್ನು ತಿಳಿಸಬೇಕೆಂದು ಪ್ರಾರ್ಥಿಸಲು, ಈಶ್ವರನು ಪ್ರಸನ್ನನಾಗಿ ಪಾರ್ವತಿಯನ್ನು ಕುರಿತು ಎಲೈ ಶಾಂಭವಿಯೇ ! ಈ ಪ್ರಪಂಚದಲ್ಲಿ ವಿಂಧ್ಯ ಪರ್ವತವು ಅತ್ಯಂತ ಶ್ರೇಷ್ಠವೆನಿಸಿಕೊಂಡಿರುವುದು. ಹಿಮವಂತನು ಇದಕ್ಕಿಂತಲೂ ಶ್ರೇಷ್ಠವಾದುದ ರಿಂದಲೇ ಗಿರಿರಾಜನೆನಿಸಿಕೊಂಡಿರುವನು. ಈ ಹಿಮವತ್ಪರ್ವತವು ಅನೇಕ ನದಿ ಗಳಿಗೂ, ಫಲವೃಕ್ಷಗಳಿಗೂ, ಧಾತುವರ್ಗಗಳಿಗೂ, ಅನೇಕ ಜಾತಿಯ ಪಕ್ಷಿಗಳಿಗೂ

ಆಶ್ರಯಸ್ಥಾನವಾಗಿದೆ. ಆ ಪ್ರದೇಶದಲ್ಲಿ ದೇವ, ಗಂಧರ್ವ, ವಿದ್ಯಾಧರ, ಕಿನ್ನರ, ಕಿಂಪುರುಷರು ಸದಾ ಸಂಚಾರ ಮಾಡುತ್ತಿರುತ್ತಾರೆ. ಗಂಧರ್ವರು ಗಾನ ಮಾಡುತ್ತಿರುತ್ತಾರೆ. ಮತ್ತು ಸ್ಫಟಿಕ ಮಣಿಗಳೂ, ಉತ್ತಮವಾದ ಸುವರ್ಣ ಶಿಖರಗಳು, ವಜ್ರವೈಢೂರ್ಯಾದಿ ನವರತ್ನ ಶಿಖರಗಳೂ ಈ ಪರ್ವತದಲ್ಲಿ ತುಂಬಿ ತುಳುಕಾಡುತ್ತಿ ರುವುವು. ಅಲ್ಲದೆ ಅಲ್ಲಿ ಯಾವಾಗಲೂ ಹಿಮವು ಆವರಿಸಿಕೊಂಡೇ ಇರುವುದು. ಲೋಕಪಾವನಕಾರಿಯಾದ ಗಂಗೆಯು ಇಲ್ಲಿಯೇ ಉದ್ಭವವಾಗುವುದು. ಪರಮಪುಣ್ಯಕರವಾದ ಗಂಗೆಯ ಪ್ರವಾಹದ ರಭಸವು ಎಲ್ಲರಿಗೂ ಭೀತಿಯನ್ನುಂಟುಮಾಡುತ್ತಿರುವುದು. ಇಂತಹ ಅಮೋಘವಾದ ಪರ್ವತದಲ್ಲಿ ನೀನು ಚಿಕ್ಕವಯಸ್ಸಿನಲ್ಲಿ ತಪಸ್ಸನ್ನು ಮಾಡುತ್ತಿರಲಿಲ್ಲವೇ? ಆಗ ನೀನು ಧೂಮದಪಾನದಿಂದ ಹನ್ನೆರಡು ವರ್ಷಗಳವರೆಗೂ, ಅರವತ್ತುನಾಲ್ಕು ವರ್ಷಗಳು ನಿರಾಹಾರದಿಂದಲೂ, ಪರ್ಣಾಹಾರದಿಂದಲೂ ಇತರರಿಂದ ಆಚರಿಸಲಸಾಧ್ಯವೂ, ಅತ್ಯುಗ್ರವೂ ಆದ ತಪಸ್ಸನ್ನು ಮಾಡಲಿಲ್ಲವೇ? ಮಾಘಮಾಸದಲ್ಲಿ ಸ್ನಾನವನ್ನೂ, ವೈಶಾಖಮಾಸದಲ್ಲಿ ಅಗ್ನಿಸೇವನೆಯನ್ನೂ, ಶ್ರಾವಣಮಾಸದಲ್ಲಿ ನಿರಶನ ವ್ರತವನ್ನೂ ಮಾಡಲು, ನೀನು ಮಾಡುತ್ತಿರುವ ಅತ್ಯುಗ್ರವಾದ ತಪಸ್ಸನ್ನು ನೋಡಿ ನಿಮ್ಮ ತಂದೆಯು ಯಾರಿಗೆ ನಿನ್ನನ್ನು ಕೊಟ್ಟು ಲಗ್ನವನ್ನು ಮಾಡಬೇಕೆಂದು ಆಲೋಚನೆಯನ್ನು ಮಾಡುತ್ತಿರಲು ಅಲ್ಲಿಗೆ ಬ್ರಹ್ಮಮಾನಸ ಪುತ್ರನಾಗಿಯೂ, ತ್ರಿಲೋಕಸಂಚಾರಿಯಾಗಿಯೂ ಇರುವ ನಾರದ ಮಹಾಮುನಿಯು ಬಂದು ನಿಮ್ಮ ತಂದೆಯನ್ನು ನೋಡಿದನು. ಈತನನ್ನು ನೋಡುತ್ತಲೇ ಆನಂದಗೊಂಡವನಾಗಿ ನಿಮ್ಮ ತಂದೆಯು ಯಥೋಚಿತ ಉಪಚಾರ ಗಳನ್ನು ಮಾಡಿ ಬದ್ಧಾಂಜಲಿಯಾಗಿ ಆತನನ್ನು ಕುರಿತು ಎಲೈ ಮಹಾನುಭಾವನಾದ ದೇವಋಷಿಯೇ, ತಮ್ಮ ದರ್ಶನದಿಂದ ನಾನು ಧನ್ಯನಾಗಿರುತ್ತೇನೆ. ತ್ರೈಲೋಕ್ಯ ಸಂಚಾರಿಯಾದ ತಮ್ಮ ಆಗಮನಕ್ಕೆ ಕಾರಣವನ್ನು ತಿಳಿಸಬೇಕೆಂದು ಪ್ರಾರ್ಥಿಸಲು, ನಾರದ ಮಹಾಮುನಿಯು ಆನಂದದಿಂದ ಈ ರೀತಿ ಹೇಳತೊಡಗಿದನು :– ಎಲೈ ಗಿರಿರಾಜನೇ ನಿನ್ನ ಆದರಣೆಯು ಸ್ತೋತ್ರಾರ್ಹವಾದುದು. ನನ್ನನ್ನು ಶೇಷಶಾಯಿಯಾದ ಶ್ರೀಮನ್ನಾರಾಯಣಮೂರ್ತಿಯು ಇಲ್ಲಿಗೆ ಕಳುಹಿಸಿರುತ್ತಾನೆ. ಇತರರು ಆಚರಿಸಲು ಅಸಾಧ್ಯವಾದ ತಪಸ್ಸನ್ನು ಮಾಡುತ್ತಿರುವ ನಿನ್ನ ಮಗಳನ್ನು ಯೋಗ್ಯನಾದ ವರನಿಗೆ ಕೊಟ್ಟು ಲಗ್ನವನ್ನು ಮಾಡಬೇಕಾಗಿರುವುದು ನಿನ್ನ ಪ್ರಥಮ ಕಾರ್ಯವಾಗಿರುವುದಲ್ಲವೇ ? ಆದುದರಿಂದ ತ್ರಿಮೂರ್ತಿಗಳಲ್ಲಿ ವಿಷ್ಣುವು ಶ್ರೇಷ್ಠನೆಂಬುದು ಯಾರಿಗೂ ತಿಳಿಯದ ವಿಷಯವಲ್ಲ. ಆತನಿಗೆ ಈಕೆಯನ್ನು ಕೊಟ್ಟು ಲಗ್ನಮಾಡುವುದು ಶ್ರೇಯಸ್ಕರವೆಂದು ತಿಳಿದು ಆ ವಿಚಾರವನ್ನು ತಿಳಿಸುವುದಕ್ಕಾಗಿ ಬಂದಿರುವೆನೆಂದು ಹೇಳಲು, ಹಿಮವಂತನು ಸಂತೋಷಚಿತ್ತನಾಗಿ ನಾರದರೆ; ತಮ್ಮ ಮಾತಿಗೆ ನಾನೆಂದಿಗೂ ಪ್ರತಿ ಮಾತನ್ನು ಹೇಳಲಾರೆನು. ನಮ್ಮ ಗೌರಿಯನ್ನು ಮಹಾವಿಷ್ಣುವಿಗೆ ಕೊಡುವುದರಲ್ಲಿ ಯಾವ ಯೋಚನೆಯೂ ಇಲ್ಲವೆಂದು ಹೇಳಲು, ಸಂತೋಷಚಿತ್ತನಾದ ನಾರದನು ಅಲ್ಲಿಂದ




ಹೊರಟು ಶಂಖಚಕ್ರಗಧಾಧರನಾಗಿಯೂ, ನಾಗಶಾಯಿಯಾಗಿಯೂ ಇರುವ ಶ್ರೀಮಹಾವಿಷ್ಣುವಿನ ಬಳಿಗೆ ಬಂದು ನಮಸ್ಕಾರವನ್ನು ಮಾಡಿ ಅಂಜಲೀಬದ್ಧನಾಗಿ ಈ ರೀತಿ ಹೇಳಿದನು :

ಎಲೈ ಮಹಾನುಭಾವನೇ! ನಿನಗೆ ಪರ್ವತರಾಜನ ಪುತ್ರಿಯಾದ ಪಾರ್ವತಿಯನ್ನು ಕೊಟ್ಟು ಲಗ್ನಮಾಡುವಂತೆ ವಿವಾಹವನ್ನು ನಿಶ್ಚೈಸಿ ಬಂದಿರುವೆನೆಂದು ಹೇಳಿದನು.

ಇತ್ತ ಪರ್ವತರಾಜನು ತನ್ನ ಮಗಳಾದ ಪಾರ್ವತಿಯನ್ನು ಕುರಿತು ಸಂತೋಷ ಚಿತ್ತನಾಗಿ ಹೇಳುತ್ತಾನೆ :

ಮಗಳೇ! ನಿನ್ನನ್ನು ದೇವತೆಗಳಲ್ಲೆಲ್ಲಾ ಉಚ್ಚಸ್ಥಾನವನ್ನು ಹೊಂದಿರುವ ಮಹಾವಿಷ್ಣುವಿಗೆ ಕೊಡಲು ಪ್ರಯತ್ನ ಮಾಡಿರುತ್ತೇನೆಂದು ಹೇಳಿದ ಮಾತನ್ನು ಕೇಳುತ್ತಲೇ ಪಾರ್ವತಿಯು ಅತ್ಯಂತ ದುಃಖದಿಂದ ನೆಲದಲ್ಲಿ ಬಿದ್ದು ಹೊರಳಾಡುತ್ತಿರಲು, ಆಕೆಯ ಸಖಿಯು ಸಂತೈಸಿ, ಅಮ್ಮಾ! ಶ್ರೀಮನ್ ನಾರಾಯಣಮೂರ್ತಿಯನ್ನು ಲಗ್ನವಾಗೆಂದು ಹೇಳಿದ ಮಾತ್ರಕ್ಕೆ ನೀನು ಈ ರೀತಿ ಪ್ರಲಾಪಿಸಲು ಕಾರಣವೇನೆಂದು ಕೇಳಲು, ಪಾರ್ವತಿಯು ಸಖಿಯನ್ನು ಕುರಿತು ಹೇಳುತ್ತಾಳೆ :–

ಸಖೀರತ್ನವೇ! ನಾನು ಪ್ರಮಥಗಣಾಧಿಪನಾದ ಈಶ್ವರನನ್ನು ಲಗ್ನಮಾಡಿ ಕೊಳ್ಳಬೇಕೆಂದು ಈ ಘೋರವಾದ ತಪಸ್ಸನ್ನು ಮಾಡುತ್ತಿರಲು ನಮ್ಮ ತಂದೆಯು ನಾರಾಯಣಮೂರ್ತಿಗೆ ಕೊಟ್ಟು ಲಗ್ನ ಮಾಡಬೇಕೆಂದಿರುವನು. ಇದರಿಂದ ನಾನು ಪ್ರಾಣಗಳನ್ನು ಕಳೆದುಕೊಳ್ಳಬೇಕಾಗುವುದೆಂದು ಹೇಳಲು, ಸಖಿಯು ಆಕೆಯನ್ನು ಸಂತೈಸಿ ಅಮ್ಮಾ ಇದಕ್ಕಾಗಿ ನೀನು ಇಷ್ಟು ಚಿಂತಿಸಲೇಕೆ? ನಾವಿಬ್ಬರೂ ಅರಣ್ಯವನ್ನು ಪ್ರವೇಶಿಸೋಣ; ನಿನ್ನ ಇಷ್ಟವು ಸಲ್ಲಿಸುವುದಕ್ಕಾಗಿ ನಾನೂ ನಿನಗೆ ಸಹಾಯಕಳಾಗಿರುವೆನೆಂದು ಹೇಳಿ, ಪರ್ವತರಾಜನಿಗೆ ಕಾಣದಂತೆ ಅರ್ಧರಾತ್ರಿಯ ಸಮಯದಲ್ಲಿ ಇಬ್ಬರೂ ಅರಣ್ಯಕ್ಕೆ ಹೋದರು. ಇತ್ತ ಪರ್ವತರಾಜನು ಬೆಳಿಗ್ಗೆ ಎದ್ದು ಸುಕುಮಾರಿಯಾದ ಮಗಳು ಕಾಣದಿರಲು ಚಿಂತಾಕ್ರಾಂತನಾಗಿ ಮನೆಮನೆಯಲ್ಲಿಯೂ ಆಕೆಯನ್ನು ಹುಡುಕಲಾರಂಭಿಸಿದನು, ಅಲ್ಲೆಲ್ಲಿಯೂ ಆಕೆಯ ಸುಳಿವೇ ಕಾಣದಿರಲು ಅತ್ಯಂತ ವ್ಯಥೆಯಿಂದ ಮೂರ್ಛೆಗೊಂಡು ನೆಲದಲ್ಲಿ ಬಿದ್ದು ರೋಧಿಸುತ್ತಿರಲು ಎಲ್ಲರೂ ಬಂದು ಆತನನ್ನು ಸಂತೈಸಿ ಚಿಂತೆಗೆ ಕಾರಣವೇನೆಂದು ಕೇಳಲು, ಹಿಮವಂತನು ಅವರನ್ನು ಕುರಿತು ಹೇಳುತ್ತಾನೆ :–

ಎಲೈ ಪ್ರಜೆಗಳಿರಾ ! ಕೇಳಿರಿ, ನನ್ನ ಮೋಹದ ಪುತ್ರಿಯನ್ನು ಯಾರಾದರೂ ದುರ್ಮಾರ್ಗರು ಅಪಹರಿಸಿದರೋ ಅಥವಾ ಸಿಂಹ ವ್ಯಾಘ್ರಾದಿಗಳಿಗೆ ತುತ್ತಾದಳೋ ಯಾವುದೊಂದು ನಿರ್ಧಾರವಾಗದೆ ಈ ರೀತಿ ತಪಿಸುತ್ತಿದ್ದೇನೆಂದು ಹೇಳಿ ಮತ್ತೆ ಮಗಳ ಸ್ಮರಣೆಯು ಬಂದಕೂಡಲೇ ದೊಪ್ಪನೆ ನೆಲದಮೇಲೆ ಬಿದ್ದು ಪ್ರಲಾಪಿಸುತ್ತಾ ಮತ್ತೆ ಚೇತರಿಸಿಕೊಂಡು ಸುಕುಮಾರಿಯನ್ನು ಹುಡುಕುತ್ತಾ ಸಿಂಹ ವ್ಯಾಘ್ರಾದಿಗಳಿಂದ

ಪರಿವೃತವಾದ ಅರಣ್ಯವನ್ನು ಸುತ್ತುತ್ತಿರಲು ಅಲ್ಲೊಂದು ಗುಹೆಯು ಕಾಣಿಸಿತು. ಹಿಮವಂತನು ಆ ಗುಹೆಯನ್ನು ಪ್ರವೇಶ ಮಾಡಲು ಅಲ್ಲಿ ಆಹಾರ ನಿದ್ರೆಗಳನ್ನಗಲಿ ತನ್ನ ಸಖಿಯೊಡನೆ ತಪಸ್ಸನ್ನು ಮಾಡುತ್ತಿದ್ದ ಮಗಳಾದ ನಿನ್ನನ್ನು ನೋಡಿದನು. ಆ ದಿನವೂ ಹಸ್ತಾನಕ್ಷತ್ರದಿಂದ ಕೂಡಿದ ಭಾದ್ರಪದ ಶುದ್ಧ ತದಿಗೆಯಾಗಿತ್ತು, ಅಲ್ಲಿ ನೀನು ಮಾಡುತ್ತಿದ್ದ ಗೌರೀವ್ರತವನ್ನು ನೋಡಿ ನಾನು ಪ್ರಸನ್ನನಾಗಲು, ಆ ಪ್ರದೇಶದಲ್ಲಿ ಸಖಿಯೊಡನೆ ನೀನು ಸುಖವಾಗಿಯೇ ಇದ್ದೆ. ನಿನ್ನ ಇಷ್ಟಾರ್ಥಗಳನ್ನು ಕೇಳುವಂತೆ ಹೇಳಲು, ನೀನು ನನ್ನನ್ನು ಕುರಿತು ಎಲೈ ಪರಮೇಶ್ವರನೇ! ನೀನು ಪ್ರಸನ್ನನಾಗಿರುವುದೇ ನಿಜವಾದರೆ ನನಗೆ ಪತಿಯಾಗಬೇಕೆಂದು ಪ್ರಾರ್ಥಿಸಲು ಹಾಗೆಯೇ ಆಗಲೆಂದು ವರವನ್ನು ಕೊಟ್ಟು ನಾನು ಇಲ್ಲಿಗೆ ಬಂದೆನು.

ನಂತರ ವ್ರತಸಮಾಪ್ತಿಯನ್ನು ಮಾಡಿ ಆರೋಗಣೆಯಿಂದ ನೀನೂ ನಿನ್ನ ಸಖಿಯೂ ನದೀತೀರದಲ್ಲಿ ನಿಶ್ಚಿಂತೆಯಿಂದ ಮಲಗಿಕೊಂಡಿರಿ.

ನಿಮ್ಮ ತಂದೆಯಾದ ಹಿಮವಂತನು ಆ ಪ್ರದೇಶದಲ್ಲೆಲ್ಲಾ ಸುತ್ತಾಡುತ್ತಾ ನದೀ ತೀರದಲ್ಲಿರಲು, ಸಖಿಯೊಂದಿಗಿರುವ ನಿನ್ನನ್ನು ಕಂಡು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ದುಃಖಪಡುತ್ತಿದ್ದನು. ಸಿಂಹವ್ಯಾಘ್ರಾದಿ ಮೃಗಗಳಿಂದ ಕೂಡಿದ ಮಹಾರಣ್ಯಕ್ಕೆ ಸುಪುತ್ರಿಯಾದ ನೀನು ಬರಲು ಕಾರಣವೇನೆಂದು ದುಃಖಿಸುತ್ತಿರಲು ಪಾರ್ವತಿಯು ತಂದೆಯೊಡನೆ ಹೇಳುತ್ತಾಳೆ :–

ಜನಕನೇ! ನೀನು ನನ್ನನ್ನು ಮಹಾವಿಷ್ಣುವಿಗೆ ಕೊಟ್ಟು ಮದುವೆಯನ್ನು ಮಾಡುತ್ತೇನೆಂದು ಹೇಳಿದೆ. ನನಗೆ ಸಮಾಧಾನವಾಗಲಿಲ್ಲ. ನಿನ್ನ ಉದ್ದಿಶ್ಯದಂತೆ ನಡೆಯಲು ಇಷ್ಟವಿಲ್ಲವಾದ್ದರಿಂದ ಪ್ರತಿ ಹೇಳುವ ಸಾಮಸವಿಲ್ಲದೆ ಅರಣ್ಯಕ್ಕೆ ಬಂದಿರುತ್ತೇನೆ. ನನಗೆ ಮಹೇಶ್ವರನನ್ನು ಲಗ್ನವಾಗಲು ಇಷ್ಟವುಂಟು. ನೀನು ಆ ರೀತಿ ನಡೆಯುವುದಾದರೆ ನಾನು ಮನೆಗೆ ಬರುತ್ತೇನೆ. ಇಲ್ಲವಾದರೆ ಈಗಲೂ ಬರುವುದಿಲ್ಲ, ಇಲ್ಲಿಯೇ ಇದ್ದುಬಿಡುತ್ತೇನೆನ್ನಲು, ಹಿಮವಂತನು ಮಗಳ ಮೇಲಣ ಮಮತೆಯಿಂದ ಆಕೆಯ ಉದ್ದಿಶ್ಯಕ್ಕೆ ವ್ಯತಿರಿಕ್ತವಾಗಿ ನಡೆಯಲಾರದೆ ನಿನ್ನ ಇಷ್ಟದಂತೆ ನಡೆಯುವುದಾಗಿ ತಿಳಿಸಿ ಮನೆಗೆ ಕರೆದುಕೊಂಡು ಬಂದು ನನಗೆ ಕೊಟ್ಟು ಲಗ್ನ ಮಾಡಿದನು.

ಎಲೈ ಗಿರಿಜಾನಂದಿನಿಯೇ! ವ್ರತದ ಪ್ರಭಾವದಿಂದ ನೀನು ಸಮಸ್ತವಾದ ಸೌಭಾಗ್ಯಗಳನ್ನೂ ಹೊಂದಿರುತ್ತೀಯೆ. ಇಂತಹ ಅಮೋಘವಾದ ವ್ರತವನ್ನು ಇದು ವರೆವಿಗೂ ಯಾರಿಗೂ ಹೇಳಿರಲಿಲ್ಲವು. ಇದನ್ನು ಹರಿತಾಳಕಗೌರೀ ವ್ರತ ಎಂದು ಹೇಳುತ್ತಾರೆ ಎಂದು ಪರಮೇಶ್ವರನು ಪಾರ್ವತಿಯೊಡನೆ ಹೇಳಿದನು.

ಈ ಮಾತನ್ನು ಕೇಳಿ ಪಾರ್ವತಿಯು ಪತಿಯನ್ನು ಕುರಿತು ಈ ವ್ರತವನ್ನು ಮಾಡತಕ್ಕ ವಿಧಾನವನ್ನು ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥಿಸಲು, ಈಶ್ವರನು ಸಂತೋಷಚಿತ್ತನಾಗಿ ಹೇಳುತ್ತಾನೆ:–

ದಾಕ್ಷಾಯಿಣಿಯೇ! ಸೌಭಾಗ್ಯವೂ, ಸಂಪತ್ತು ಬೇಕೆಂದು ಬಯಸುವ ಸುವಾಸಿನಿಯರು ಈ ವ್ರತವನ್ನು ಆಚರಿಸಲೇಬೇಕು. ವ್ರತಾಚರಣೆಯನ್ನು ಮಾಡತಕ್ಕ ಸುವಾಸಿನಿಯರು ತಮ್ಮ ಮನೆಯ ಉಚ್ಚಸ್ಥಾನದಲ್ಲಿ ರಮ್ಯವಾದ ಒಂದು ಮಂಟಪವನ್ನು ನಿರ್ಮಿಸಿ ಆ ಮಂಟಪವನ್ನು ತೋರಣಾದಿಗಳಿಂದಲೂ, ಕದಳೀಸ್ತಂಭಗಳಿಂದಲೂ ಅಲಂಕರಿಸಬೇಕು. ಶಂಖ, ಭೇರಿ, ಮೃದಂಗ ಮೊದಲಾದ ವಾದ್ಯವಿಶೇಷಗಳಿಂದಲೂ, ನೃತ್ಯಗೀತಾದಿಗಳಿಂದಲೂ, ಅನೇಕ ಬಗೆಗಳಾದ ಪುಷ್ಪಪತ್ರಗಳ ಸಂಕುಲದಿಂದಲೂ, ಶ್ರೇಷ್ಠವಾದ ಪರಿಮಳಗಂಧ, ಧೂಪದೀಪ ನೈವೇದ್ಯಗಳಿಂದಲೂ ದೇವಿಯನ್ನು ತೃಪ್ತಿಗೊಳಿಸಿ ರಾತ್ರಿ ಜಾಗರಣೆಯನ್ನು ಮಾಡಬೇಕು. ನಾರಿಕೇಳ, ಪೂಗೀಫಲ, ಜಂಭೀರಾದಿಗಳನ್ನೂ, ನಾನಾವಿಧಗಳಾದ ಕಂದಮೂಲಗಳನ್ನೂ ದೇವಿಗೆ ಅರ್ಪಿಸಬೇಕು. ಮಂಗಳದಾಯಕನಾಗಿಯೂ, ಶಾಂತಮೂರ್ತಿಯಾಗಿಯೂ, ಪಂಚಮುಖಗಳಿಂದ ಪರಿವೃತನಾಗಿಯೂ, ನಂದಿ ಭೃಂಗಿ ಮಹಾಕಾಲ ಗಣಗಳಿಂದ ಕೂಡಿದವನಾಗಿಯೂ ಇರುವ ಪರಮೇಶ್ವರನಿಗೂ, ಶರ್ವಾಣಿಯೂ, ಸರ್ವಮಂಗಳದಾಯಕಿಯೂ ಜಗನ್ಮಯ ಸ್ವರೂಪಿಣಿಯೂ ಆಗಿರುವ ಪಾರ್ವತೀದೇವಿಗೂ ನಮಸ್ಕಾರ ಮಾಡಬೇಕು.

ಬ್ರಹ್ಮಚರ್ಯವ್ರತಳಾಗಿಯೂ, ಲೋಕಪರಿಪಾಲನಾಶಕ್ತಳಾಗಿಯೂ, ಸಂಸಾರಭಯದಿಂದ ಪರಿಹಾರವನ್ನು ಮಾಡತಕ್ಕವಳಾಗಿಯೂ ಇರುವ ಪಾರ್ವತೀದೇವಿಯೇ! ರಾಜ್ಯಕ್ಕೆ ಸಕಲ ಸೌಭಾಗ್ಯಗಳನ್ನೂ ಕೊಟ್ಟು ಕಾಪಾಡಬೇಕೆಂದು ದೇವಿಯನ್ನು ಪ್ರಾರ್ಥಿಸಬೇಕು.

ಎಲೈ ಪರ್ವತನಂದಿನಿಯೇ! ನಮ್ಮಿಬ್ಬರನ್ನೂ ಯಥಾವಿಧಿಯಾಗಿ ಭಕ್ತಿಯಿಂದ ಅರ್ಚಿಸಿ ಶಕ್ತಿಗೆ ಲೋಪವನ್ನು ಮಾಡದಂತೆ ಬ್ರಾಹ್ಮಣರವನ್ನು ಅನ್ನದಾನ ದಕ್ಷಿಣೆಗಳಿಂದ ಸಂತೋಷಗೊಳಿಸಬೇಕು. ಅಲ್ಲದೆ ಇತರರಿಗೂ ಯಥೋಕ್ತ ದಾನಧರ್ಮಗಳನ್ನು ಕೊಡಬೇಕು ಎಂದು ಹೇಳಿದನು.

ಈ ರೀತಿಯಾಗಿ ಯಾರು ಈ ವ್ರತವನ್ನು ಭಕ್ತಿಯಿಂದ ಆಚರಿಸಿ ಕಥೆಯನ್ನು ಕೇಳುತ್ತಾರೆಯೋ ಅಂತಹವರು ತಮ್ಮ ಸಮಸ್ತ ಪಾಪಗಳನ್ನೂ ಪರಿಹಾರ ಮಾಡಿಕೊಳ್ಳುತ್ತಾರೆ. ಅಲ್ಲದೆ ಆ ಜನ್ಮದಿಂದ ಏಳು ಜನ್ಮಗಳವರೆವಿಗೂ ರಾಜ್ಯಲಾಭವನ್ನು ಪಡೆಯುವುದಲ್ಲದೆ ಸ್ತ್ರೀಯರು ಸೌಭಾಗ್ಯಶಾಲಿಗಳಾಗಿರುತ್ತಾರೆ. ದರಿದ್ರವಾಗಲಿ, ಪುತ್ರಶೋಕವಾಗಲಿ ಅವರನ್ನು ಪೀಡಿಸುವುದಿಲ್ಲ. ಯಾವ ಹೆಂಗಸು ಆ ತದಿಗೆಯ ದಿನ ಊಟವನ್ನು ಮಾಡುತ್ತಾಳೋ ಆಕೆಯು ಏಳು ಜನ್ಮಗಳವರೆವಿಗೂ ಬಡತನವನ್ನು ಅನುಭವಿಸಬೇಕಾಗುತ್ತದೆ. ಆದುದರಿಂದ ಅಮೋಘವಾದ ಈ ವ್ರತವನ್ನು ಭಕ್ತಿಯಿಂದ ಆಚರಿಸಿ ಬೆಳ್ಳಿಯಿಂದಾಗಲೀ ಬಂಗಾರದಿಂದಾಗಲೀ ತಾಮ್ರದಿಂದಾಗಲೀ ಶಕ್ತಿಯಿಲ್ಲದಿದ್ದರೆ ಮಣ್ಣಿನಿಂದಾಗಲೀ ಮಾಡಿದ ಪಾತ್ರೆಗಳನ್ನು ಸುವಸ್ತ್ರ ಫಲ ದಕ್ಷಿಣಾದಿಗಳ ಸಹಿತ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟು ಆ ದಿನ ಉಪವಾಸವನ್ನೂ ಜಾಗರಣೆಯನ್ನೂ ಮಾಡಬೇಕು. ಎರಡನೆಯ ದಿನ ಆರೋಗಣೆಯನ್ನು ಮಾಡಬೇಕು.

ಯಾವ ಹೆಂಗಸು ಈ ವ್ರತವನ್ನು ಭಕ್ತಿಯಿಂದ ಆಚರಿಸುತ್ತಾಳೆಯೋ ಆಕೆಯು ಗೌರಿಯಂತೆ ಸಕಲ ಸಂಪತ್ತುಗಳನ್ನೂ ಹೊಂದುತ್ತಾಳೆ.

ಈ ವ್ರತವೊಂದನ್ನು ಮಾಡುವುದರಿಂದ ಸಾವಿರ ಅಶ್ವಮೇಧಗಳನ್ನು ಮಾಡಿದ ಫಲವೂ, ನೂರು ವಾಜಪೇಯಗಳ ಫಲವೂ ನಿರಾಯಾಸವಾಗಿ ದೊರೆಯುವುದು. ಕಥೆಯನ್ನು ಭಕ್ತಿಯಿಂದ ಕೇಳಿದವರಿಗೂ ಖಂಡಿತವಾಗಿ ಈ ಫಲವುಂಟಾಗುತ್ತದೆ ಎಂದು ಈಶ್ವರನು ಪಾರ್ವತಿಗೆ ವಿಸ್ತಾರವಾಗಿ ಹೇಳಿದನು. ಈ ವ್ರತಾನುಷ್ಠಾನ ಮಾತ್ರದಿಂದ ಕೋಟಿ ಯಜ್ಞಗಳ ಫಲವು ತಪ್ಪದೆ ಸಿದ್ಧಿಸುತ್ತದೆ. ಅದರಲ್ಲಿ ಸಂದೇಹವೇ ಇಲ್ಲ ಎಂದು ಪರಮೇಶ್ವರನು ಪಾರ್ವತಿಗೆ ಹೇಳಿದನು ಎಂಬಲ್ಲಿಗೆ,

ಭವಿಷ್ಯೋತ್ತರಪುರಾಣದ ಶಿವ-ಗೌರಿ ಸಂವಾದದ ಹರಿತಾಳಕಗೌರೀ ವ್ರತಕಥೆಯು ಸಂಪೂರ್ಣವಾದುದು.



# ಅಮುಕ್ತಾಭರಣ ಸಪ್ತಮೀ ವ್ರತ

**(ಈ ವ್ರತವನ್ನು ಭಾದ್ರಪದ ಶುಕ್ಲ ಸಪ್ತಮಿಯ ದಿನದಂದು ಆಚರಿಸಬೇಕು. ಇದಕ್ಕೆ 12 ಗಂಟುಗಳುಳ್ಳ ದೋರವನ್ನು ಪೂಜಿಸಬೇಕು)**

ಭಾದ್ರಪದ ಶುದ್ಧ ಸಪ್ತಮ್ಯಾಂ ಜಲಾಶಯೇ ಸ್ನಾತ್ವಾ । ಧೌತರಾನಸೀಪರಿದಾಯು ಗೃಹಮೇತ್ಯ ಮಧ್ಯಾಹ್ನತ್ಪೂರ್ವಮಾಚಮನಾದಿ ದೇಶಕಾಲ ಕೀರ್ತನಾಂತೆ ಮಮ । ಶ್ರೀಮದುಮಾಮಹೇಶ್ವರ ಪ್ರೀತಿದ್ವಾರಾಸಮಸ್ತ ಪಾಪಕ್ಷಯ ಪೂರ್ವಕಂ ದೀರ್ಘಾ–ಯುರನಾಮಯತ್ವ ಪುತ್ರಪೌತ್ರಾದ್ಯತುಲ ಸುಖ ಸೌಭಾಗ್ಯ ಸಂಪದಭಿವೃದ್ಧಿ ಶಿವಲೋಕ ಪ್ರಾಪ್ತ್ಯದ್ಯಭೀಷ್ಟಸಿದ್ಧ್ಯರ್ಥಂ ಅಮುಕ್ತಾಭರಣಸಪ್ತಮಿೂ ವ್ರತಾಂಗತ್ವೇನ ಪೂಜಾಂ ಕರಿಷ್ಯೇ ॥ ಇತಿ ಸಂಕಲ್ಪ್ಯ ॥ ಗಣೇಶಪೂಜಾದಿಕಂ ಕೃತ್ವಾ ॥

**(ಗಣೇಶಪೂಜೆ, ಕಲಶಪೂಜೆ ವಿನಾಯಕನ ವ್ರತದಲ್ಲಿರುವಂತೆ ಆಚರಿಸಬೇಕು)**

ಪೀಠಾದೌ ಮಂಡಲೇ ಉಮಯಾಸಹ ಶಿವಂ ವಿಲಿಖ್ಯ ತದಗ್ರೇ ಸೌವರ್ಣಂ ರಜತಂ ಸೂತ್ರಮಯಪಾದೋದರಿ ನಿಧಾಯ ಪೂಜಯೇತ್ ॥

**(ಪೀಠಭಾಗದಲ್ಲಿ ಉಮಾಸಹಿತನಾದ ಈಶ್ವರನನ್ನು ಬರೆದು ಅದರ ಕೊನೆಯಲ್ಲಿ ಬಂಗಾರದಿಂದ ನಿರ್ಮಿತವಾದ ದಾರವನ್ನು ಇಟ್ಟು ಪೂಜೆಯನ್ನು ಮಾಡಬೇಕು.)**

ಅಥ ಧ್ಯಾನಂ॥ ಉಮಾ ಶೋಭಿತವಾಮಾಂಗಂ ಶುದ್ಧಸ್ಫಟಿಕಸನ್ನಿಭಂ । ಬಾಹುಭಿ–ಶ್ಶೂಲ ಡಮರು ಕಪಾಲಭಯ ಸೇವಿತಂ ॥ ಚತುರ್ಭಿಃ ಸಹಿತೈಃಹಸ್ತೈ ಶಂಕರಂ ಲೋಕಶಂಕರಂ ॥ ಉಮಾಸಹಿತಮಾಹೇಶ್ವರಂ ಧ್ಯಾಯಾಮಿ॥

ಮಂತ್ರ ॥ ತ್ರ್ಯಂಬಕಂಯಜಾಮಹೆ ಸುಗಂಧಿಂ ಪುಷ್ಟಿವರ್ಧನಂ । ಉರ್ವಾರುಕ–ಮಿವಬಂಧನಾನ್ಮೃತ್ಯೋರ್ಮುಕ್ಷೀಯಮಮಾಮೃತಾತ್ ॥ ಸಹಸ್ರಶೀರ್ಷಾಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ । ಸಭೂಮಿಂವಿಶ್ವತೋವೃತ್ವಾಅತ್ಯತಿಷ್ಠದ್ದಶಾಂಗುಲಂ ।

ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಂ ಚಂದ್ರಾಂ ಹಿರಣ್ಮಯೀಂ‚ ಲಕ್ಷ್ಮೀಜಾತವೇದೋ ಮಆವಹ॥ ಆವಾಹನಂ ॥

**(ಪ್ರಾಣಪ್ರತಿಷ್ಠೆ ಕ್ರಮವು ವಿನಾಯಕವ್ರತದಲ್ಲಿರುವಂತೆ ಆಚರಿಸತಕ್ಕದ್ದು)**

ದೇವೇಶಂ ಭವಂತಂ ಭಕ್ತವತ್ಸಲಂ । ಗೃಹಾಣಮತ್ಕೃತಾಂ ಪೂಜಾಂ ಪಾರ್ವತೀ ಸಹಿತ ಉಮಾಶಂಕರ ಪ್ರಭೋ ॥ ಉಮಾಮಹೇಶ್ವರಾಭ್ಯಾಂ ನಮಃ ಆವಾಹನಂ ಸಮರ್ಪಯಾಮಿ ॥ ಮೌಕ್ತಿಕೈಃ ಪುಷ್ಯರಾಗೈಶ್ಚ ನಾನಾರತ್ನೈಶ್ಚ ಶೋಭಿತಂ ದಿವ್ಯಸಿಂಹಾಸನಂ ಚಾರುಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥

ಮಂತ್ರ ॥ ಪುರುಷಏವೇದಗ್ಂಸರ್ವ.....ಹತಿ । ತಾಮ್ಮ ಅವಃ.....ನಹಂ ॥ ತ್ರ್ಯಂಬಕಂ.....ತಾತ್ ॥ ಉಮಾಸಹಿತಂ ಶ್ರೀಮಹೇಶ್ವರಾಭ್ಯಾಂನ್ನಮಃ ॥ ಆಸನಂ ಸಮರ್ಪಯಾಮಿ । ಸ್ವರ್ಣಪಾತ್ರಸ್ಥಿತಂ ದಿವ್ಯಂ ಜಾಹ್ನವೀ ಜಲಶೋಭಿತಂ । ಗಂಧ ಪುಷ್ಪಾಕ್ಷತೈಃ ಸಾರ್ಥಂ ಪಾದ್ಯಂ ಸ್ವೀಕುರು ಶಂಕರ ॥ ಏತವಾನಸ್ಯ.........ದಿವಿ ಅಶ್ವಪೂರ್ವಾಂ.....ಜುಷತಾಂ ॥ ತ್ರ್ಯಂಬಕಂ.......ತಾತ್ ॥ ಉಮಾ..... ಭ್ಯಾಂ ನಮಃ ॥ ಪಾದ್ಯಂ ಸಮರ್ಪಯಾಮಿ ॥ ಪವಿತ್ರೋದಕಸಂಯುಕ್ತಂ ಸುವರ್ಣ ಕಲಶಸ್ಥಿತಂ ॥ ಅರ್ಘ್ಯಂ ಗೃಹಾಣ ದೇವೇಶ ಶೂಲಪಾಣೇ ನಮೋಽಸ್ತುತೇ । ತ್ರಿಪಾದೂರ್ಧ್ವ ................. ಅಭಿಕಾಂಸೋಸ್ಮಿ..... ಶ್ರಿಯಂ ॥ ತ್ರ್ಯಂಬಕಂ....... ತಾತ್ ॥ ಉಮಾ...... ಭ್ಯಾನ್ನಮಃ ॥ ಅರ್ಘ್ಯಂ ಸಮರ್ಪಯಾಮಿ ॥ ಆಚಮ್ಯತಾಂ ಮಹಾದೇವ ಮಹಾಭಕ್ತ್ಯಾ ಪ್ರಕಲ್ಪಿತೈಃ । ಸರ್ವತೀರ್ಥಾಹೃತೈಃ ಸ್ವಚ್ಛೈಃ ಸ್ವರ್ಣಪಾತ್ರಸ್ಥಿತೈರ್ಜಲೈಃ ॥ ತಸ್ಮಾದ್ವಿರಾ ............... ಮಥೋಪುರಃ ॥ ಚಂದ್ರಾಂ ............. ತ್ವಾಂ ವೃಣೇ ॥ ತ್ರ್ಯಂಬಕಂ.......ತಾತ್॥ ಉಮಾ.........ಭ್ಯಾನ್ನಮಃ ॥ ಆಚಮನಂ ಸಮರ್ಪಯಾಮಿ ॥ ಗಂಧ್ಯೈಃ ಪಂಚಾಮೃತೈಃ ಸ್ನಿಗ್ಧೈಃ ಪಂಚಕುಂಭೋದಕೈಃ ಶುಭೈಃ । ಸ್ನಾಪಯಾಮಿ ಮಹಾದೇವ ಭವಂತಂ ನಿತ್ಯನಿರ್ಮಲಂ ॥ ಅಪಾಯಸ್ವ........ಗಥೇ । ದಧಿಕ್ರಾವಣ್ಣೋ.....ಷತ್ ॥ ಶುಕ್ರಮಸೀ....ಭಿಃ ॥ ಯಾಃ ಫಲನೀರ್ಯಾ......ಸಃ ॥ ಮಧುವಾತಾ ಋತಾ.... ರಜಃ ॥ ಪಂಚಾಮೃತ ಸ್ನಾನಂ ॥ ತ್ರ್ಯಂಬಕಾಯ ಶರ್ವಾಯ ಸರ್ವಭೂತಪ್ರಿಯಾಯ ಚ । ಸ್ನಾನೇನಾನೇನ ದೇವೇಶ ಸುಪ್ರೀತೋ ಭವಶಂಕರ ॥ ಯತ್ಪುರುಷೇ.....ದ್ಧವಿಃ ॥ ಆದಿತ್ಯವರ್ಣೇ.....ಆ ಲಕ್ಷ್ಮೀ॥ ಆಪೋಹಿಷ್ಠಾ.....ಚನಃ॥ ಉಮಾಮಹೇಶ್ವರಾಭ್ಯಾನ್ನಮಃ॥ ಶುದ್ಧೋದಕಸ್ನಾನಂ ಸಮರ್ಪಯಾಮಿ ॥ ಗಜಾನನಪರೀವೀತ ವ್ಯಾಘ್ರಚರ್ಮಾಂಬರ ಪ್ರಿಯ । ದುಕೂಲವಸ್ತ್ರಯುಗಳಂ ಗೃಹ್ಯತಾಂ ಪಾರ್ವತೀಪತೇ ॥ ಸಪ್ತಾಸ್ಯಾಸನ್....... ಪಶುಂ ॥ ಉಪೈತು....ದಾತುಮೇ । ತ್ರ್ಯಂಬಕಂ......ತಾತ್ ॥ ಉಮಾಭ್ಯಾನ್ನಮಃ ವಸ್ತ್ರಯುಗ್ಮಂ ॥ ಉಪವೀತಂ ಗೃಹಾಣೇದಂ ಫಣಿರಾಜವಿಭೂಷಿತಃ । ಬ್ರಹ್ಮಸೂತ್ರಂ–ಚೋತ್ತರೀಯಂ ಸುವರ್ಣಪರಿಕಲ್ಪಿತಂ ॥ ತಂ ಯಜ್ಞಂ.......ಶ್ಚಯೇ ॥ ಕ್ಷುತ್ಪಿಪಾಸಾ......ಗೃಹಾತ್ ॥ ತ್ರ್ಯಂಬಕಂ.......ತಾತ್ ॥

ಮಂತ್ರಃ ॥ ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹಜಂ ಪುರಸ್ತಾತ್ । ಆಯುಷ್ಯಮಗ್ರ್ಯಂ ಪ್ರತಿಮುಂಚಶುಭ್ರಂ ಯಜ್ಞೋಪವೀತಂ ಬಲ–ಮಸ್ತುತೇಜಃ । ಉಪವೀತಂ ಸಮರ್ಪಯಾಮಿ ॥

ನಾಗಾಭರಣ ನಾಗೇಂದ್ರ । ಕಂಕಣಾನಂತವೈಭವ ॥ ನಾನಾವಿಧಾನಲಂಕಾರಾನ್ ಗೃಹಾಣ ಪರಮೇಶ್ವರ ॥ ಉಮಾ...ಭ್ಯಾನ್ನಮಃ ॥ ಆಭರಣಂ ಸಮರ್ಪಯಾಮಿ ॥ ವಿಭೂತಿಭೂಷಣ ಶ್ರೀಮಾನ್ । ವಿಭೂತಿಧರವಾಸಿತಂ ॥ ಸುಗಂಧಂ ಚಂದನಂಚಾರು । ಗೃಹ್ಯತಾಮನುಲೇಪನಂ ॥ ತಸ್ಮಾದ್ಯಜ್ಞಾ........ಯೇ ಗಂಧದ್ವಾರಾಂ.....ಶ್ರಿಯಂ





ತ್ರ್ಯಂಬಕಂ.......ತಾತ್ ॥ ಉಮಾಮಹೇಶ್ವರಾಭ್ಯಾಂನ್ನಮಃ ॥ ಗಂಧಂ ॥ ಸುಗಂಧೀನಿ ಸುಪುಷ್ಪಾಣಿ । ನಾನಾಗಂಧಾಕ್ಷತಾನಿ ಚ ॥ ಸಂಪದಿತಾನಿ ರಮ್ಯಾಣಿ । ಗೃಹಾಣೇಷ್ಟ ಫಲಪ್ರದ । ತಸ್ಮಾದ್ಯಜ್ಞಾ.......ಜಾಯತೆ ॥ ಮಹೇಶ್ವರಾಯ ನಮಃ ತಿಲಾಕ್ಷತ ಪುಷ್ಪಾಣಿ ॥ ಉಮಾಯೈನಮಃ ಹರಿದ್ರಾಕುಂಕುಮಾಚೂರ್ಣಂ ॥ ಜಾಜೀ ಪುನ್ನಾಗ ವಕುಳ ದೇವದಾರು ಸಮುದ್ಭವೈಃ ನಾನಾದ್ರವ್ಯೈಃ ಸುಸಂಪೂಜ್ಯ ಪ್ರಸಾದಂ ಕುರುಮೆ ಪ್ರಭೋ ॥ ತಸ್ಮಾದಶ್ವಾ .......... ವಯಃ ॥ ಮನಸಃ–ಯಶಃ ॥ ತ್ರ್ಯಂಬಕಂ ತಾತ್ ಉಮಾಭ್ಯಾನ್ನಮಃ ॥ ಪುಷ್ಪಾಣಿ ಸಮರ್ಪಯಾಮಿ ॥

## ಅಥ ಅಂಗಪೂಜಾಃ

| | | | |
|---|---|---|---|
| ಗೌರ್ಯೈನಮಃ | )... ಪಾದೌ | ಪೂಜಯಾಮಿ | (ಪಾದಗಳು) |
| ಆನಂದಾಯನಮಃ | )... ಜಂಘೇ | " | (ಹಿಂಗಾಲು) |
| ಶೋಕವಿನಾಶಿನ್ಯೈನಮಃ | ) | | |
| ಶರ್ವಾಯನಮಃ | )... ಜಾನುನೀ | " | (ಮುಂಗಾಲು) |
| ಶರ್ವಾಣ್ಯೈನಮಃ | ) | | |
| ಶಿವಾಯನಮಃ | ).... ಊರೂ | " | (ತೊಡೆ) |
| ಶುಭಾಯನಮಃ | ) | | |
| ಆನಂದಾಯನಮಃ | )... ಕಟಿಂ | " | (ಕಟಿ) |
| ಆನಂದಿನ್ಯೈನಮಃ | ) | | |
| ಭವಾಯೈನಮಃ | )... ನಾಭಿಂ | " | (ಹೊಕ್ಕಳು) |
| ಮಾಧವ್ಯೈನಮಃ | ) | | |
| ಶಂಕರಾಯೈನಮಃ | )... ಹಸ್ತೌ | " | (ಹಸ್ತಗಳು) |
| ಆನಂದಕಾರಿಣ್ಯೈನಮಃ | ) | | |
| ನೀಲಕಂಠಾಯನಮಃ | )... ಕಂಠಂ | " | (ಕಂಠ) |
| ಉತ್ಕಂಠಿನ್ಯೈನಮಃ | ) | | |
| ರುದ್ರಾಯನಮಃ | )... ಕರೌ | " | (ಕೈಗಳು) |
| ನೃತ್ತಶಾಲಾಯೈನಮಃ | ) | | |
| ನೃತ್ತಶೀಲಾಯೈನಮಃ | )... ಬಾಹೂ | " | (ಬಾಹುಗಳು) |
| ಲಲಿತಾಯೈನಮಃ | ) | | |
| ವೃಷಭೇಶಾಯನಮಃ | )... ಮುಖಂ | " | (ಮುಖ) |
| ವಿಲಾಸಿನ್ಯೈನಮಃ | ) | | |
| ವಿಶ್ವಚಕ್ರಾಯನಮಃ | )... ಚಿಬುಕಂ | " | (ಗದ್ದ) |

| | | | |
|---|---|---|---|
| ವಿಶ್ವಚಕ್ರ್ಯೈನಮಃ | ) | | |
| ತ್ರಿನೇತ್ರಾಯನಮಃ | ).... ನೇತ್ರಾಣಿ | '' | (ಕಣ್ಣು) |
| ಪದ್ಮಲೋಚನಾಯ್ಮೈನಮಃ | ) | | |
| ತಾಂಡವೇಶಾಯನಮಃ | )... ಭೃಕುಟೀಂ | '' | (ಹುಬ್ಬು) |
| ಹವ್ಯವಾಹನಾಯನಮಃ | ) | | |
| ಇಂದ್ರಾಣ್ಯೈನಮಃ | )... ಲಲಾಟಂ | '' | (ಹಣೆ) |
| ಗಂಗಾಧರಾಯನಮಃ | ) | | |
| ಸ್ವಾಹಾಯ್ಮೈನಮಃ | )... ಮಕುಟಂ | '' | (ಮಕುಟ) |
| ಸರ್ವೇಶ್ವರಾಯನಮಃ | ) | | |
| ಸರ್ವೇಶ್ವರ್ಯೈನಮಃ | )... ಶಿರಃ | '' | (ತಲೆ) |
| ವಿಶ್ವರೂಪಾಯನಮಃ | ) | | |
| ವಿಶ್ವರೂಪಿಣ್ಯೈನಮಃ | )... ಸರ್ವಾಣ್ಯಂಗಾನಿ | | (ಎಲ್ಲಾ ಅಂಗಗಳು) |

## ಅಥ ದೋರಗ್ರಂಥಿ ಪೂಜಾ

| | | | |
|---|---|---|---|
| ಕಾಮರೂಪಾಯನಮಃ | ಪ್ರಥಮ | ಗ್ರಂಥಿಂ | ಸಮರ್ಪಯಾಮಿ |
| ಆದ್ಯಂತರಹಿತಾಯನಮಃ | ದ್ವಿತೀಯ | '' | '' |
| ಹರಾಯನಮಃ | ತೃತೀಯ | '' | '' |
| ಚಂದ್ರಚೂಡಾಯನಮಃ | ಚತುರ್ಥ | '' | '' |
| ಸ್ಮರಹರಾಯನಮಃ | ಪಂಚಮ | '' | '' |
| ಪಾರ್ವತೀಪ್ರಿಯಾಯನಮಃ | ಷಷ್ಠ | '' | '' |
| ಮದನಮಥನಾಯನಮಃ | ಸಪ್ತಮ | '' | '' |
| ಸೋಮಸೂರ್ಯಾಗ್ನಿಲೋಚನಾಯನಮಃ | ಅಷ್ಟಮ | '' | '' |
| ಪ್ರಮಥಾಧಿಪತಯೇನಮಃ | ನವಮ | '' | '' |
| ಬ್ರಹ್ಮೇಂದ್ರಾರ್ಚಿತಾಯನಮಃ | ದಶಮ | '' | '' |
| ಅರ್ಧನಾರೀಶ್ವರಾಯನಮಃ | ಏಕಾದಶ | '' | '' |
| ಉಮಾಮಹೇಶ್ವರಾಯನಮಃ | ದ್ವಾದಶ | '' | '' |

## ದಿಕ್ಪಾಲಕ ಪೂಜಾ

ಇಂದ್ರಾಯನಮಃ, ಅಗ್ನಿಯೇನಮಃ, ಯಮಾಯನಮಃ, ನಿಋುಋುತಯೇ ನಮಃ, ವರುಣಾಯನಮಃ, ವಾಯವ್ಯೇನಮಃ, ಕುಬೇರಾಯನಮಃ, ಈಶಾನಾಯ ನಮಃ.

## ಪುರತೋನಂದಿಕೇಶ್ವರ ಪೂಜಾ

(ಇಲ್ಲಿ ಶಿವ, ಲಲಿತಾ ಅಷ್ಟೋತ್ತರಶತನಾಮ ಅಥವಾ ಸಹಸ್ರನಾಮಗಳನ್ನು ಹೇಳಬೇಕು)

ನಮಸ್ತೇ ದಕ್ಷಯಜ್ಞಘ್ನ ಸರ್ವಲೋಕ ಪಿತಾಮಹ । ದೇವ್ಯಾಸಹ ಮಹಾದೇವ ಧೂಪೋಯಂ ಪ್ರತಿಗೃಹ್ಯತಾಂ ॥ ಯತ್ಪುರುಷಂ....ಚ್ಯೇತೇ ॥ ಕರ್ದಮೇನ ...... ಮಾಲಿನೀಂ ॥ ಧೂರಸಿ ............ ದೇವನಾಮಸಿ ॥ ತ್ರ್ಯಂಬಕ ........... ತಾತ್ ಉಮಾ .......ನಮಃ ಧೂಪಮಾಘ್ರಾಪಯಾಮಿ ॥ ನಮಸ್ತ್ರೈಲೋಕ್ಯನಾಥಾಯ ನಮಸ್ತೇ ತ್ರಿಪುರಾಂತಕ । ಗೃಹಾಣ ದೀಪಂ ದೇವ ತ್ರೈಲೋಕ್ಯ ತಿಮಿರಾಪಹ ॥ ಬ್ರಾಹ್ಮಣೋ.... ಅಜಾಯತ ॥ ಅಪಸ್ರಜಂತು ...... ಕುಲೇ ಉದ್ದೀಪ್ಯ ...... ಪಾದಯ –ತ್ರ್ಯಂಬಕಂ ......... ತಾತ್ – ಉಮಾಮಹೇಶ್ವರಾಭ್ಯಾಂನ್ನಮಃ ॥ ದೀಪಂ ದರ್ಶಯಾಮಿ ॥ ದಿವ್ಯಾನ್ನಂ ಷಡ್ರಸೋಪೇತಂ ನಾನಾಭಕ್ಷ್ಯ ಸಮನ್ವಿತಂ ನೈವೇದ್ಯಂ ಗೃಹ್ಯತಾಂ ದೇವ ಭಕ್ತಿಮುಕ್ತಿಪ್ರದಾಯಕ ॥ ಚಂದ್ರಮಾ......ರಜಾಯತ । ಆದ್ರ್ಯಾಯ......ಉಮಾ ॥ ತ್ರ್ಯಂಬಕಂ.............ತಾತ್ – ಉಮಾಮಹೇಶ್ವರಾಭ್ಯಾಂನ್ನಮಃ ॥ ನಿವೇದನಂ ಸಮರ್ಪಯಾಮಿ ॥ ಸುರಾಸುರಾರ್ಚಿತ ವಿಭೋ ಕರ್ಪೂರೇಣ ಚ ಸಂಯುತಂ । ತಾಂಬೂಲಮುತ್ತಮಃ ದೇವ ದೇವೇಶ ಪ್ರತಿಗೃಹ್ಯತಾಂ ॥ ಆದ್ರ್ಯಾ ಪುಷ್ಕರಿಣೀಂ ಪುಷ್ಟಿಂ.......ವಹ ॥ ತ್ರ್ಯಂಬಕಂ ..... ತಾತ್ ॥ ಉಮಾ ......ತಾಂಬೂಲಂ – ಸಮರ್ಪಯಾಮಿ॥

ಮಂತ್ರ ॥ ಹಿರಣ್ಯಗರ್ಭಸ್ಸಮವರ್ತತಾಗ್ರೇ ಭೂತಸ್ಯಜಾತಃ ಪತಿರೇಕ ಆಸೀತ್ ಸದಾಧಾರಪೃಥಿವೀಮ್ಯುತೇ ಮಾಂ ತಸ್ಮೈದೇವಾಯ ಹವಿಷಾವಿಧೇಮಉಮಾ..... ಸುವರ್ಣಪುಷ್ಪಂ ಸಮರ್ಪಯಾಮಿ ॥ ವೇದಾಹಮೇತಂ ... ಯದಾಸ್ತೇ । ತಾಂಮ ಸಹಂ ॥ ತ್ರ್ಯಂಬಕಂ ..... ತಾತ್ ॥ ಉಮಾ ..... ನೀರಾಜನಂ ॥ ಧಾತಾ........ ವಿದ್ಯತೇ ॥ ಅನದ್ದ ..... ದೇವತಾ ತ್ರ್ಯಂಬಕಂ ...... ತಾತ್–ರಾಜಾಧಿರಾಜಾಯ ..... ಜಾಯನಮಃ ॥ ಪುಷ್ಪಾಂಜಲಿಂ ಸಮರ್ಪಯಾಮಿ ॥ ಉಮಾಪತೇ ಪಶುಪತೇ ತ್ರೈಲೋಕ್ಯಾಧಿಪತೇ ಪ್ರಭೋ । ಪ್ರದಕ್ಷಿಣಂ ಕರೋಮಿತ್ವಾಂ । ಮಮ ಪುತ್ರಫಲಪ್ರದ ॥ ಯಾನಿಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ ತಾನಿತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ॥ ಪ್ರದಕ್ಷಿಣ ನಮಸ್ಕಾರಂ ಸಮರ್ಪಯಾಮಿ॥ ಉಮಾಪತೇ ಪಶುಪತೇ ತ್ರೈಲೋಕ್ಯಾಧಿಪತೇ ಗುರೋ॥ ಗೃಹಾಣಾರ್ಘ್ಯಂ ಮಯಾದತ್ತಂ ಭವತಾಂ ಮಮ ಸರ್ವದಾ ॥ ಪುನರರ್ಘ್ಯಂ ॥ ವಿಶ್ವಕಾಯೌ ವಿಶ್ವಮುಖೌ ॥ ವಿಶ್ವಪಾದಕಲೌಶಿತಾ । ಪ್ರಸನ್ನವದನೌ ವಂದೇ ಪಾರ್ವತೀ ಪರಮೇಶ್ವರೌ ॥ ನಮಸ್ಕಾರಂ ॥ ಉಮಾ ಮಹೇಶ್ವರದೇವ ಸರ್ವಲೋಕ ಪಿತಾಮಹೌ ವ್ರತನಾನೇನ ಸುಪ್ರೀತೋ ಭವತಾಂ ಮಮ ಸರ್ವದಾ ॥ ಇತಿ ಪ್ರಾರ್ಥನಾ ॥ ವಂಧ್ಯಾತ್ವನಾಶನಾರ್ಥಾಯ ಪುತ್ರಪೌತ್ರಾಭಿವೃದ್ಧಯೇ । ಮಾಹೇಶ್ವರಮಿದಂ ಸೂತ್ರಂ

ಧಾರಯಾಮಿ ಮಹೇಶ್ವರ ॥ ದೋರ ಗ್ರಹಣಂ ॥ ನಮಃ ಪ್ರಮಥನಾಥಾಯ ನಮಃ ಕೈಲಾಸವಾಸಿನೇ ನವೋ ಗ್ರಂಥಿಷು ಸಂಸ್ಥಾಯ ನವಸೂತ್ರಸ್ವರೂಪಿಣೆ ॥ ದೋರಸ್ಥಾಪನಂ ॥ ಸಂತಾನಸೌಖ್ಯಮುಪಲಬ್ಧು ಮತಿಪ್ರಹೃಷ್ಟಾರಾಂಧಂತಿ ನಿರ್ಮಲಗುಣಾ ವಸುದೇವಮುಖ್ಯಾಃ । ಸಂಪೂಜ್ಯ ಶೈಲತನಯಾಪತಿಮಾದಿದೇವಂ ಬಧ್ನಂತಿ ದಕ್ಷಿಣಕರೇ ವರದೋರಕಂತೇ ॥ ದೋರ ಬಂಧನಂ ॥ ಗೋತ್ರಜಾಪತಯೇ ತುಭ್ಯಂ ನೇತ್ರತ್ರಯ ಸುಶೋಭಿತ । ವಿಸೃಜಾಮಿ ಮಹಾದೇವ ಜೀರ್ಣದೋರಂ ತವಾಜ್ಞಯಾ ॥ ಜೀರ್ಣದೋರ ವಿಸರ್ಜನಂ ॥ ಆದಿತ್ಯ ತೇಜಸೋತ್ಪನ್ನಾಃ ಧಾತ್ರೀಕರವಿನಿರ್ಮಿತಾಃ ॥ ವಟಕಾಃ ಕಾಮದಾ ನಿತ್ಯಂ ಶಾಂತಿಂ ಯಚ್ಛಂತಿ ದಾನತಃ ॥ ವಾಯನದಾನಂ ॥ ಉಮೇಶಃ ಪ್ರತಿಗೃಹ್ಣಾತು ಉಮೇಶೋ ವೈದದಾತಿ ಚ । ಉಮೇಶಸ್ತಾರಕೋಬಾಭ್ಯಾಂ ಉಮೇಶಾಯ ನಮೋನಮಃ ॥ ಛತ್ರಂ ಸಮರ್ಪಯಾಮಿ ಇತಿ ಪುನಃ ಪೂಜಾಂ ಕುರ್ಯಾತ್ ಯಸ್ಯಸ್ಮೃತ್ಯಾಚ .......ಉಮಾಮಹೇಶ್ವರಃ ಸುಪ್ರೀತಃ ಸುಪ್ರಸನ್ನೋ ವರದೋಭವತು.

**ಇತಿ ಪೂಜಾವಿಧಾನಂ ಸಂಪೂರ್ಣಂ**

# ವ್ರತ ಕಥಾರ್ಥವು

ಹಿಂದೆ ಶೌನಕಾದಿ ಮಹಾಋಷಿಗಳು ಸೂತಪುರಾಣಿಕರನ್ನು ನೋಡಿ ಎಲೈ ಮಹಾನುಭಾವನಾದ ಸೂತಮುನಿಯೇ! ಲೋಕದಲ್ಲಿ ಅತ್ಯಂತ ನಿಂದಾಕರವಾಗಿರುವ ವಂಧ್ಯಾದುಃಖವು (ಬಂಜೆಯ ದುಃಖ) ಯಾವ ರೀತಿ ಪರಿಹಾರವಾಗುವುದೆಂಬುದಕ್ಕೆ ಒಂದು ವ್ರತವನ್ನೂ, ಅದರ ವಿಧಾನವನ್ನೂ ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತಿರಲು ಸೂತಮುನಿಯು ಅವರೊಡನೆ ಈ ರೀತಿ ಹೇಳಿದರು :–

ಎಲೈ ಋಷಿಗಳಿರಾ! ಹಿಂದೆ ಇದೇ ವಿಚಾರವನ್ನೇ ಧರ್ಮರಾಯನು ಶ್ರೀಕೃಷ್ಣನಲ್ಲಿ ಅರಿಕೆ ಮಾಡಿಕೊಳ್ಳಲು ಆತನು ಧರ್ಮರಾಯನಿಗೆ ಹೇಳಿದ ವಿವರವನ್ನು ನಿಮಗೆ ತಿಳಿಸುತ್ತೇನೆ. ಶ್ರೀಕೃಷ್ಣನು ಧರ್ಮರಾಯನನ್ನು ಕುರಿತು, ಎಲೈ ಕುಂತೀತನಯನೇ! ಒಂದು ದಿನ ರೋಮಶ ಮಹಾಮುನಿಯು ನಮ್ಮ ಜನನಿಯಾದ ದೇವಕೀ ದೇವಿಯ ಬಳಿಗೆ ಬಂದು ಅನೇಕ ಕಥೆಗಳನ್ನು ಹೇಳಿದ್ದನು. ಆ ಕಾಲದಲ್ಲಿ ಪ್ರಸ್ತಾಪವಶದಿಂದ ಎಲೈ ದೇವಕಿದೇವಿಯೇ ನಿನ್ನ ಮಕ್ಕಳೆಷ್ಟೋ ಮಂದಿಯನ್ನು ದುರ್ಮಾರ್ಗನಾದ ಕಂಸನು ಕೊಂದಿರುವನಲ್ಲವೆ? ಅದರಿಂದ ನೀನು ಪುತ್ರಶೋಕಕ್ಕೆ ಗುರಿಯಾಗಿ ಪ್ರಲಾಪಿಸುತ್ತಿರುವೆ. ಆದಿಯಲ್ಲಿ ನಹುಷನ ಪತ್ನಿಯಾದ ಚಂದ್ರಮುಖಿಯೆನ್ನುವಳು ಅಮುಕ್ತಾಭರಣಸಪ್ತಮೀ ವ್ರತವನ್ನು ಮಾಡಿ ಜೀವಂತರಾದ ಪುತ್ರರನ್ನು ಪಡೆದಿರುವಳು ಎನ್ನಲು, ದೇವಕಿಯು ಎಲೈ ರೋಮಶ ಮುನಿಯೇ ! ಆ ಚಂದ್ರಮುಖಿಯು ಯಾರು? ಆಕೆ ಯಾವ ವ್ರತವನ್ನು ಮಾಡಿದಳು? ಆ ವಿವರವನ್ನು ದಯವಿಟ್ಟು ತಿಳಿಸಬೇಕೆನ್ನಲು ಆ ಮುನಿವರ್ಯನು

ಹೇಳುತ್ತಾನೆ :– ದೇವಕಿಯೇ! ಅಯೋಧ್ಯಾಪುರದಲ್ಲಿ ನಹುಷನೆಂಬ ರಾಜನು ರಾಜ್ಯಭಾರವನ್ನು ಮಾಡುತ್ತಿದ್ದನು. ಆತನಿಗೆ ಚಂದ್ರಮುಖಿಯೆಂಬ ಪತ್ನಿಯಿದ್ದಳು. ಅದೇ ಪಟ್ಟಣದಲ್ಲಿಯೇ ವಿಷ್ಣುಗುಪ್ತನೆಂಬೊಬ್ಬ ಬ್ರಾಹ್ಮಣನಿದ್ದನು. ಆತನ ಪತ್ನಿಯ ಹೆಸರು ಭದ್ರಮುಖಿ. ರಾಜಪತ್ನಿಯಾದ ಚಂದ್ರಮುಖಿಗೂ, ಬ್ರಾಹ್ಮಣ ಸತಿಯಾದ ಭದ್ರಮುಖಿಗೂ ಬಹಳ ಸ್ನೇಹವಿದ್ದಿತು. ಅವರು ಒಂದು ದಿನ ಸ್ನಾನಕ್ಕಾಗಿ ಸರಯೂ ನದಿಗೆ ಹೋಗಿರಲು, ಅಲ್ಲಿ ಕೆಲವು ಸ್ತ್ರೀಯರು ಪಾರ್ವತೀ – ಶಂಕರರನ್ನು ಮಂಡಲದಲ್ಲಿ ಲಿಖಿಸಿ ಪೂಜೆಯನ್ನು ಮಾಡಿ ದಾರಗಳನ್ನು ಕಟ್ಟಿಕೊಂಡು ತಮ್ಮ ತಮ್ಮ ಮನೆಗಳಿಗೆ ಹೋಗುತ್ತಿದ್ದರು. ಆ ಸಮಯಕ್ಕೆ ಸರಿಯಾಗಿ ಬಂದ ಈ ಇಬ್ಬರು ವನಿತೆಯರು ಆ ವ್ರತವನ್ನು ತಮಗೆ ಉಪದೇಶಿಸಬೇಕೆಂದು ಪ್ರಾರ್ಥಿಸಲು, ಅಲ್ಲಿದ್ದವರು ವ್ರತವಿಧಾನವನ್ನೆಲ್ಲಾ ಸಮಗ್ರವಾಗಿ ತಿಳಿಸಿದಂತೆ ಆಚರಣೆಯನ್ನು ಮಾಡಿ ದಾರಗಳನ್ನು ಕಟ್ಟಿಕೊಂಡು ಮನೆಗೆ ಬಂದರು. ಆದರೆ ಸಂಪೂರ್ಣವಾಗಿ ವ್ರತವನ್ನು ಆಚರಿಸದೆ ಮನೆಗೆ ಬಂದರು. ಕೆಲವು ದಿನಗಳಲ್ಲಿ ಈ ಇಬ್ಬರೂ ವನಿತೆಯರೂ ಮೃತರಾಗಿ ರಾಜಭಾರ್ಯೆಯು ಕಪಿಯಾಗಿಯೂ, ಬ್ರಾಹ್ಮಣ ಭಾರ್ಯೆಯು ಕೋಳಿಯಾಗಿಯೂ ಹುಟ್ಟಿದರು. ಆಗಲೂ ಅವರಿಬ್ಬರೂ ಗೆಳತಿಯರಾಗಿಯೇ ಇರುತ್ತಾ , ವ್ರತವನ್ನು ಉಲ್ಲಂಘಿಸಿದುದರಿಂದ ತಮಗೆ ಪ್ರಾಪ್ತವಾದ ಹೀನಜನ್ಮಕ್ಕಾಗಿ ಬಹಳ ಅನುತಾಪ ಪಡುತ್ತಿದ್ದರು. ಪುನಃ ಇವರಿಬ್ಬರಿಗೂ ಮನುಷ್ಯ ಜನ್ಮವುಬಂದಿತು. ಚಂದ್ರಮುಖಿಯು ಕ್ಷತ್ರಿಯಪುತ್ರಿಯಾಗಿ ಈಶ್ವರಿಯೆಂಬ ಹೆಸರಿನಿಂದಲೂ, ಭದ್ರಮುಖಿಯು ಬ್ರಾಹ್ಮಣ ಪುತ್ರಿಯಾಗಿ ಭೂಷಣೆಯೆಂಬ ಹೆಸರಿನಿಂದಲೂ ಭೂಲೋಕದಲ್ಲಿರುತ್ತಿದ್ದರು. ಈಶ್ವರಿಯನ್ನು ಲಕ್ಷ್ಮೀನಾಥನೆಂಬ ರಾಜನು ವಿವಾಹವಾದನು. ಮೀನನೆನ್ನುವನು ಭೂಷಣೆಯನ್ನು ಮದುವೆಯಾದನು. ಅಷ್ಟರಲ್ಲಿ ಭೂಷಣೆಯು ಅಮುಕ್ತಾಭರಣಸಪ್ತಮೀ ವ್ರತವನ್ನು ಆಚರಿಸಿದುದರಿಂದ ತಂದೆಯಂತೆ ನ್ಯಾಯಶೀಲರಾಗಿಯೂ, ತನ್ನಂತೆ ರೂಪವುಳ್ಳವರಾಗಿಯೂ ಇರುವ ಮಕ್ಕಳನ್ನು ಹೆತ್ತಳು. ಈಶ್ವರಿಯು ಈ ವ್ರತವನ್ನು ಉಲ್ಲಂಘಿಸಿದ ಕಾರಣದಿಂದ ಆಕೆಗೆ ರೋಗಿಯೂ, ಮೂಗನೂ, ಬುದ್ಧಿಹೀನನೂ ಆದ ಒಬ್ಬ ಮಗನು ಹುಟ್ಟಿದನು. ಅವನೂ ಸಹ ಒಂಬತ್ತನೆಯ ವರ್ಷದಲ್ಲೇ ಮೃತನಾದನು. ಆಗ ಭೂಷಣೆಂಯು ತನ್ನ ಮಕ್ಕಳನ್ನು ಕರೆದುಕೊಂಡು ಪುತ್ರಶೋಕದಲ್ಲಿರುವ ತನ್ನ ಗೆಳತಿಯನ್ನು ವಿಚಾರಿಸಲು ಬರಲಾಗಿ ಈಶ್ವರಿಯು ಅಸೂಯೆಯಿಂದ ಗೆಳತಿಯ ಮಕ್ಕಳನ್ನು ಕೊಲ್ಲಿಸಲು ಪ್ರಯತ್ನಪಟ್ಟರೂ ಅದು ನಿಷ್ಫಲವಾಗಲು, ತನ್ನ ಬುದ್ಧಿಹೀನತೆಗಾಗಿ ತುಂಬಾ ಅನುತಾಪಗೊಂಡವಳಾಗಿ ಭೂಷಣೆಯನ್ನು ಕರೆದು ತನ್ನ ಮಗನ ಮರಣದ ಕಾರಣವನ್ನು ವಿಚಾರಿಸಲು, ಆಕೆಯು ಅಮುಕ್ತಾಭರಣಸಪ್ತಮೀ ವ್ರತದ ಬಗ್ಗೆ ಎಚ್ಚರಿಸಿ ಅದನ್ನು ಆಚರಿಸುವಂತೆ ಹೇಳಲು, ಈಶ್ವರಿಯು ಈ ವ್ರತಪ್ರಭಾವದಿಂದ ಮಕ್ಕಳನ್ನು ಹೆತ್ತು ಸುಖವಾಗಿದ್ದಳು. ಎಲೈ ದೇವಕಿಯೇ ! ನೀನೂ ಈ ವ್ರತವನ್ನು ಆಚರಿಸಿದಲ್ಲಿ ಪುತ್ರಶೋಕ ಕಳೆಯುವೆಯೆಂದು ಹೇಳಲು, ದೇವಕಿಯು ಎಲೈ ಮುನಿಪುಂಗವನೇ! ಈ ವ್ರತವಿಧಾನ

ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥಿಸಲು, ಮುನಿಯು ಈ ರೀತಿ ಹೇಳಿದನು. ಭಾದ್ರಪದ ಶುಕ್ಲ ಸಪ್ತಮಿಯ ದಿನ ಈ ವ್ರತವನ್ನು ಆಚರಿಸಬೇಕು. ಹನ್ನೆರಡು ವರ್ಷಕಾಲ ವ್ರತಾಚರಣೆಯನ್ನು ಮಾಡಿ ಆದಿಯಲ್ಲಾಗಲಿ, ಮಧ್ಯದಲ್ಲಾಗಲಿ, ಅಂತ್ಯದಲ್ಲಾಗಲಿ ಉದ್ಯಾಪನೆಯನ್ನು ಮಾಡಬೇಕು. ಉದ್ಯಾಪನೆ ಕ್ರಮ ಹೇಗೆಂದರೆ :– ಆಚಾರ್ಯ ಕಲಶವೊಂದನ್ನು, ಬ್ರಹ್ಮಕಲಶವೊಂದನ್ನು ಈ ರೀತಿ ಎರಡು ಕಲಶಗಳನ್ನೂ ಇಟ್ಟು ಇವುಗಳಲ್ಲದೆ ಹನ್ನೆರಡು ಕಲಶಗಳನ್ನು ಬೇರೆಯಾಗಿಟ್ಟು ಪ್ರತಿಮೆಯಿಂದಲೂ, ವಸ್ತ್ರಾದಿಗಳಿಂದಲೂ ಅಲಂಕರಿಸಿ ಯಥಾವಿಧಿಯಾಗಿ ಅರ್ಚಿಸಿ ಅವುಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಡಬೇಕು ಎಂದು ಹೇಳಿದಂತೆ ದೇವಕಿಯು ಈ ವ್ರತವನ್ನು ಆಚರಿಸಿ ನನ್ನನ್ನು ಹೆತ್ತಳೆಂದು ಶ್ರೀಕೃಷ್ಣನು ಧರ್ಮರಾಯನಿಗೆ ಹೇಳಿದನು. ಈ ಕಥೆಯನ್ನು ಹೇಳಿದವರಿಗೂ ಕೇಳಿದವರಿಗೂ ಶಿವಲೋಕಪ್ರಾಪ್ತಿಯಾಗುವುದೆಂದು ಸೂತಪುರಾಣಿಕರು ಶೌನಕಾದಿ ಮಹಾಋಷಿಗಳಿಗೆ ಹೇಳಿದರೆಂಬಲ್ಲಿಗೆ,

ಸ್ಕಾಂದಪುರಾಣದ ಶ್ರೀಕೃಷ್ಣ - ಯುಧಿಷ್ಠಿರ ಸಂವಾದದಲ್ಲಿನ ಅಮುಕ್ತಾಭರಣ ಸಪ್ತಮೀ ವ್ರತಕಥೆಯು ಸಂಪೂರ್ಣವಾದುದು.



# ಶ್ರೀರಾಮನವಮೀ ವ್ರತ

ಆಚಮ್ಯ :- ಪ್ರಾಣಾನಾಯಮ್ಯ ಮಾಸಪಕ್ಷಾದೀನುಲ್ಲೇಖ್ಯ ಶ್ರೀ.............. ಪ್ರೀತ್ಯರ್ಥಂ ಮಮ ಸಮಸ್ತ ಪಾಪಕ್ಷಯದ್ವಾರಾ ಶ್ರೀರಾಮಪ್ರೀತಯೇ ರಾಮನವಮೀ – ವ್ರತಾಂ ಗತ್ವೇನ ಯಥಾಮಿಳಿತೋಪಚಾರೈಃ ರಾಮಪೂಜಾಂ ಕರಿಷ್ಯೇ ॥ ತತ್ರಾದೌ ನಿರ್ವಿಘ್ನ ಪರಿಸಮಾಪ್ತ್ಯರ್ಥಂ ಗಣಾಧಿಪತಿ ಪೂಜಾಂ ಕರಿಷ್ಯೇ ॥ ಪಂಚಶಬ್ದೈಃ ಪುಣ್ಯಾಹ ವಾಚನಂ ತಥಾ ರಾಮಮಂತ್ರೇಣ ಷಡಂಗನ್ಯಾಸ ಕಲಶಾದ್ಯರ್ಚನಂ ಚ ಕರಿಷ್ಯೇ ॥ ಗಣಾಧಿಪತಿಪೂಜಾಂ ಪುಣ್ಯಾಹವಾಚನಾದಿ ಚ ಕೃತ್ವಾ ॥ ತತಃ ಫಲ ಪುಷ್ಪಾಕ್ಷತ ಸಹಿತಂ ಜಲಪೂರ್ಣಂ ತಾಮ್ರಪಾತ್ರಂ ಗೃಹೀತ್ವಾ ॥ ಉಪೋಷ್ಯನವಮೀಂ ತ್ವದ್ಯ ಯಾ– ಮೇಷ್ವಷ್ಟಾಸು ರಾಘವ । ತೇನ ಪ್ರೀತೋ ಭವತ್ವಂ ಮೇ ಸಂಸಾರಾತ್ತ್ರಾಹಿಮಾಂ ಹರೇ ॥ ಇತಿ ಮಂತ್ರಸ್ಥಂ ಜಲಂ ನಿಕ್ಷಿಪೇತ್ ॥ ತತಃ ಸ್ವಶಕ್ತಿತಃ ಹೈಮೀಂ ರಾಮಪ್ರತಿಮಾಂ ಕೃತ್ವಾ ಅಗ್ನ್ಯುತ್ತಾರಣ ಪೂರ್ವಕಂ ಕಪೋಲೌಸ್ಸ್ಪೃಷ್ಟ್ವಾ । ಮೂಲಮಂತ್ರಂ ಪ್ರಣವಾದಿ– ಚತುರ್ಥ್ಯಂತಕ ನಾಮ ರಾಮಾಯದೇವತ್ವಂ ಸಂಖ್ಯಯಾ ಸ್ವಾಹೇತಿ ಮಂತ್ರಂ ಪಠನ್ ॥ ಪ್ರಾಣಪ್ರತಿಷ್ಠಾಪನಂ ಕುರ್ಯಾತ್ ॥ ಅಥ ಧ್ಯಾನಂ॥ ಕೋಮಲಾಂಗ ವಿಶಾಲಾಕ್ಷಮಿಂದ್ರ ನೀಲ ಸಮಪ್ರಭಂ । ದಕ್ಷಿಣಾಂಗೇ ದಶರಥಂ ಪುತ್ರಾಪೇಕ್ಷಣ ತತ್ಪರಂ ॥ ಪೃಷ್ಠತೋ ಲಕ್ಷಣಂ ದೇವಂ ಸಚ್ಛತ್ರಂ ಕನಕಪ್ರಭಂ । ಪಾರ್ಶ್ವೇ ಭರತ ಶತ್ರುಘ್ನ ಚಾಮರ ವ್ಯಜನಾನ್ವಿತೌ ॥ ಅಗ್ರೇತ್ಯಗ್ರೌ ಹನೂಮಂತಂ ರಾಮಾನುಗ್ರಹಕಾಂಕ್ಷಿಣಂ ॥ ಇತಿ ಧ್ಯಾನಂ ॥ ಸಹಸ್ರಶೀರ್ಷಾ.......ಲಮ್ ॥ ವಿಶ್ವೇಶಂ ಜಾನಕೀ ಜಾನಿಂ ವಿಶ್ವರೂಪಂ ವಿಭುಂ ಪ್ರಭುಂ । ಕೌಸಲ್ಯಾತನಯಂ ವಿಷ್ಣುಂ ಶ್ರೀರಾಮಂ ಪ್ರಕೃತೇಃಪರಂ ॥ ಆವಾಹನಂ ॥ ಶ್ರೀರಾಮಾಗಚ್ಛ ಭಗವನ್ ರಘುವೀರ ನೃಪೋತ್ತಮ ॥ ಜಾನಕ್ಯಾಸಹರಾಜೇಂದ್ರ ಸುಸ್ಥಿರೋಭವ ಸರ್ವದಾ ॥ ರಾಮಚಂದ್ರ ಮಹೇಷ್ವಾಸ ರಾವಣಾಂತಕ ರಾಘವ ॥ ಯಾವತ್ಪೂಜಾಂ ಸಮಾಪ್ಸ್ಯೇಹಂ । ತಾವತ್ವಂ ಸನ್ನಿಧೋಭವ ॥ ಸನ್ನಿಧಾಪನಂ ॥ ರಘುನಾಯಕ ರಾಜರ್ಷೇ ನಮೋ ರಾಜೀವಲೋಚನ । ರಘುನಂದನ ಮೇ ದೇವ ಶ್ರೀರಾಮಾಭಿಮುಖೋ ಭವ ॥ ಇತಿ ಸಮ್ಮುಖೀಕರಣಂ ॥ ಪುರುಷ ಏವೇದಗ್ಂ ಸರ್ವಂ...ತಿ ॥ ರಾಜಾಧಿರಾಜ ರಾಜೇಂದ್ರ ರಾಮಚಂದ್ರ ಮಹೀಪತೇ ॥ ರತ್ನಸಿಂಹಾಸನಂ ತುಭ್ಯಂ ದಾಸ್ಯಾಮಿ ಸ್ವೀಕುರು ಪ್ರಭೋ ॥ಆಸನಂ ॥ ಏತವಾನಸ್ಯ.....ದಿವಿ ॥ ತ್ರೈಲೋಕ್ಯಪಾವನಾನಂತ ನಮಸ್ತೇ ರಘುನಾಯಕ । ಪಾದ್ಯಂ ಗೃಹಾಣ ರಾಜರ್ಷೇ ನಮೋರಾಜೀವಲೋಚನ ॥ ಪಾದ್ಯಂ ॥ ತ್ರಿಪಾದೂರ್ಧ್ವ.......ಅಭಿ ॥ ಪರಿಪೂರ್ಣ– ಪರಾನಂದ ನಮೋ ರಾಮಾಯ ವೇಧಸೇ ಗೃಹಾಣಾರ್ಘ್ಯಂ ಮಯಾದತ್ತಂ ಕೃಷ್ಣ ವಿಷ್ಣೋ ಜನಾರ್ದನ ॥ ಅರ್ಘ್ಯಂ ॥ ತಸ್ಮಾದ್ವಿರಾಡಜಾಯತ.... ಪುರಃ ॥ ನಮಃ ಸತ್ಯಾಯ

ಶುದ್ಧಾಯ ನಿತ್ಯಾಯ ಜ್ಞಾನರೂಪಿಣೇ ॥ ಗೃಹಾಣಾಚಮನಂ ರಾಮ ಸರ್ವಲೋಕೈಕ ನಾಯಕ ॥ ಆಚಮನೀಯಂ ॥ ಯತ್ಪುರುಷೇಣ ಹವಿಷಾ... ದ್ಧವಿಃ ॥ ಬ್ರಹ್ಮಾಂಡೋದರ ಮಧ್ಯಸ್ಥೈಃ ತೀರ್ಥೈಶ್ಚ ರಘುನಂದನ ॥ ಸ್ನಾಪಯಿಷ್ಯಾಮ್ಯಹಂ ಭಕ್ತ್ಯಾತ್ವಂ ಗೃಹಾಣ ಜನಾರ್ದನಾ ॥ ಸ್ನಾನಂ ॥ ಮಧುವಾ ತಾ.....ನಃ ॥ ನಮಃ ಶ್ರೀವಾಸುದೇವಾಯ ತತ್ವಜ್ಞಾನಸ್ವರೂಪಿಣೇ । ಮಧುಪರ್ಕಂ ಗೃಹಾಣೇದಂ ಜಾನಕೀಪತಯೇ ನಮಃ ॥ ಮಧುಪರ್ಕಂ ॥ ಆಪ್ಯಾಯಸ್ವೇತಿ ಪಂಚಮಂತ್ರೈಃ ಪಂಚಾಮೃತಂ ॥ ಪಂಚಾಮೃತಮಯಾನೀತಂ ಪಯೋದಧಿಘೃತಂ ಮಧು। ಶರ್ಕರಾಸಂಹಿತಂಚೈವ ರಾಮತ್ವಂ ಪ್ರತಿಗೃಹ್ಯತಾಂ ॥ ಶುದ್ಧೋದಕಸ್ನಾನಂ ॥ ಚಂದನಂ ಧೂಪಂ ದೀಪಂ ನೈವೇದ್ಯಂ ಸಮರ್ಪ್ಯ ॥ ಸಂಪ್ರಾರ್ಥ್ಯ ನಿರ್ಮಾಲ್ಯಂ ವಿಸೃಜ್ಯ ಪುರುಷಸೂಕ್ತೇನ ವಿಷ್ಣುಸೂಕ್ತೈಶ್ಚ ಅಭಿಷಿಚ್ಯ ॥ ಆಚಮನೀಯಂ ಸಪ್ತಾಸ್ಯಾಸನ್ನಿತಿವಸ್ತ್ರಂ ॥ ತಂ ಯಜ್ಞಂ ಬರ್ಹಿಷಿ.....ಯೇ ॥ ತಪ್ತಕಾಂಚನಸಂಕಾಶಂ ಪೀತಾಂಬರಮಿದಂಹರೇ। ಸಂಗೃಹಾಣ ಜಗನ್ನಾಥ ರಾಮಚಂದ್ರ ನಮೋಸ್ತುತೇ ॥ ಉಪವಸ್ತ್ರಂ ॥ ತಸ್ಮಾದ್ಯಜ್ಞಾತ್.....ಯೇ ॥ ಶ್ರೀರಾಮಾಚ್ಯುತ ದೇವೇಶ ಶ್ರೀಧರಾನಂತ ರಾಘವ । ಬ್ರಹ್ಮಸೂತ್ರಂಚೋತ್ತರೀಯಂ ಗೃಹಾಣ ರಘುನಂದನ॥ ಯಜ್ಞೋಪವೀತಂ ॥ ತಸ್ಮಾದ್ಯಜ್ಞಾತ್ಸರ್ವಹುತಃ......ಯತ ॥ ಕುಂಕುಮಾಗರು ಕಸ್ತೂರಿ ಕರ್ಪೂರಂ ಚಂದನಂ ತಥಾ। ತುಭ್ಯಂ ದಾಸ್ಯಾಮಿ ರಾಜೇಂದ್ರ ಶ್ರೀರಾಮ ಸ್ವೀಕುರುಪ್ರಭೋ ॥ ॥ ಗಂಧಂ ॥ ಅಲಂಕಾರಾರ್ಥೆ ಅಕ್ಷತಾ । ತಸ್ಮಾದಶ್ವಾ...ವಯಃ ॥ ತುಲಸೀ ಕುಂದಮಂದಾರ ಜಾಜೀ ಪುನ್ನಾಗ ಚಂಪಕೈಃ । ಕದಂಬ ಕರವೀರೈಶ್ಚ ಕುಸುಮೇ ಶತಪತ್ರಕೈಃ ॥ ಜಲಾಂಬುಜೈರ್ಬಿಲ್ವಪತ್ರೈ ಶ್ಚಚಂಪಕೈ ರಾಘವಂ ವಿಭುಂ । ಪೂಜಯಿಷ್ಯಾಮ್ಯಹಂ ಭಕ್ತ್ಯಾ ಸಂಗೃಹಾಣ ಜನಾರ್ದನಾ ॥ ಪತ್ರಪುಷ್ಪಾಣಿ ॥ ತುಲಸೀ ಕುಂದ ಮಂದಾರ ಪಾರಿಜಾತಾಂಜೈರ್ಯುತಾಂ ॥ ವನಮಾಲಾಂ ಪ್ರದಾಸ್ಯಾಮಿ ಗೃಹಾಣ ಜಗದೀಶ್ವರ ॥ ವನಮಾಲಾಂ ಸಮರ್ಪಯಾಮಿ ॥

## ಅಥಾಂಗ ಪೂಜಾ

| | | | |
|---|---|---|---|
| ಶ್ರೀರಾಮಚಂದ್ರಾಯನಮಃ | ಪಾದೌ | ಪೂಜಯಾಮಿ | (ಪಾದಗಳು) |
| ರಾಜೀವಲೋಚನಾಯನಮಃ | ಗುಲ್ಫೌ | " | (ಹಿಮ್ಮಡಿ) |
| ರಾವಣಾಂತಕಾಯನಮಃ | ಜಾನುನೀ | " | (ನಡು) |
| ವಾಚಸ್ಪತಯೇನಮಃ | ಊರೂನ್ | " | (ತೊಡೆ) |
| ವಿಶ್ವರೂಪಾಯನಮಃ | ಜಂಘೇ | " | (ಮೊಣಕಾಲು) |
| ಲಕ್ಷ್ಮಣಾಗ್ರಜಾಯನಮಃ | ಕಟಿಂ | " | (ಕಟಿ) |
| ವಿಶ್ವಮೂರ್ತಯೇನಮಃ | ಗುಹ್ಯಂ | " | (ನಡು) |

| | | | |
|---|---|---|---|
| ವಿಶ್ವಾಮಿತ್ರಪ್ರಿಯಾಯನಮಃ | ನಾಭಿಂ | ,, | (ಹೊಕ್ಕಳು) |
| ಪರಮಾತ್ಮನೇನಮಃ | ಹೃದಯಂ | ,, | (ಎದೆ) |
| ಶ್ರೀಕಂಠಾಯನಮಃ | ಕಂಠಂ | ,, | (ಕುತ್ತಿಗೆ) |
| ಸರ್ವಾಸ್ತ್ರಧಾರಿಣೇನಮಃ | ಬಾಹುಂ | ,, | (ಬಾಹುಗಳು) |
| ರಘೂದ್ವಹಾಯನಮಃ | ಮುಖಂ | ,, | (ಮುಖ) |
| ಪದ್ಮನಾಭಾಯನಮಃ | ಜಿಹ್ವಾಂ | ,, | (ನಾಲಿಗೆ) |
| ದಾಮೋದರಾಯನಮಃ | ದಂತಾಂ | ,, | (ಹಲ್ಲು) |
| ಸೀತಾಪತಯೇನಮಃ | ಲಲಾಟಂ | ,, | (ಹಣೆ) |
| ಜ್ಞಾನಗಮ್ಯಾಯನಮಃ | ಶಿರಃ | ,, | (ತಲೆ) |
| ಸರ್ವಾತ್ಮನೇನಮಃ | ಸರ್ವಾಣ್ಯಂಗಾನಿ | ,, | (ಎಲ್ಲಾ ಅಂಗಗಳು) |

## ಅಥ ಅಷ್ಟೋತ್ತರ ಶತನಾಮಪೂಜಾ

ಓಂ ಶ್ರೀರಾಮಾಯನಮಃ। ರಾಮಭದ್ರಾಯನಮಃ। ರಾಮಚಂದ್ರಾಯನಮಃ। ಶಾಶ್ವಾತಾಯನಮಃ । ರಾಜೀವಲೋಚನಾಯನಮಃ । ಶ್ರೀಮತೇನಮಃ । ರಾಜೇಂದ್ರಾಯನಮಃ। ರಘುಪುಂಗವಾಯನಮಃ। ಜಾನಕೀವಲ್ಲಭಾಯನಮಃ। ಜೈತ್ರಾಯನಮಃ। ಜಿತಾಮಿತ್ರಾಯನಮಃ। ಜನಾರ್ದನಾಯನಮಃ। ವಿಶ್ವಾಮಿತ್ರ–ಪ್ರಿಯಾಯನಮಃ। ದಾನ್ತಾಯನಮಃ। ಶರಣ್ಯತ್ರಾಣತತ್ಪರಾಯನಮಃ। ವಾಲೀ ಪ್ರಮಥನಾಯನಮಃ। ವಾಗ್ಮಿನೇನಮಃ। ಸತ್ಯವಾಚೇನಮಃ। ಸತ್ಯವಿಕ್ರಮಾಯನಮಃ। ಸತ್ಯವ್ರತಾಯನಮಃ। ವ್ರತಧರಾಯನಮಃ। ಸದಾಹನುಮದಾಶ್ರಯಾಯನಮಃ। ಕೌಸಲೇಯಾಯನಮಃ। ಖರಧ್ವಂಸಿನೇನಮಃ। ವಿರಾಧವಧಪಂಡಿತಾಯನಮಃ। ವಿಭೀಷಣಪರಿಧಾತ್ರೇನಮಃ। ಹರಕೋದಂಡ ಖಂಡನಾಯನಮಃ। ಸಪ್ತತಾಳಪ್ರಭೇತ್ರೇ ನಮಃ। ದಶಗ್ರೀವಶಿರೋಹರಾಯನಮಃ। ಜಾಮದಗ್ನ್ಯಮಹಾದರ್ಪದಮನಾಯ ನಮಃ। ತಾಟಕಾಂತಕಾಯನಮಃ। ವೇದಾಂತಸಾರಾಯನಮಃ। ವೇದಾತ್ಮನೇನಮಃ। ಭವರೋಗಸ್ಯಭೇಷಜಾಯನಮಃ। ದೂಷಣತ್ರಿಶಿರೋಹನ್ತ್ರೇನಮಃ। ತ್ರಿಮೂರ್ತಯೇ ನಮಃ। ತ್ರಿಗುಣಾತ್ಮಕಾಯನಮಃ। ತ್ರಿವಿಕ್ರಮಾಯನಮಃ। ತ್ರಿಲೋಕಾತ್ಮನೇನಮಃ। ಪುಣ್ಯಚಾರಿತ್ರಕೀರ್ತನಾಯನಮಃ। ತ್ರಿಲೋಕರಕ್ಷಕಾಯನಮಃ। ಧನ್ವಿನೇನಮಃ। ದಂಡಕಾರಣ್ಯ ಪುಣ್ಯಕೃತೇನಮಃ। ಅಹಲ್ಯಾಶಾಪದಮನಾಯನಮಃ। ಪಿತೃಭಕ್ತಾಯ ನಮಃ। ವರಪ್ರದಾಯನಮಃ। ಜಿತೇಂದ್ರಿಯಾಯನಮಃ। ಜಿತಕ್ರೋಧಾಯನಮಃ। ಜಿತಾಮಿತ್ರಾಯನಮಃ। ಜಗದ್ಗುರವೇನಮಃ। ಋಕ್ಷವಾನರಸಂಘಾತಿನೇನಮಃ। ಚಿತ್ರಕೂಟಸಮಾಶ್ರಯಾಯನಮಃ। ಜಯಂತತ್ರಾಣವರದಾಯನಮಃ। ಸುಮಿತ್ರಾಪುತ್ರ ಸೇವಿತಾಯನಮಃ। ಸರ್ವದೇವಾಧಿದೇವಾಯನಮಃ। ಮೃತವಾನರಜೀವನಾಯ

ನಮಃ। ಮಾಯಾಮಾರೀಚಹನ್ತ್ರೇನಮಃ। ಮಹಾದೇವಾಯನಮಃ। ಮಹಾಭುಜಾಯ ನಮಃ। ಸರ್ವದೇವಸ್ತುತಾಯನಮಃ। ಸೌಮ್ಯಾಯನಮಃ। ಬ್ರಹ್ಮಣ್ಯಾಯನಮಃ। ಮುನಿಸಂಸ್ತುತಾಯನಮಃ। ಮಹಾಯೋಗಿನೇನಮಃ। ಮಹೋದರಾಯನಮಃ। ಸುಗ್ರೀವೇಪ್ಸಿತರಾಜ್ಯದಾಯನಮಃ। ಸರ್ವಪುಣ್ಯಾಧಿಕಫಲಾಯ ನಮಃ। ಸ್ಮೃತಸರ್ವಾಘನಾಶನಾಯನಮಃ। ಆದಿಪುರುಷಾಯನಮಃ। ಪರಮಪುರುಷಾಯನಮಃ॥ ಪುಣ್ಯೋದಯಾಯನಮಃ। ದಯಾಸಾಗರಾಯನಮಃ। ಪುರಾಣಪುರುಷೋತ್ತಮಾಯ ನಮಃ॥ ಸ್ಮಿತವಕ್ತ್ರಾಯನಮಃ। ಮಿತಭಾಷಿಣೇನಮಃ। ಪೂರ್ವಭಾಷಿಣೇನಮಃ॥ ರಾಘವಾಯನಮಃ। ಅನಂತಗುಣಗಂಭೀರಾಯನಮಃ। ಧೀರೋದಾತ್ತ–ಗುಣೋತ್ತಮಾಯನಮಃ। ಮಾಯಾಮಾನುಷಚಾರಿತ್ರಾಯನಮಃ। ಮಹಾದೇವಾಧಿ–ಪೂಜಿತಾಯನಮಃ। ಸೇತುಕೃತೇನಮಃ। ಜಿತವಾರಾಶಯೇನಮಃ। ಸರ್ವತೀರ್ಥ–ಮಯಾಯನಮಃ। ಹರಯೇನಮಃ। ಶ್ಯಾಮಾಂಗಾಯನಮಃ। ಸುಂದರಾಯನಮಃ॥ ಶೂರಾಯನಮಃ। ಪೀತವಾಸಸೇನಮಃ। ಧನುರ್ಧರಾಯನಮಃ। ಸರ್ವಯಜ್ಞಾಧಿ–ಪಾಯನಮಃ॥ ಯಜ್ವಿನೇನಮಃ। ಜರಾಮರಣವರ್ಜಿತಾಯನಮಃ। ವಿಭೀಷಣ–ಪ್ರತಿಷ್ಠಾತ್ರೇನಮಃ। ಸರ್ವಾವಗುಣವರ್ಜಿತಾಯನಮಃ। ಪರಮಾತ್ಮನೇನಮಃ। ಪರಬ್ರಹ್ಮಣೇನಮಃ। ಸಚ್ಚಿದಾನಂದವಿಗ್ರಹಾಯನಮಃ। ಪರಂಜ್ಯೋತಿಷೇನಮಃ। ಪರಂಧಾಮ್ನೇನಮಃ। ಪರಾಕಾಶಾಯನಮಃ। ಪರಾತ್ಪರಾಯನಮಃ। ಪತಿಪಾರಗಾಯ ನಮಃ। ಪಾರಾಯನಮಃ। ಸರ್ವದೇವಾತ್ಮಕಾಯನಮಃ। ಪರಸ್ಮೃತೇನಮಃ। ಶ್ರೀರಾಮಾಯನಮಃ॥ ನಾನಾವಿಧ ಪುಷ್ಪಪೂಜಾನ್ ಸಮರ್ಪಯಾಮಿ

ವನಸ್ಪತಿರಸೋದ್ಭೂತೋ। ಗಂಧಾಢ್ಯೋ ಗಂಧಉತ್ತಮಃ॥ ರಾಮಚಂದ್ರ ಮಹೀಪಾಲ ಧೂಪೋಯಂ ಪ್ರತಿಗೃಹ್ಯತಾಂ॥ ಯತ್ಪುರುಷಮಿತಿ ಧೂಪಂ॥ ಜ್ಯೋತಿಷಾಂಪತಯೇತುಭ್ಯಂ ನಮೋ ರಾಮಾಯ ವೇಧಸೇ॥ ಗೃಹಾಣ ದೀಪಕಂ ಚೈವ। ತ್ರೈಲೋಕ್ಯ ತಿಮಿರಾಪಹಂ॥ ಬ್ರಾಹ್ಮಣೋಸ್ಯೇತಿ ದೀಪಂ॥ ಇದಂ ದಿವ್ಯಾನ್ನ–ಮಮೃತಂ। ರಸ್ಯೈಃ ಷಡ್ಭಿಃ ಸಮನ್ವಿತಂ॥ ರಾಮಚಂದ್ರೇಶ ನೈವೇದ್ಯಂ। ಸೀತೇಶಪ್ರತಿ ಗೃಹ್ಯತಾಂ॥ ಚಂದ್ರಮಾ ಇತಿನೈವೇದ್ಯಂ॥ ತತಃ ಆಚಮನಂ॥ ಇದಂ ಫಲಮಿದಿಫಲಂ ॥ ನಾಗವಲ್ಲೀದಳೈರ್ಯುಕ್ತಂ॥ ಪೂಗೀಫಲಸಮನ್ವಿತಂ॥ ತಾಂಬೂಲಂ ಗೃಹ್ಯತಾಂರಾಮ। ಕರ್ಪೂರಾದಿ ಸಮನ್ವಿತಂ॥ ನಾಭ್ಯಾ ಅಸೀದಿತಿ ತಾಂಬೂಲಂ। ಹಿರಣ್ಯಗರ್ಭೇತಿ ದಕ್ಷಿಣಾಂ॥ ನೃತ್ಯೈರ್ಗೀತ್ಯೈಶ್ಚವಾದ್ಯೈಶ್ಚ। ಪುರಾಣಪಠಣಾದಿಭಿಃ॥ ರಾಜೋಪಚಾರೈ–ಅಖಿಲೈ। ಸಂತುಷ್ಟೋಭವ ರಾಘವ ಮಂಗಳಾರ್ಥಂ ಮಹೀಪಾಲಂ। ನೀರಾಜನಮಿದಂ ಹರೇ॥ ಸಂಗೃಹಾಣ ಜಗನ್ನಾಥರಾಮಚಂದ್ರ ನಮೋಸ್ತುತೇ॥ ಕರ್ಪೂರನೀರಾಜನಂ॥ ನಮೋ ದೇವಾದಿ ದೇವಾಯ। ರಘುನಾಥಾಯ ಶಾರ್ಙ್ಗಣೇ॥ ಚಿನ್ಮಯಾನಂದ ರೂಪಾಯ। ಸೀತಾಯಾಃ ಪತಯೇ ನಮಃ। ಸಪ್ತಾಸ್ಯಾಸನ್ನಿತಿ ನಮಸ್ಕಾರಂ॥

ಸರ್ವಲೋಕಶರಣ್ಯಾಯ। ರಾಮಚಂದ್ರಾಯವೇಧಸೇ ॥ ಬ್ರಹ್ಮಾನಂದ್ಯೈಕರೂಪಾಯ ಸೀತಾಯಾಃ ಪತಯೇನಮಃ। ಯಜ್ಞೇನೇತಿ ಪುಷ್ಪಾಂಜಲಿಂ॥ ಯಾನಿಕಾನಿ ಚ ಪಾಪಾನಿ ಬ್ರಹ್ಮಹತ್ಯಾ ಸಮಾನಿಚ ॥ ತಾನಿತಾನಿ ವಿನಶ್ಯಂತಿ। ಪ್ರದಕ್ಷಿಣಪದೇಪದೇ ॥ ಇತಿಪ್ರದಕ್ಷಿಣಂ ॥ ಅಶೋಕಕುಸುಮೈರ್ಯುಕ್ತಂ। ರಾಮಾರ್ಘ್ಯಂ ಚ ನಿವೇದಯೇತ್ ದಶಾನನ ವಧಾರ್ಥಾಯ। ಧರ್ಮಸಂಸ್ಥಾಪನಾಯ ಚ ॥ ರಾಕ್ಷಸಾನಾಂ ವಿನಾಶಾಯ ॥ ದೈತ್ಯಾನಾಂನಿಧನಾಯ ಚ। ಪರಿತ್ರಾಣಾಯ ಸಾಧೂನಾಂ॥ ಜಾತೋರಾಮಃಸ್ವಯಂ ಹರಿಃ ॥ ಗೃಹಾಣಾರ್ಘ್ಯಂ ಮಯಾದತ್ತಂ। ಭಾತೃಭಿಃ ಸಹಿತೋನಘ॥ ಇತ್ಯರ್ಘ್ಯಂ

ಇತಿಪೂಜಾವಿಧಾನಂ ಸಂಪೂರ್ಣಂ

## ಅಥ ಕಥಾ ಪ್ರಾರಂಭಃ

ಅಗಸ್ತ್ಯ ಉವಾಚ ॥ ರಹಸ್ಯಂಕಥಯಿಷ್ಯಾಮಿ ಸುತೀಕ್ಷ್ಣ ಮುನಿಸತ್ತಮ। ಚೈತ್ರಮಾಸೇನವಮ್ಯಾಂತು ಶುಕ್ಲಪಕ್ಷೇರಘೋತ್ತಮಃ ॥ ಪ್ರಾದುರಾಸೀತ್ತದಾಬ್ರಹ್ಮ ಬ್ರಹ್ಮಾನಂದ್ಯೈಕ ಕೇವಲಃ। ತತ್ರಜಾಗರಣಂ ಕುರ್ಯಾದ್ರಾಮಸ್ಯಪುರುತೋ ಬುಧಃ। ಪ್ರತಿಮಾಯಾಃ ಯಥಾಶಕ್ತಿ ಪೂಜಾಕಾರ್ಯಾ ಯಥಾವಿಧಿ। ಪ್ರಾತರ್ದಶಮ್ಯಾಂ ಸ್ನಾತ್ವೈವ ಕೃತ್ವಾ ಸಂಧ್ಯಾಧಿಕಾಂ ಕ್ರಿಯಾಃ ॥ ಸಂಪೂಜ್ಯ ವಿಧಿವದ್ರಾಮಂ ಭಕ್ತಿವಿತ್ತಾನುಸಾರತಃ। ಬ್ರಾಹ್ಮಣಾ ಭೋಜಯೇತ್ಸಮ್ಯಕ್ ದಕ್ಷಿಣಾಭಿಶ್ಚ ತೋಷಯೇತ್॥ ಗೋ ಭೂ ತಿಲ ಹಿರಣ್ಯಾದ್ಯೈರ್ವಸ್ತ್ರಾಲಂಕಾರ ಭೂಷಣೈಃ। ರಾಮಭಕ್ತ್ಯಾ ಪ್ರಯತ್ನೇನಪ್ರೀತಿಯೇ–ತ್ಪರಯಾ ಮುದಾ ॥ ಏವಂ ಯಃ ಕುರುತೇ ಭಕ್ತ್ಯಾ ಶ್ರೀರಾಮನವಮೀವ್ರತಂ। ಅನೇಕ ಜನ್ಮಜಾತಾನಿ ಪಾಪಾನಿ ಸುಬಹೂನಿ ಚ ॥ ಜ್ಞಾನೇನ ಭಸ್ಮಸಾತ್ಕೃತ್ಯ ಯಾತಿ ವಿಷ್ಣೋಃ ಪರಂಪದಂ। ಸರ್ವೇಷಾಮಪ್ಯಯಂ ಧರ್ಮೋ ಭುಕ್ತಿ ಮುಕ್ತ್ಯೈಕಸಾಧನಃ॥ ಅಶುಚಿರ್ವಾಪಿ ಪಾಪಿಷ್ಠಃ ಕೃತ್ವೇದಂ ವ್ರತಮುತ್ತಮಂ। ಪೂಜ್ಯಾಸ್ಸ್ಯಾತ್ಸರ್ವಭೂತಾನಾಂ ಯಥಾ ರಾಮಸ್ತಥೈವತು॥ ಯಸ್ತು ರಾಮನವಮ್ಯಾಂ ಪ್ಯೆ ಭುಂಗಸೇತು ನರಾಧಮಃ ಕುಂಭಿ ಪಾಕೇಷು ಘೋರೇಷು ಪತತ್ಯೇವನ ಸಂಶಯಃ ॥ ಅಕೃತ್ವಾ ರಾಮನವಮೀ ವ್ರತಂ ಸರ್ವೋತ್ತಮೋತ್ತಮಂ ವ್ರತಾನ್ಯನಾನಿ ಕುರುತೇ ನ ತಸ್ಯ ಫಲಭಾಗ್ಭವೇತ್ ॥ ಮಹಾಂತ್ಯೈಪಿ ಪ್ರಣಶ್ಯಂತಿ ಪಾಪಾನಿ ನವಮಿ ವ್ರತಾತ್। ಏಕಮಪಿತತೋ ಭಕ್ತ್ಯಾಂ ಶ್ರೀರಾಮನವಮೀಂ ವ್ರತೇ ॥ ಉಪೋಷ್ಯ ಕೃತಕೃತ್ಯತ್ಸರ್ವಂ ಪಾಪ್ಯೈಃ ಪ್ರತಿಮುಚ್ಯತೇ । ತತೋ ರಾಮನವಮ್ಯಾಂತು ಶ್ರೀರಾಮಪ್ರತಿಮಾಪರಃ॥ ವಧಾನೇನ ನರಶ್ರೇಷ್ಠಃ ಸಮುಕ್ತೋನಾತ್ರ ಸಂಶಯಃ ॥ ಸುತೀಕ್ಷ್ಣಃ ॥ ಪ್ರಾಯೇನ ಹಿ ನಾರಾಃ ಸರ್ವೇ ಹರಿದ್ರಾಃ ಕೃಪಣಾಮುದೇ। ಕಥಂ ಕುರ್ವಂತಿ ವಿಸ್ತಾರ್ಯ ಶ್ರೀರಾಮನವಮೀವ್ರತಂ ॥ ಅಗಸ್ತ್ಯಃ ದರಿದ್ರಶ್ಚ ಮಹಾಭಾಗಸ್ಯಸ್ವವಿತ್ತಾನುಸಾರತಃ। ಫಲಾರ್ಧೇನ ತದರ್ಧೇನ ತದಾರ್ಧಾರ್ಧೇನ–ವಾಪುನಃ। ವಿತ್ತಶಾಠ್ಯಮಕತ್ಯೈವ ಕುರ್ಯಾದೇವ ವ್ರತಂ ಮುನೇ। ಯದಿ ಘೋರತರ

ದೃಷ್ಟಂ ಪಾತಕಂ ರಹಸಿ ಕ್ವಚಿತ್ । ಅಕಿಂಚನೋಪಿ ಯತ್ನೇನ ಉಪೋಷ್ಯನವಮೀ ದಿನೇ। ಏಕಚಿತ್ತೋತಿಯತ್ನೇವ ಸರ್ವಪಾಪ್ಯೈಃ ಪ್ರಮುಚ್ಯತೇ ಪ್ರಾಪ್ತೇ ಶ್ರೀರಾಮನವಮಿಾ ದಿನೇ ಮರ್ತ್ಯೋವಿಮೂಢಧೀಃ। ಉಪೋಷಣಂ ನ ಕುರುತೇ ಕುಂಭಿಪಾಕೇಷು ಪಚ್ಯತೇ ॥ ಯತ್ಕಿಂಚಿದ್ರಾಮಮುದ್ದಿಶ್ಯ ಕ್ರಿಯತೇ ನ ಸ್ವಶಕ್ತಿತಃ । ತಾರಕೇಸತು ಮೂಢಾತ್ಮಾ ಪಚ್ಯತೇ ನಾತ್ರ ಸಂಶಯಃ ॥ ಸುತೀಕ್ಷ್ಣಃ ॥ ಯಾವಾಷ್ಟಕೇಷು ಪೂಜಾ ವೈ ತತ್ರಭೋಕ್ತಾ ಮಹಾಮುನೇ ಮೂಲಮಂತ್ರೇಣ ಸಂಯುಕ್ತಾಂ ತಾಂ ತಥಾಂ ವದಸುವ್ರತ ॥ ಅಗಸ್ತ್ಯ ॥ ಸರ್ವೇಷಾಂ ರಾಮಮಂತ್ರೇಣ ಮಂತ್ರರಾಜಂ ಷಡಕ್ಷರಂ। ಇದಂ ತು ಸ್ಕಾಂದೇ ಮೋಕ್ಷಖಂಡೇ ರುದ್ರಗೀತಾಯಾಂ ॥ ಶ್ರೀರಾಮಂ ಪ್ರತಿರುದ್ರವಾಕ್ಯಂ ಮುಮೂರ್ಷೋ–ರ್ಕಣಿಕರ್ಣ್ಯಾತೇ ಅಘೋದಕನಿವಾಸಿನಃ । ಅಹಂ ದಿಶಾಮಿತೇ ಮಂತ್ರಂ ತಾರಕಸ್ಯೋಪ–ದೇಶಿತಃ ಶ್ರೀರಾಮ ರಾಮರಾಮೇತಿ ಏತತ್ತಾರಕಮುಚ್ಯತೇ ॥ ಆತಸ್ತಂ ಜಾನಕೀನಾಥ ಪರಬ್ರಹ್ಮಭಿಧೀಯತೇ । ತಾರಕೇ ಬ್ರಹ್ಮಚೇತ್ಯುಕ್ತಂ ತೇನ ಪೂಜಾವ್ರತಸ್ಯತೇ ॥ ಪೀಠಾಂಗದೇವತಾನಾಂತು ಆವೃತ್ತಿಂ ನಾಂ ತಥೈವ ಚ । ಆದಾವೇವ ಪ್ರಕುರ್ವೀತ ದೇವಸ್ಯಪ್ರತಿಮಾರ್ಚನಂ॥ ಉಪಚಾರ್ಯೈಃ ಶೋಡಷಭಿಃ ಪೂಜಾಕಾರ್ಯಾ ಯಥಾವಿಧಿ। ಆವಾಹನಂ ಸ್ಥಾಪನಂ ಚ ಸಮ್ಮುಖೀಕರಣಂ ತಥಾ ॥ ಏವಂ ಮುದ್ರಾಪ್ರಾರ್ಥನಂ ಚ ಪೂಜಾಮುದ್ರಾಂ ಪ್ರಯತ್ನತಃ। ಶಂಖಪೂಜಾಂ ಪ್ರಕುರ್ವೀತ ಪೂರ್ವೋಕ್ತವಿಧಿನಾಂ ತತಃ ॥ ಕಲಶಂ ವಾಮಭಾಗೇಚ ಪೂಜಾದ್ರವ್ಯಾಣಿಚಾದರಾತ್। ಪೀಠೇ ಸಂಪೂಜ್ಯಯತ್ನೇನ ಆತ್ಮಾನಂ ಮಂತ್ರಮುಚ್ಚರೇತ್ ॥ ಪಾತ್ರಾಸಾದನಮಪ್ಯೇವಂ ಕುರ್ಯಾದ್ಯಾಮೇಷ್ವ–ತಂದ್ರಿತಃ ಪೀತಾಂಬರಾಣಿ ದೇವಾಯ ಪ್ರಾರ್ಥಹುನ್ನರ್ಚ್ಯಯೇತ್ಸುಧೀಃ॥ ಸ್ವರ್ಣ–ಯಜ್ಞೋಪವೀತಾನಿ ದದ್ಯಾದ್ದೇವಾಯ ಭಕ್ತಿತಃ। ನಾನಾರತ್ನ ವಿಚಿತ್ರಾಣಿ ದದ್ಯಾದಾಭರಣಾನಿಚ॥ ಹಿಮಾಂಬುಘೃಷ್ಟರುಚಿರಂ ಘನಸಾರಂ ಮನೋಹರಂ। ಕ್ರಮೋಕ್ತಮೂಲಮಂತ್ರೇಣ ಉಪಚಾರಾನ್ ಪ್ರಕಲ್ಪಯೇತ್॥ ಕಲ್ಹಾರೈಃ ಕೇತಕೀ ಜಾಜಿ ಪುನ್ನಾಗಾದ್ಯೈಃ ಪ್ರಪೂಜಯೇತ್ । ಚಂಪಕೈಃ ಶತಪತ್ರೈಶ್ಚ ಸುಗಂಧೈಃ ಸುಮನೋಹರೈಃ ॥ ಪಾದ್ಯಂ ಚಂದನಂ ಧೂಪೈಶ್ಚ ತತ್ತನ್ಮಂತ್ರೈಃ ಪ್ರಪೂಜಯೇತ್ । ಭಕ್ಷ್ಯಭೋಜ್ಯಾದಿಕಂ ಭಕ್ತ್ಯಾ ದೇವಾಯ ವಿಧಿನಾರ್ಚ್ಯಯೇತ್॥ ಏನಸೋಪಸ್ಕರಂದೇಯಂ ದತ್ವಾಪಾಪ್ಯೈಃ ಪ್ರಮುಚ್ಯತೆ। ಜನ್ಮಕೋಟಿಕೃತೈಘೋರೆ ನಾನಾರೂಪೈಶ್ಚದಾರುಣೈಃ ವಿಮುಕ್ತಸ್ಸ್ಯಾತ್ ಕ್ಷಣಾದೇವ ರಾಮ ಏವ ಭವೇನ್ನರ್ನನೇ। ಶುದ್ಧದಾನಸ್ಸದಾತವ್ಯಂ ಶ್ರೀರಾಮನವಮೀವ್ರತಂ॥ ಸರ್ವಲೋಕಹಿತಾಯೇದಂ ಪವಿತ್ರಂ ಪಾಪನಾಶನಂ। ಲೋಹೇನ ನಿರ್ಮಿತಂವಾಪಿ ಶಿಲಯಾದಾರುಣಾಪಿವಾ॥ ಏಕೇನೈವ ಪ್ರಕಾರೇಣ ಯಸ್ಮೈಕಸ್ಮೈ ಮಹಾಮುನೇ । ಕೃತಂ ಸರ್ವ ಪ್ರಯತ್ನೇನ ಯತ್ಕಿಂಚಿದಪಿ ಭಕ್ತಿತಃ ॥ ಜಪೇದೇಕಾಂತಮಾಸೀನೋ ಯಾವಂತ್ಯ ದಶಮೀದಿನಂ। ಅನೇನಸ್ಯಾತ್ಪುನಃಪೂಜಾ ದಶಮ್ಯಾಂ ಭೋಜಯೇದ್ವಿಜಾನ್॥ ಭಕ್ಷ್ಯಾಭೋಜ್ಯೈರ್ಬಹುವಿಧೈ ದದ್ಯಾದ್ಭಕ್ತ್ಯಾಚ





ಅಷ್ಟೋತ್ತರಶತಸಹಸ್ರನಾನಾದಿನ್ಯರ್ಚಯತ್ವಾ ॥ ವನಸ್ಪತಿರಸೋದ್ಭೂತೋ। ಗಂಧಾಢ್ಯಶ್ಚಮನೋಹರಃ। ಆಘ್ರೇಯಸ್ಸರ್ವದೇವಾನಾಂ ಧೂಪೋಯಂ ಪ್ರತಿ–ಗೃಹ್ಯತಾಂ॥ ಯತ್ಪುರುಷಮಿತಿ ಧೂಪಂ॥ ಸಾಜ್ಯಂತ್ರಿವರ್ತಿಸಂಯುಕ್ತಂ ವಹ್ನಿನಾಯೋಚಿತಂ ಮಯಾ। ಗೃಹಾಣ ಮಂಗಳಂ ದೀಪಂ ತ್ರೈಲೋಕ್ಯಂತಿಮಿರಾಪಹ॥ ಬ್ರಾಹ್ಮಣೋ–ಸ್ಯೇತಿದೀಪಂ॥ ನೈವೇದ್ಯಂ ಗೃಹ್ಯತಾಂ ದೇವ ಭಕ್ತಿಂಮೇಹ್ಯಚಲಾಂಕುರು॥ ಶಿವಪ್ರೀತಂ ವರಂ ದೇಹಿ ಪರತ್ರಚ ಪರಾಗತಿಂ॥ ಚಂದ್ರಮಾ ಇತಿ ನೈವೇದ್ಯಂ॥ ಪೂಗೀಫಲಂ ಮಹದ್ದಿವ್ಯಂ ನಾಗವಲ್ಯಾದಳೈರ್ಯುತಂ ॥ ಕರ್ಪೂರ ಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ॥ ನಾಭ್ಯ ಆಸೀದಿತಿ ತಾಂಬೂಲಂ॥ ಹಿರಣ್ಯಗರ್ಭೇತಿ ದಕ್ಷಿಣಾಂ॥ ಚಕುರ್ದಂ ಸರ್ವಲೋಕಾನಾಂ ತಿಮಿರಸ್ಯನಿವಾರಣಂ॥ ಆರ್ತಿಕ್ಯಂ ಕಲ್ಪಿತಂ ಭಕ್ತ್ಯಾ ಗೃಹಾಣ ಪರಮೇಶ್ವರ॥ ವೇದಾಹಮಿತಿ ನೀರೀಜನಂ॥ ಫಲೇಚಪಲಿತಂ ಸರ್ವ ತ್ರೈಲೋಕ್ಯಂ ಸಚರಾಚರ। ತಸ್ಮಾತ್ಫಲಪ್ರದಾನೇನ ಸಫಲಾಶ್ಚ ಮನೋರಥಾಃ॥ ಫಲಸಮರ್ಪಣಂ॥

ಯಾನಿಕಾನಿಚ ಪಾಪಾನಿ ಬ್ರಹ್ಮಹತ್ಯಾ ಸಮಾನಿಚ॥ ತಾನಿತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ॥ ಇತಿ ಪ್ರದಕ್ಷಿಣಾನಿ॥ ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಸುರೇಶ್ವರ॥ ಯತ್ಪೂಜಿತಂ ಮಯಾದೇವ ಪರಿಪೂರ್ಣಂ ತದಸ್ತು ಮೇ॥ ನಮಸ್ಕಾರಾಃ ॥ ಹರಿಃ ಓಂ॥ ಸದ್ಯೋಜಾತಾದಿ ಮಂತ್ರೇಣ ಮಂತ್ರಪುಷ್ಪಂ॥ ಶ್ರೂಯತಾಂ ಧರ್ಮಸರ್ವಸ್ವಂ ಶಿವರಾತ್ರೌ ಶಿವಾರ್ಚನಂ ವ್ರತಲಗ್ನವಿಧಾನೇನ ಸ್ವರ್ಗಂ ಪುಣ್ಯೇನಕರ್ಮಣಾ॥ ಕೃತ್ವಾಸ್ನಾನಂ ಶುಚಿರ್ಭೂತ್ವಾಧೌತವಸ್ತ್ರಸಮನ್ವಿತಃ॥ಸ್ಥಾಪಯೇದ್ದೇವೇಶಂ ಮಂತ್ರೈರ್ವೇಪಸಮುದ್ಭವೈಃ। ತತಃ ಪೂಜಾಂ ಕರ್ತವ್ಯಾ ಪೂರ್ವೋಕ್ತವಿಧಿನಾ ತತಃ॥ ನಮೋ ಯಜ್ಞ ಜಗನ್ನಾಥ ನಮಸ್ತ್ರಿಭುವನೇಶ್ವರ॥ ಪೂಜಾಂ ಗೃಹಾಣಮುದ್ಧತಾಂ ಮಹೇಶ ಪ್ರಣಮಾಮಿತೇ॥ ಇತಿ ಪ್ರಥಮಪ್ರಹರ ಪೂಜಾ। ಪೂರ್ವೇನಂದೀ ಮಹಾಕಾಂತಾ ಗಣಶ್ಶೃಂಗೀಚದಕ್ಷಿಣೆ ವೃಷಸ್ಕಂದೌ ಪಶ್ಚಿಮೇಚ ದೇಶಕಾಲೌ ತಥೋತ್ತರೆ। ಗಂಗಾ ಚ ಯಮುನಾಚೈವ ಪಾರ್ಶ್ವೇ ಶಂಭೋರ್ವ್ಯರತಸ್ಥಿತೆ॥ ನಮೋವ್ಯವಕ್ತಾಯ ಸೂಕ್ಷ್ಮಾಯ ನಮಸ್ತೇ ತ್ರಿಪುರಾಂತಕ। ಪೂಜಾಂ ಗೃಹಾಣಂ ದೇವೇಶ ಯಥಾಶಕ್ತ್ಯುಪಪಾದಿತಾಂ॥ ಇತಿ ದ್ವಿತೀಯಪ್ರಹರೆ। ಬದ್ಧೋಹಂ ವಿವಿಧೈಃ ಪಾಪೈಃ ಸಂಸಾರ ಭವಬಂಧನೆ॥ ಪತಿತಂ ಮೋಹಜ್ವಾಲೆಮಾಂ ತ್ವಂ ಸಮುದ್ಧರ ಶಂಕರ ಇತಿ ತೃತೀಯಪ್ರಹರೆ॥ ನಮಃ ಶಿವಾಯ ಶಾಂತಾಯ ಸರ್ವಪಾಪಹರಾಯಚ॥ ಶಿವರಾತ್ರೌ ಮಯಾದತ್ತಂ ಗೃಹಾಣಾರ್ಘ್ಯಂ ಪ್ರಸೀದಮೇ ಇದಮರ್ಘ್ಯಂ॥ ದುಃಖದಾರಿದ್ರ್ಯ ಭಾವೈಶ್ಚದಗ್ಧೋಹಂ ಪಾರ್ವತೀಪತೇ ಮಾಂ ವೈ ತ್ರಾಹಿ ಮಹಾಬಾಹೋ ಗೃಹಾಣಾರ್ಘ್ಯಂ ನಮೋಸ್ತುತೇ॥ ಇದಮರ್ಘ್ಯಂ। ಕಿಂ ನಜಾನಾಸಿ ದೇವೇಶತಾವದ್ಭಕ್ತಿಂ ಪ್ರಯಚ್ಛಮೆ॥ ಸ್ವಪಾದಾಗ್ರತಲೇದೇವದಾಸ್ಯಂ ದೇಹಿ ಜಗತ್ಪತೇ॥ ಪ್ರಾರ್ಥನ॥ ಪುನಃ ಪೂಜಾಃ॥ ಯಸ್ಯಸ್ಮೃತ್ಯೇತಾದಿನಾ ಸಮಾಪ್ತಂ॥

ಮಹಾಶಿವರಾತ್ರೀ ವ್ರತ ಸಂಪೂರ್ಣಂ.

# ವಟ ಸಾವಿತ್ರೀ ಹುಣ್ಣಿಮೆ ವ್ರತ

(ಜ್ಯೇಷ್ಠಪೂರ್ಣಿಮಾ)

(ಪತಿವ್ರತಾ ಸ್ತ್ರೀಯರಿಗೆ ವೈಧವ್ಯದುಃಖ ನಿವಾರಣೆಗಾಗಿ ಈ ವ್ರತವನ್ನು ಜ್ಯೇಷ್ಠ-ಮಾಸದ ಪೂರ್ಣಿಮೆಯಂದು ಆಚರಿಸುವ ಸಂಪ್ರದಾಯವಿದೆ. ಮಂಗಳ ಸ್ನಾನಾದಿಗಳನ್ನು ಮುಗಿಸಿ, ಪೂಜೆಗೆ ಅಣಿಮಾಡಿಕೊಳ್ಳಬೇಕು. ಜಗತ್ತಿಗೆ ಆದರ್ಶ ದಾಂಪತ್ಯವಾಗಿ ಪತಿಯ ಪ್ರಾಣವನ್ನು ಉಳಿಸಿಕೊಂಡ ಸಾವಿತ್ರಿಯ ಮಹಿಮೆ ಈ ವ್ರತಕ್ಕೆ ಸಾಕ್ಷಿ.)

## ಪೂಜಾವಿಧಾನ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ॥
(ಘಂಟಾನಾದ ಮಾಡಿ) ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಕ್ಷಸಾಂ।
ಕುರ್ವೇ ಘಂಟಾರವಂ ತತ್ರ ದೇವತಾಹ್ವಾನ ಲಾಂಛನಂ ॥

## ದ್ವಿರಾಚಮ್ಯ(ಎರಡುಸಲ ಆಚಮನ ಮಾಡಿ)

| | |
|---|---|
| ಕೇಶವಾಯ ನಮಃ | ಸಂಕರ್ಷಣಾಯ ನಮಃ |
| ನಾರಾಯಣಾಯ ನಮಃ | ವಸುದೇವಾಯ ನಮಃ |
| ಮಾಧವಾಯ ನಮಃ | ಪ್ರದ್ಯುಮ್ನಾಯ ನಮಃ |
| ಗೋವಿಂದಾಯ ನಮಃ | ಅನಿರುದ್ಧಾಯ ನಮಃ |
| ವಿಷ್ಣವೇ ನಮಃ | ಪುರುಷೋತ್ತಮಾಯ ನಮಃ |
| ಮಧುಸೂದನಾಯ ನಮಃ | ಅಧೋಕ್ಷಜಾಯ ನಮಃ |
| ತ್ರಿವಿಕ್ರಮಾಯ ನಮಃ | ನಾರಸಿಂಹಾಯ ನಮಃ |
| ವಾಮನಾಯ ನಮಃ | ಅಚ್ಯುತಾಯ ನಮಃ |
| ಶ್ರೀಧರಾಯ ನಮಃ | ಜನಾರ್ದನಾಯ ನಮಃ |
| ಹೃಷೀಕೇಶಾಯ ನಮಃ | ಉಪೇಂದ್ರಾಯ ನಮಃ |
| ಪದ್ಮನಾಭಾಯ ನಮಃ | ಹರಯೇನಮಃ ನಮಃ |
| ದಾಮೋದರಾಯ ನಮಃ | ಶ್ರೀಕೃಷ್ಣಾಯ ನಮಃ |

## (ಪ್ರಾರ್ಥನಾ)

ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನನಾಶೋ ಗಣಾಧಿಪಃ ॥

ಧೂಮ್ರಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ

ದ್ವಾದಶೈತಾನಿ ನಾಮಾನಿ ಯಃ ಪಠೇತ್ ಶೃಣುಯಾದಪಿ ।

ವಿದ್ಯಾರಂಭೇ ವಿವಾಹೇ ಚ ಪ್ರವೇಶೇ ನಿರ್ಗಮೇ ತಥಾ

ಸಂಗ್ರಾಮೇ ಸಂಕಟೇ ಚೈವ ವಿಘ್ನಸ್ತಸ್ಯ ನ ಜಾಯತೇ॥

ಸರ್ವಮಂಗಲ ಮಾಂಗಲ್ಯೇ ಶಿವೇ ಸರ್ವಾರ್ಥ ಸಾಧಿಕೇ।

ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ॥

॥ ಶ್ರೀ ಲಕ್ಷ್ಮೀನಾರಾಯಣಾಭ್ಯಾಂ ನಮಃ । ಕುಲದೇವತಾಭ್ಯೋನಮಃ ॥ ಇಷ್ಟದೇವತಾ ಗ್ರಾಮದೇವತಾ ಸ್ಥಾನದೇವತಾ ವಾಸ್ತುದೇವತಾಭ್ಯೋನಮಃ । ಮಾತೃಭ್ಯೋನಮಃ । ಪಿತೃಭ್ಯೋನಮಃ । ಆಚಾರ್ಯೇಭ್ಯೋನಮಃ । ನಿರ್ವಿಘ್ನಮಸ್ತು॥

## ವ್ರತಸಂಕಲ್ಪ

ಶುಭೇ ಶೋಭನೇ ಮುಹೂರ್ತೇ ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ರೀಶ್ವೇತವರಾಹ ಕಲ್ಪೇ ವೈವಸ್ವತ ಮನ್ವಂತರೇ ಭರತವರ್ಷೇ ಭರತಖಂಡೇ ಜಂಬೂದ್ವೀಪೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇತೀರೇ ಶಾಲೀವಾಹನ ಶಕೇ...... ಸಂವತ್ಸರೇ ಉತ್ತರಾಯಣೇ ಗ್ರೀಷ್ಮಋತೌ ಜ್ಯೇಷ್ಠಮಾಸೇ ಶುಕ್ಲಪಕ್ಷೇ ಪೌರ್ಣಮಾಸ್ಯಾಂ ತಿಥೌ ...... ವಾಸರೇ..... ನಕ್ಷತ್ರೇ ಶುಭಕರಣ ಶುಭಯೋಗ ಏವಂ ಗುಣ ವಿಶಿಷ್ಠಾಯಾಂ ಶುಭ ತಿಥೌ ಮಮ ಆತ್ಮನಃ ಸಕಲ ಶಾಸ್ತ್ರ–ಪುರಾಣೋಕ್ತ ಫಲಪ್ರಾಪ್ತ್ಯರ್ಥಂ ಇಹ ಜನ್ಮನಿ ಜನ್ಮಾಂತರೇ ಚ ಅಖಂಡ ಸೌಭಾಗ್ಯ ಪುತ್ರ ಪೌತ್ರಾದಿ ಧನಧಾನ್ಯ ದೀರ್ಘಾಯುಷ್ಯಾದಿ ಸಕಲ ಸಿದ್ಧಿದ್ವಾರಾ ಸಾವಿತ್ರೀ ವ್ರತಾಂಗತ್ವೇನ ಬ್ರಹ್ಮಸಾವಿತ್ರೀ ಪ್ರೀತ್ಯರ್ಥಂ ಯಥಾಜ್ಞಾನಂ ಯಥಾಶಕ್ತಿ ಷೋಡಶೋಪಚಾರ ಪೂಜಾಂ ಕರಿಷ್ಯೇ॥(ಮಂತ್ರಾಕ್ಷತೆ ನೀರು ಬಿಡಿ.)

ತತ್ರ ಆದೌ ನಿರ್ವಿಘ್ನತಾ ಸಿದ್ಧ್ಯರ್ಥಂ ಮಹಾಗಣಪತಿ ಪೂಜಾಂ ಚ ಕರಿಷ್ಯೇ ॥

ವಕ್ರತುಂಡ ಮಹಾಕಾಯ ಕೋಟಿಸೂರ್ಯ ಸಮಪ್ರಭ ।

ನಿರ್ವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥

ಶ್ರೀ ಮನ್ಮಹಾಗಣಪತಯೇ ನಮಃ ಧ್ಯಾನಾವಾಹನಾದಿ ಷೋಡಶೋಪಚಾರ ಪೂಜಾಂ ಕರಿಷ್ಯೇ॥ (ಗಣಪತಿಯನ್ನು ಪೂಜಿಸಬೇಕು.)

ಆಸನಾಯನಮಃ । ಕಮಲಾಸನಾಯ ನಮಃ । ಕೂರ್ಮಾಸನಾಯ ನಮಃ ।

## ಕಲಶಪೂಜೆ

(ಕಲಶದ ಮೇಲೆ ಬಲಹಸ್ತವನ್ನಿಟ್ಟು)

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।

ಮೂಲೇ ತತ್ರಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ॥

ಕುಕ್ಷೌತು ಸಾಗರಾಃ ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಥ ಯಜುರ್ವೇದಃ ಸಾಮವೇದೋಹ್ಯಥರ್ವಣಃ ।
(ಅಂಗೈಶ್ಚ ಸಹಿತಾ ಸರ್ವೇ ಕಲಶಾಂಬು ಸಮಾಶ್ರಿತಾಃ)
ಅತ್ರಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ ।
ಆಯಾಂತು ದೇವಿ ಪೂಜಾರ್ಥಂ ದುರಿತಕ್ಷಯ ಕಾರಕಾಃ ॥

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು ॥

ಕಲಶದೇವತಾಭ್ಯೋನಮಃ । ಸರ್ವೋಪಚಾರಾರ್ಥೇ ಗಂಧ ಪುಷ್ಪಾಕ್ಷತಾನ್
ಸಮರ್ಪಯಾಮಿ (ಹೂ, ಮಂತ್ರಾಕ್ಷತೆಯನ್ನು ಹಾಕಿ)

(ಕಲಶೋದಕವನ್ನು ಈ ಮಂತ್ರದಿಂದ ತನ್ನಮೇಲೆ ಹಾಗೂ ಪೂಜಾದ್ರವ್ಯಗಳ ಮೇಲೆ ಪ್ರೋಕ್ಷಿಸಿ)

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಪಿವಾ ।
ಯಃ ಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರ ಶುಚಿಃ ॥
(ಆತ್ಮಾನಂ ಪೂಜಾದ್ರವ್ಯಾಣಿ ಚ ಪ್ರೋಕ್ಷಯೇತ್)

## ಧ್ಯಾನಂ

ಪದ್ಮಪತ್ರಾಸನಸ್ಥಶ್ಚ ಬ್ರಹ್ಮಾಧ್ಯೇಯಶ್ಚತುರ್ಮುಖಃ ।
ಸಾವಿತ್ರೀ ತಸ್ಯ ತು ಧ್ಯೇಯಾ ವಾಮೋತ್ಸಂಗಗತಾ ತಥಾ ॥
ಆದಿತ್ಯವರ್ಣಾ ಧರ್ಮಜ್ಞಾ ಸಾಕ್ಷಮಾಲಾಕರಾ ತಥಾ ।

ಶ್ರೀ ಸತ್ಯವತ್‌ಸಹಿತ ವಟಸಾವಿತ್ರೀ ದೇವತಾಭ್ಯಾಂ ನಮಃ ॥ ಧ್ಯಾಯಾಮಿ । ಧ್ಯಾನಂ ಸಮರ್ಪಯಾಮಿ । (ಮಂತ್ರಾಕ್ಷತೆ ಏರಿಸಿ)

ಬ್ರಹ್ಮಣಾ ಸಹಿತಾಂ ದೇವೀಂ ಸಾವಿತ್ರೀಂ ಲೋಕಮಾತರಂ ।
ಸತ್ಯವ್ರತಂ ಚ ಸಾವಿತ್ರೀಂ ವಟಂಚಾವಾಹಯಾಮ್ಯಹಂ ॥

ಶ್ರೀ ಸತ್ಯವತ್ ಸಹಿತ ವಟಸಾವಿತ್ರೀ ದೇವತಾಭ್ಯಾಂ ನಮಃ ॥ ಆವಾಹನಾರ್ಥೇ ಅಕ್ಷತಾನ್ ಸಮರ್ಪಯಾಮಿ (ಮಂತ್ರಾಕ್ಷತೆ ಏರಿಸಿ)

ಬ್ರಹ್ಮಣಾ ಸಹ ಸಾವಿತ್ರೀ ಸತ್ಯವತ್ಸಹಿತೇ ಪ್ರಿಯೇ ।
ಹೇಮಾಸನಂ ಗೃಹ್ಯತಾಂ ತು ಧರ್ಮರಾಜ ಸುರೇಶ್ವರಿ॥
॥ಆಸನಂ ಸಮರ್ಪಯಾಮಿ॥ (ಮಂತ್ರಾಕ್ಷತೆ ಏರಿಸಿ)

ಗಂಗಾಜಲಂ ಸಮಾನೀತಂ ಪಾದ್ಯಾರ್ಥಂ ಬ್ರಹ್ಮಣಃ ಪ್ರಿಯೇ ।
ಭಕ್ತ್ಯಾದತ್ತಂ ಧರ್ಮರಾಜ ಸಾವಿತ್ರೀ ಪ್ರತಿಗೃಹ್ಯತಾಂ ॥

|| ಪಾದ್ಯಂ ಸಮರ್ಪಯಾಮಿ|| (ಉದ್ಧರಣೆಯಿಂದ ನೀರನ್ನು ದೇವರಿಗೆ ತೋರಿಸಿ ತಟ್ಟೆಯಲ್ಲಿ ಹಾಕಿ)

ಭಕ್ತ್ಯಾ ಸಮಾಹೃತಂ ತೋಯಂ ಫಲಪುಷ್ಪ ಸಮನ್ವಿತಂ ।
ಅರ್ಘ್ಯಂ ಗೃಹಾಣ ಸಾವಿತ್ರೀ ಮಮ ಸತ್ಯವತಃ ಪ್ರಿಯೇ||
|| ಅರ್ಘ್ಯಂ ಸಮರ್ಪಯಾಮಿ|| (ತಟ್ಟೆಗೆ ನೀರು ಬಿಡಿ)
ಸುಗಂಧಿ ಪುಷ್ಪ ಕರ್ಪೂರ ಸುರಭಿ ಸ್ವಾದುಶೀತಲಂ ।
ಬ್ರಹ್ಮಣಾ ಸಹ ಸಾವಿತ್ರಿ ಕುರುಷ್ವಾಚಮನೀಯಕಂ ||
|| ಆಚಮನೀಯಂ ಸಮರ್ಪಯಾಮಿ || (ನೀರನ್ನು ಬಿಡಿ)
ಸರ್ವತೀರ್ಥಾಹೃತಂ ತೋಯಂ ಮಯಾ ಪ್ರಾರ್ಥನಯಾಧುನಾ ।
ಮಲಾಪಕರ್ಷ ಸ್ನಾನಾರ್ಥಂ ಗೃಹಾಣೇದಂ ಶುಚಿಸ್ಮಿತೇ ||
|| ಸ್ನಾನಂ ಸಮರ್ಪಯಾಮಿ||
ಪಯೋದಧಿ ಘೃತಂ ಚೈವ ಶರ್ಕರಾ ಮಧು ಸಂಯುತಂ|
ಪಂಚಾಮೃತೇನ ಸ್ನಪಿತಾ ಪ್ರೀಯತಾಂ ಪರಮೇಶ್ವರೀ|
|| ಪಂಚಾಮೃತಸ್ನಾನಂ ಸಮರ್ಪಯಾಮಿ||
ಕಾಮಧೇನೋಃ ಸಮುದ್ಭೂತಂ ದೇವರ್ಷಿ ಪಿತೃತೃಪ್ತಿದಂ|
ಪಯೋದದಾಮಿ ದೇವೇಶಿ ಸ್ನಾನಾರ್ಥಂ ಪ್ರತಿಗೃಹ್ಯತಾಂ ||
||ಪಯಃ ಸ್ನಾನಂ ಸಮರ್ಪಯಾಮಿ||
(ಹೂವನ್ನು ಹಾಲಿನಲ್ಲಿ ಅದ್ದಿ ಪ್ರೋಕ್ಷಿಸಿ)
ಪಯಃ ಸ್ನಾನಾನಂತರಂ ಶುದ್ಧೋದಕ ಸ್ನಾನಂ ಸಮರ್ಪಯಾಮಿ||
ಚಂದ್ರಮಂಡಲ ಸಂಕಾಶಂ ಸರ್ವದೇವ ಪ್ರಿಯಂ ದಧಿ|
ಸ್ನಾನಾರ್ಥಂ ಮಯಾ ಭಕ್ತ್ಯಾದತ್ತಂ ದೇವಿ ಪ್ರತಿಗೃಹ್ಯತಾಂ ||
|| ದಧಿಸ್ನಾನಂ ಸಮರ್ಪಯಾಮಿ || ( ಮೊಸರಿನಿಂದ ಅಭಿಷೇಕ)
ಆಜ್ಯಂ ಸುರಾಣಾಮಾಹಾರಂ ಆಜ್ಯಂ ಯಜ್ಞೇ ಪ್ರತಿಷ್ಠಿತಂ|
ಆಜ್ಯಂ ಪವಿತ್ರಂ ಪರಮಂ ಸ್ನಾನಾರ್ಥಂ ಪ್ರತಿಗೃಹ್ಯತಾಂ||
|| ಘೃತಸ್ನಾನಂ ಸಮರ್ಪಯಾಮಿ || ( ತುಪ್ಪದಿಂದ ಅಭಿಷೇಕ)
ಸರ್ವೌಷಧಿ ಸಮುತ್ಪನ್ನಂ ಪೀಯೂಷ ಸದೃತಂ ಮಧು|
ಸ್ನಾನಾರ್ಥಂ ತೇ ಪ್ರಯಚ್ಛಾಮಿ ಗೃಹ್ಯತಾಂ ಪರಮೇಶ್ವರಿ||
|| ಮಧುಸ್ನಾನಂ ಸಮರ್ಪಯಾಮಿ||(ಜೇನುತುಪ್ಪದಿಂದ ಅಭಿಷೇಕ)
ಇಕ್ಷುದಂಡ ಸಮುದ್ಭೂತ ದಿವ್ಯ ಶರ್ಕರಯಾಹೃತಂ ।
ಸ್ನಾಪಯಾಮಿ ಮಹಾಭಕ್ತ್ಯಾ ಪ್ರೀತಾಭವ ಸುರೇಶ್ವರಿ
|| ಶರ್ಕರಾಸ್ನಾನಂ ಸಮರ್ಪಯಾಮಿ || (ಸಕ್ಕರೆ ಹಿಟ್ಟಿನಿಂದ ಸ್ನಾನ)

ಕರ್ಪೂರೈಲಾ ಚಂದನಾದಿ ಸುಗಂಧಿ ದ್ರವ್ಯ ಸಂಯುತಂ ।
ಗಂಧೋದಕಂ ಮಯಾದತ್ತಂ ಸ್ನಾನಾರ್ಥಂ ಪ್ರತಿಗೃಹ್ಯತಾಂ ॥
॥ ಗಂಧೋದಕ ಸ್ನಾನಂ ॥

ಸ್ನಾನಾನಂತರಂ ಆಚಮನೀಯಂ ಸಮರ್ಪಯಾಮಿ ।
ಸಕಲ ಪೂಜಾರ್ಥೇ ಅಕ್ಷತಾನ್ ಸಮರ್ಪಯಾಮಿ ॥
(ಉದ್ಧರಣೆಯಿಂದ ನೀರನ್ನು ತಟ್ಟೆಗೆ ಹಾಕಿ, ಹೂ ಮಂತ್ರಾಕ್ಷತೆ ಏರಿಸಬೇಕು)
ಸ್ನಾನಾನಂತರಂ ವಸ್ತ್ರಂ ಸಮರ್ಪಯಾಮಿ(ಗೆಜ್ಜೆವಸ್ತ್ರ)
ಸೂಕ್ಷ್ಮಂ ತಂತುಮಯಂ ವಸ್ತ್ರಯುಗ್ಮಂ ಕಾರ್ಪಾಸಸಂಭವಂ ।
ಸಾವಿತ್ರೀ ಸತ್ಯವತ್ಕಾಂತೇ ಮಯಾದತ್ತಂ ಪ್ರತಿಗೃಹ್ಯತಾಮ್॥
॥ವಸ್ತ್ರೋಪವಸ್ತ್ರೇ ಅರ್ಪಯಾಮಿ॥ (ಕುಬಸದ ಖಣ)
ಸಾವಿತ್ರೀ ಸತ್ಯವತ್ಕಾಂತೇ ಧರ್ಮರಾಜಸುರೇಶ್ವರಿ ।
ಸಾವಿತ್ರೀ ಬ್ರಹ್ಮಣಾ ಸಾರ್ಧಂ ಉಪವೀತಂ ಪ್ರತಿಗೃಹ್ಯತಾಂ॥
॥ ಯಜ್ಞೋಪವೀತಂ ಸಮರ್ಪಯಾಮಿ॥
(ಅರಿಶಿನ ಹಚ್ಚಿದ ಹಸೀದಾರವನ್ನು ಹಾಕಿ)
ಭೂಷಣಾನಿಚ ದಿವ್ಯಾನಿ ಮುಕ್ತಾಹಾರ ಯುತಾನಿ ಚ।
ತ್ವದರ್ಥಮುಪಕ್ಲೃಪ್ತಾನಿ ಗೃಹಾಣ ಶುಭಲೋಚನೇ॥
॥ ಭೂಷಣಾರ್ಥೇ ಪುಷ್ಪಾಣಿ ಅಕ್ಷತಾಃ ಚ ಅರ್ಪಯಾಮಿ॥
(ಹೂ, ಮಂತ್ರಾಕ್ಷತೆ ಏರಿಸಿ)

ಕುಂಕುಮಾಗರು ಕರ್ಪೂರ ಕಸ್ತೂರೀ ರೋಚನೈರ್ಯುತಂ ।
ಚಂದನಂ ತೇ ಮಯಾದತ್ತಂ ಸಾವಿತ್ರಿ ಪ್ರತಿಗೃಹ್ಯತಾಂ॥
॥ ಚಂದನಂ ಸಮರ್ಪಯಾಮಿ॥ (ಶ್ರೀಗಂಧವನ್ನು ಅರ್ಪಿಸಿ)
ಅಕ್ಷತಾಶ್ಚ ಸುರಶ್ರೇಷ್ಠೇ ಕುಂಕುಮಾಕ್ತಾಃ ಸುಶೋಭಿತಾಃ ।
ಮಯಾ ನಿವೇದಿತಾ ಭಕ್ತ್ಯಾಗೃಹಾಣ ಪರಮೇಶ್ವರಿ ॥
॥ ಅಕ್ಷತಾನ್ ಸಮರ್ಪಯಾಮಿ॥ (ಮಂತ್ರಾಕ್ಷತೆ ಏರಿಸಬೇಕು)
ಹರಿದ್ರಾ ಕುಕುಮಂಚೈವ ಸಿಂಧೂರಂ ಕಜ್ಜಲಾನ್ವಿತಾಂ।
ಸೌಭಾಗ್ಯದ್ರವ್ಯ ಸಂಯುಕ್ತಂ ಸಾವಿತ್ರೀ ಪ್ರತಿಗೃಹ್ಯತಾಂ॥
॥ ಹರಿದ್ರಾ-ಕುಂಕುಮ ಪರಿಮಳದ್ರವ್ಯಾನಿ ಸಮರ್ಪಯಾಮಿ॥
(ಅರಿಶಿನ, ಕುಂಕುಮ, ಕಾಡಿಗೆ, ಸಿಂಧೂರಗಳನ್ನು ಸಮರ್ಪಿಸಿ)

ಮಾಂಗಲ್ಯಂ ತಂತುಮಣಿಭಿರ್ಮುಕ್ತಾಭಾಶ್ಚ ವಿರಾಜಿತಂ ।
ಕಂಠಸ್ಥ ಭೂಷಣಾರ್ಥಾಯ ಕಂಠಸೂತ್ರಂ ಪ್ರತಿಗೃಹ್ಯತಾಂ ॥
॥ ಶ್ರೀ ಸಾವಿತ್ರ್ಯೈನಮಃ ಕಂಠಸೂತ್ರಂ ಸಮರ್ಪಯಾಮಿ ॥

ದಿವ್ಯಾನೀನಾಮಾನಿ ಕಾಚೀನ ನಿರ್ಮಿತಾನಿ ಸುರೇಶ್ವರಿ ।
ಹಸ್ತಾಲಂಕರಣಾರ್ಥಾಯ ಕಂಕಣಾನಿ ಪ್ರತಿಗೃಹ್ಯತಾಂ ॥
॥ ಕಂಕಣಾನಿ ಸಮರ್ಪಯಾಮಿ ॥

(ಗಾಜಿನಬಳೆ, ಗೌರೀಬಳೆಯನ್ನು ಅರ್ಪಿಸಬೇಕು)

ನಾನಾಭರಣ ಶೋಭಾಢ್ಯಂ ನಾನಾರತ್ನೋಪಶೋಭಿತಂ ।
ಅರ್ಪಿತಂ ತೇ ಮಯಾದೇವಿ ತಾಡಪತ್ರಂ ಪ್ರತಿಗೃಹ್ಯತಾಂ ॥
॥ ತಾಡಪತ್ರಂ ಸಮರ್ಪಯಾಮಿ॥ (ತಾಳೆ ಹೂವನ್ನು ಸಮರ್ಪಿಸಿ)

ವೇದಮಾತರ್ನಮಸ್ತುಭ್ಯಂ ಸಾವಿತ್ರೀ ಬ್ರಹ್ಮಣಃ ಪ್ರಿಯೇ ।
ನಾನಾ ಪರಿಮಳದ್ರವ್ಯಂ ಗೃಹಾಣ ಪರಮೇಶ್ವರಿ ॥
॥ ನಾನಾ ಪರಿಮಳದ್ರವ್ಯಾನಿ ಸಮರ್ಪಯಾಮಿ ॥

ಮಾಲ್ಯಾದೀನಿ ಸುಗಂಧೀನಿ ಮಾಲತ್ಯಾದೀನಿ ವೈ ಪ್ರಭೋ ।
ಮಯಾऽಹೃತಾನಿ ಪೂಜಾರ್ಥಂ ಪುಷ್ಪಾಣಿ ಪ್ರತಿಗೃಹ್ಯತಾಂ ॥
॥ ಶ್ರೀ ಸತ್ಯವತ್ಸಹಿತ ವಟಸಾವಿತ್ರೀ ದೇವತಾಭ್ಯಾಂ ನಮಃ
(ಪುಷ್ಪಾಣಿ ಸಮರ್ಪಯಾಮಿ)

## ಅಂಗಪೂಜಾ

| | | |
|---|---|---|
| ಓಂ ಸಾವಿತ್ರ್ಯೈ ನಮಃ | ಪಾದೌ | ಪೂಜಯಾಮಿ |
| ಓಂ ಪ್ರಸವಿತ್ರ್ಯೈ ನಮಃ | ಜಂಘೇ | ” |
| ಓಂ ಕಮಲಪತ್ರಾಕ್ಷ್ಯೈ ನಮಃ | ಕಟಿಂ | ” |
| ಓಂ ಭೂತಧಾರಿಣ್ಯೈ ನಮಃ | ಉದರಂ | ” |
| ಓಂ ಗಾಯತ್ರ್ಯೈ ನಮಃ | ಕಂಠಂ | ” |
| ಓಂ ಬ್ರಹ್ಮಣಃ ಪ್ರಿಯಾಯೈ ನಮಃ | ಮುಖಂ | ” |
| ಓಂ ಸೌಭಾಗ್ಯದಾತ್ರ್ಯೈ ನಮಃ | ಶಿರಃ | ” |
| ಓಂ ವಟಸಾವಿತ್ರ್ಯೈ ನಮಃ | ಸರ್ವಾಂಗಾಣಿ | ಪೂಜಯಾಮಿ |

## ಅಥ ಬ್ರಹ್ಮಸತ್ಯವತ್ ಪೂಜಾ

| | | |
|---|---|---|
| ಓಂ ಧಾತ್ರೇ ನಮಃ | ಪಾದೌ | ಪೂಜಯಾಮಿ |
| ಓಂ ವಿಧಾತ್ರೇ ನಮಃ | ಜಂಘೇ | ” |
| ಓಂ ಸ್ರಷ್ಟ್ರೇ ನಮಃ | ಊರೂ | ” |
| ಓಂ ಪ್ರಜಾಪತಯೇ ನಮಃ | ಮೇಢ್ರಂ | ” |
| ಓಂ ಪರಮೇಷ್ಠಿನೇ ನಮಃ | ಕಟಿಂ | ” |

| | | |
|---|---|---|
| ಓಂ ಅಗ್ನಿರೂಪಾಯ ನಮಃ | ನಾಭಿಂ | ಪೂಜಯಾಮಿ |
| ಓಂ ಪದ್ಮನಾಭಾಯ ನಮಃ | ಹೃದಯಂ | ,, |
| ಓಂ ವೇಧಸೇ ನಮಃ | ಬಾಹೂ | ,, |
| ಓಂ ವಿಧಯೇ ನಮಃ | ಕಂಠಂ | ,, |
| ಓಂ ಹಿರಣ್ಯಗರ್ಭಾಯ ನಮಃ | ಮುಖಂ | ,, |
| ಓಂ ಬ್ರಹ್ಮಣೇ ನಮಃ | ಶಿರಃ | ,, |
| ಓಂ ವಿಷ್ಣವೇ ನಮಃ | ಸರ್ವಾಂಗಾಣಿ | ಪೂಜಯಾಮಿ |

ದೇವದ್ರುಮ ರಸೋದ್ಭೂತ ಕಾಲಾಗರು ಸಮನ್ವಿತಂ।
ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ॥
॥ ಶ್ರೀ ಸತ್ಯವತ್ ಸಹಿತ ವಟ ಸಾವಿತ್ರೀ ದೇವತಾಭ್ಯಾಂ
ಧೂಪಂ ಸಮರ್ಪಯಾಮಿ॥

ಚಕ್ಷುರ್ದಂ ಸರ್ವಲೋಕಾನಾಂ ತಿಮಿರಸ್ಯ ನಿವಾರಣಂ।
ಆರ್ತಿಕ್ಯಂ ಕಲ್ಪಿತಂ ಭಕ್ತ್ಯಾ ಗೃಹಾಣ ಪರಮೇಶ್ವರಿ॥
॥ದೀಪಂ ದರ್ಶಯಾಮಿ ॥ (ಕರ್ಪೂರಾರತಿ)

ಅನ್ನಂ ಚತುರ್ವಿಧಂ ಸ್ವಾದು ರಸೈಃ ಷಡ್ಭಿಃ ಸಮನ್ವಿತಂ।
ಮಯಾ ನಿವೇದಿತಂ ಭಕ್ತ್ಯಾ ನೈವೇದ್ಯಂ ಪ್ರತಿಗೃಹ್ಯತಾಂ॥

ಪ್ರಾಣಾಯ ಸ್ವಾಹಾ। ಅಪಾನಾಯ ಸ್ವಾಹಾ। ವ್ಯಾನಾಯ ಸ್ವಾಹಾ। ಉದಾನಾಯ ಸ್ವಾಹಾ। ಸಮಾನಾಯ ಸ್ವಾಹಾ। ಬ್ರಹ್ಮಣೇ ಸ್ವಾಹಾ। ಆವಾಹಿತ ವಟಸಾವಿತ್ರೀ ದೇವತಾಭ್ಯಾಂ ನಮಃ ನೈವೇದ್ಯಂ ಸಮರ್ಪಯಾಮಿ। ಮಧ್ಯೇ ಪಾನೀಯಂ ಸಮರ್ಪಯಾಮಿ। ಉತ್ತರಾಪೋಶನಂ। ಹಸ್ತ ಪ್ರಕ್ಷಾಲನಂ। ಮುಖ ಪ್ರಕ್ಷಾಲನಂ। ಆಚಮನೀಯಂ ಚ ಸಮರ್ಪಯಾಮಿ। ಕರೋದ್ವರ್ತನಾರ್ಥಂ ಚಂದನಂ ಸಮರ್ಪಯಾಮಿ॥

ಪೂಗೀಫಲಂ ಮಹಾದಿವ್ಯಂ ನಾಗವಲ್ಲೀದಲೈರ್ಯುತಂ।
ಕರ್ಪೂರೈಲಾ ಸಮಾಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ॥
॥ ತಾಂಬೂಲಂ ಸಮರ್ಪಯಾಮಿ॥ (ಎಲೆ, ಅಡಿಕೆ, ಸುಣ್ಣ)

ಹಿರಣ್ಯಗರ್ಭ ಗರ್ಭಸ್ಥಂ ಹೇಮಬೀಜಂ ವಿಭಾವಸೋಃ।
ಅನಂತಪುಣ್ಯ ಫಲದಂ ಅತಃ ಶಾಂತಿಂ ಪ್ರಯಚ್ಛಮೇ॥
॥ ಸುವರ್ಣಪುಷ್ಪ ದಕ್ಷಿಣಾಃ ಸಮರ್ಪಯಾಮಿ ॥(ದಕ್ಷಿಣೆ)

ಇದಂ ಫಲಂ ಮಯಾ ದೇವಿ ಸ್ಥಾಪಿತಂ ಪುರತಸ್ತವ ।
ತೇನ ಮೇ ಸಫಲಾವಾಪ್ತಿರ್ಭವೇಜ್ಜನ್ಮನಿ ಜನ್ಮನಿ ॥
॥ಮಹಾಫಲಂ ಸಮರ್ಪಯಾಮಿ॥ (ಪೂರ್ಣಫಲವನ್ನು ಅರ್ಪಿಸಿ)

ಚಂದ್ರಾದಿತ್ಯೌ ಚ ಧರಣೀ ವಿದ್ಯುದಗ್ನಿಸ್ತಥೈವ ಚ ।
ತ್ವ ಮೇವ ಸರ್ವಜ್ಯೋತೀಂಷಿ ಆರ್ತಿಕ್ಯಂ ಪ್ರತಿಗೃಹ್ಯತಾಂ ॥
॥ ಮಹಾನೀರಾಜನಂ ಸಮರ್ಪಯಾಮಿ॥(ಮಂಗಳಾರತಿ)

ಓಂಕಾರ ಪೂರ್ವಿಕೇ ದೇವಿ ಸರ್ವದುಃಖ ನಿವಾರಿಣಿ ।
ವೇದ ಮಾತರ್ನಮಸ್ತುಭ್ಯಂ ಸೌಭಾಗ್ಯಂ ಚ ಪ್ರಯಚ್ಛಮೇ ॥
॥ ನಮಸ್ಕಾರಾನ್ ಸಮರ್ಪಯಾಮಿ ॥ (ಸಾಷ್ಟಾಂಗ ನಮಸ್ಕಾರ)

ಯಾನಿ ಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ।
॥ ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ॥ (ಪ್ರದಕ್ಷಿಣೆ ನಮಸ್ಕಾರ)

ಸಾವಿತ್ರೀ ಚ ಪ್ರಸಾವಿತ್ರೀ ಸತತಂ ಬ್ರಹ್ಮಣಃ ಪ್ರಿಯೋ ।
ಪೂಜಿತಾಸಿ ದ್ವಿಜೈಃ ಸರ್ವೈಃ ಸ್ತ್ರೀಭಿರ್ಮುನಿಗತ್ಯೆಸ್ಸದಾ ॥

ತ್ರಿಸಂಧ್ಯಂ ದೇವಿ ಭೂತಾನಾಂ ವಂದನೀಯ್ಯಾ ಸುಶೋಭನೇ।
ಮಯಾ ದತ್ತಾ ಚ ಪೂಜೇಯಂ ತ್ವಂ ಗೃಹಾಣ ನಮೋಽಸ್ತುತೇ॥

॥ ಶ್ರೀ ಸತ್ಯವತ್ ಸಹಿತ ವಟಸಾವಿತ್ರೀ ದೇವತಾಭ್ಯಾಂ ನಮಃ
ಮಂತ್ರ ಪುಷ್ಪಾಂಜಲಿಂ ಸಮರ್ಪಯಾಮಿ॥

## ಅರ್ಘ್ಯಪ್ರದಾನ (ಮೂರು ಅರ್ಘ್ಯ)

(ಪ್ರತ್ಯೇಕವಾಗಿ ಶುದ್ಧೋದಕವನ್ನು ತೆಗೆದುಕೊಂಡು ಉದ್ಧರಣೆಯಿಂದ ಅರ್ಘ್ಯ ಕೊಡುವಾಗ ಹೀಗೆ ಹೇಳಬೇಕು)

ಓಂಕಾರ ಪೂರ್ವಿಕೇ ದೇವಿ ಸರ್ವದುಃಖ ನಿವಾರಿಣೀ ।
ವೇದ ಮಾತರ್ನಮಸ್ತುಭ್ಯಂ ಸೌಭಾಗ್ಯಂ ಚ ಪ್ರಯಚ್ಛಮೇ ॥

॥ ಶ್ರೀ ಸತ್ಯವತ್ಸಹಿತ ವಟಸಾವಿತ್ರೀ ದೇವತಾಭ್ಯಾನ್ನಮಃ
ಇದಮರ್ಘ್ಯಂ ಸಮರ್ಪಯಾಮಿ॥

ಪತಿವ್ರತೇ ಮಹಾಭಾಗೇ ಬ್ರಹ್ಮಾಣೀ ಚ ಶುಚಿಸ್ಮಿತೇ।
ದೃಢವ್ರತೇ ದೃಢಮತೇ ಭರ್ತುಶ್ಚ ಪ್ರಿಯವಾದಿನೇ॥
॥ ಶ್ರೀ ಸತ್ಯವತ್ಸಹಿತ ವಟಸಾವಿತ್ರೀ ದೇವತಾಭ್ಯಾಂ ನಮಃ
ದ್ವಿತೀಯಾರ್ಘ್ಯಂ ಸಮರ್ಪಯಾಮಿ॥

ಅವೈಧವ್ಯಂ ಚ ಸೌಭಾಗ್ಯಂ ದೇಹಿ ತ್ವಂ ಮಮ ಸುವ್ರತೇ॥
ಪುತ್ರಾನ್ ಪೌತ್ರಾಂಶ್ಚ ಸೌಖ್ಯಂ ಚ ಗೃಹಾಣಾರ್ಘ್ಯಂ ನಮೋಽಸ್ತುತೇ॥
॥ ಶ್ರೀ ಸತ್ಯವತ್‌ಸಹಿತ ವಟಸಾವಿತ್ರೀ ದೇವತಾಭ್ಯಾಂ ನಮಃ
ತೃತೀಯಾರ್ಘ್ಯಂ ಸಮರ್ಪಯಾಮಿ॥

**ಪ್ರಾರ್ಥನಾ॥ (ಕೈ ಜೋಡಿಸಿ)**

ಸಾವಿತ್ರೀ ಬ್ರಹ್ಮಗಾಯತ್ರೀ ಸರ್ವದಾ ಪ್ರಿಯಭಾಷಿಣೀ ।
ತೇನ ಸತ್ಯೇನ ಮಾಂ ಪಾಹಿದುಃಖಸಂಸಾರ ಸಾಗರಾತ್ ॥

ತ್ವಂ ಗೌರೀ ತ್ವಂ ಶುಚಿರ್ಲಕ್ಷ್ಮೀಃ ಪ್ರಭಾ ಚಂದ್ರಮಂಡಲೇ ।
ತ್ವ ಮೇವ ಚ ಜಗನ್ಮಾತಾ ತ್ವ ಮುದ್ಧರ ವರಾನನೇ ॥
ಯನ್ಮಯಾ ದುಷ್ಕೃತಂ ಸರ್ವಂ ಕೃತಂ ಜನ್ಮಶತೈರಪಿ ।
ಭಸ್ಮೀ ಭವತು ತತ್ಸರ್ವಂ ಅವೈಧವ್ಯಂ ಚ ದೇಹಿ ಮೇ ।
ಯಥಾ ತೇ ನ ವಿಯೋಗೋಸ್ತಿ ಭರ್ತ್ರಾ ಸಹ ಸುರೇಶ್ವರಿ ।
ತಥಾ ಮಮ ಮಹಾಭಾಗೇ ಕುರು ತ್ವಂ ಜನ್ಮಜನ್ಮನಿ ॥
॥ ಶ್ರೀ ಸತ್ಯವತ್ಸಹಿತ ವಟಸಾವಿತ್ರೀ ದೇವತಾಭ್ಯಾಂ ನಮಃ
ಪ್ರಾರ್ಥನಾಂ ಸಮರ್ಪಯಾಮಿ ॥

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪುಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ।
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ
ಯತ್ಪೂಜಿತಂ ತು ಮಯಾ ದೇವಿ ಪರಿಪೂರ್ಣಂ ತದಸ್ತು ಮೇ ॥
॥ಅನೇನ ಯಥಾಜ್ಞಾನ ಯಥಾಶಕ್ತ್ಯ ಕೃತ ಪೂಜನೇನ ಶ್ರೀ ಸತ್ಯವತ್ ಸಹಿತ
ವಟಸಾವಿತ್ರೀ ದೇವತಾಃ ಪ್ರೀಯತಾಂ ನಮಮ ನಮಮ॥

## ವಾಯನ ದಾನ

ಏವಂ ಗುಣ ವಿಶಿಷ್ಠಾಯಾಂ ಶುಭತಿಥೌ ವಟಸಾವಿತ್ರೀ ಪೂಜಾ ಸಾಂಗತಾ ಸಿದ್ಧ್ಯರ್ಥಂ ಬ್ರಾಹ್ಮಣೋತ್ತಮಾಯ ವಾಯನ ಪ್ರದಾನಂ ಕರಿಷ್ಯೇ॥ ತದಂಗ ಬ್ರಾಹ್ಮಣ ಪೂಜನಂ ಚ ಕರಿಷ್ಯೇ ॥ ( ಸಂಕಲ್ಪಮಾಡಿ, ಮಂತ್ರಾಕ್ಷತೆ ನೀರು ಬಿಡಿ)

## ವಾಯನ ದಾನ ಮಂತ್ರ

ಉಪಾಯನ ಮಿದಂ ದೇವಿ ವ್ರತಸಂಪೂರ್ಣಹೇತವೇ ।
ವಾಯನಂ ದ್ವಿಜವರ್ಯಾಯ ಸಹಿರಣ್ಯ ದದಾಮ್ಯಹಂ ॥
(ಬಾಗಿನವನ್ನು ಕೊಡಬೇಕು.)

ಅನೇನ ವಾಯನ ಪ್ರದಾನೇನ ಸತ್ಯವತ್ಸಹಿತ ವಟಸಾವಿತ್ರೀ ದೇವತಾಃ ಪ್ರೀಯತಾಂ ಇದಂ ನಮಮ ನಮಮ ॥

॥ ತತ್ಸತ್ ಬ್ರಹ್ಮಾರ್ಪಣಮಸ್ತು॥

**ಪೂಜಾವಿಧಿ ಮುಗಿಯಿತು**

## ವಟ ಸಾವಿತ್ರೀ ಹುಣ್ಣಿಮೆ ವ್ರತಕಥೆ

ಭಗವಾನ್ ಶಂಕರನು ಸನತ್ಕುಮಾರನಿಗೆ ಈ ವ್ರತ ಕಥೆಯನ್ನು ತಿಳಿಸುತ್ತಾನೆ. ಹಿಂದೆ ಮದ್ರದೇಶದಲ್ಲಿ ಪರಮಜ್ಞಾನಿಯೂ, ಸದ್ವಿದ್ಯಾವಿನಯ ಸಂಪನ್ನನೂ, ಪರಾಕ್ರಮಿಯೂ ಆದ ಅಶ್ವಪತಿ ಎಂಬ ರಾಜನಿದ್ದನು. ಆತನಿಗೆ ಧನ ಕನಕ ವಸ್ತು ವಾಹನಾದಿ ಎಲ್ಲ ಐಶ್ವರ್ಯಗಳಿದ್ದರೂ ಮಕ್ಕಳಿರಲಿಲ್ಲ. ಪತ್ನಿಯೊಡನೆ ಸದಾಕಾಲದಲ್ಲೂ ಸಾವಿತ್ರೀ ದೇವಿಯನ್ನು ಪೂಜಿಸುತ್ತ ಸಾವಿತ್ರೀ ಮಂತ್ರಜಪವನ್ನೇ ಜಪಿಸುತ್ತಿದ್ದನು. ಈ ರಾಜನ ಮೇಲೆ ಕನಿಕರ ತೋರಿದ ಸಾವಿತ್ರೀದೇವಿ ಆತನಿಗೆ ಮನುಷ್ಯರೂಪದಲ್ಲಿ ಪ್ರತ್ಯಕ್ಷಳಾದಳು.

ಸಾವಿತ್ರೀದೇವಿಯ ರೂಪವನ್ನು ಕಂಡ ಅಶ್ವಪತಿರಾಜನು ಪರಮಭಕ್ತಿಯಿಂದ ಆಕೆಗೆ ನಮಿಸಿದ. ಆಕೆಯ ದಿವ್ಯ ಮಂಗಳ ರೂಪವು 'ಭೂಃ' 'ಭುವಃ' 'ಸ್ವಃ' ಈ ಮೂರು ವ್ಯಾಹೃತಿಗಳಿಂದ ಕೂಡಿದೆ. ಆಕೆಯ ಹಸ್ತಗಳಲ್ಲಿ ಅಕ್ಷಯ ಸೂತ್ರ ಹಾಗೂ ಕಮಂಡಲುಗಳಿವೆ. ಈಕೆ ಎಲ್ಲರಿಂದಲೂ ವಂದ್ಯಳಾಗಿ ವರಾಭಯಪ್ರದಳೆಂದು ಪ್ರಸಿದ್ಧಳಾಗಿದ್ದಾಳೆ. ಇಂತಹ ಸಾವಿತ್ರೀದೇವಿಗೆ ರಾಜನು ದೀರ್ಘದಂಡ ನಮಸ್ಕಾರ ಮಾಡಲು, ಸುಪ್ರಸನ್ನಳಾದ ಸಾವಿತ್ರೀದೇವಿಯು, ''ರಾಜನ್, ನಿನ್ನ ಜಪ ಪೂಜೆಗಳಿಂದ ನಾನು ಸಂತುಷ್ಟಳಾಗಿದ್ದೇನೆ. ನಿನಗೆ ಬೇಕಾದ ವರವನ್ನು ಕೇಳು' ಎಂದು ಅಪ್ಪಣೆ ಕೊಟ್ಟಳು.

ಅಶ್ವಪತಿಯು ವಿನಯದಿಂದ ''ಮಹಾದೇವಿ, ನನಗೆ ಪುತ್ರಸಂತಾನವನ್ನು ಕರುಣಿಸು, ಮತ್ತೇನೂ ಬೇಡ'' ಎಂದನು. ದೇವಿಯು ಇದಕ್ಕೆ ಉತ್ತರವಾಗಿ ''ರಾಜನ್, ವಿಧಿ ನಿರ್ಣಯದಂತೆ ನಿನಗೆ ಪುತ್ರ ಯೋಗವಿಲ್ಲ. ಆದರೆ ಒಬ್ಬ ಮಗಳು ನಿನಗೆ ಜನಿಸಿ, ನಿನ್ನ ಹಾಗೂ ಆಕೆಯು ಮುಂದೆ ಸೇರುವ ಪತಿಗೃಹಗಳೆರಡನ್ನೂ ಪಾವನಗೊಳಿಸುತ್ತಾಳೆ. ಅವಳಿಗೆ ಸಾವಿತ್ರೀ ಎಂಬ ಹೆಸರಿಡು, ನಿನಗೆ ಒಳ್ಳೆಯದಾಗಲಿ'' ಎಂದು ಹರಸಿ ಅಂತರ್ಧಾನಳಾದಳು.

ಸಾವಿತ್ರೀದೇವಿಯ ಕೃಪೆಯಿಂದ ರಾಣಿಯು ಹೆಣ್ಣು ಮಗುವನ್ನು ಪ್ರಸವಿಸಿದಳು. ಮಗುವಿಗೆ ಸಾವಿತ್ರೀ ಎಂದೇ ಹೆಸರಿಟ್ಟರು. ದೇವಕನ್ಯೆಯಂತೆ ಸುಂದರಳೂ, ತೇಜೋಮಯವಾದ ಶರೀರವುಳ್ಳವಳೂ ಆದ ಈ ಕನ್ಯೆ ಎಲ್ಲರ ಮನಸ್ಸನ್ನು ಆಕರ್ಷಿಸಿದರೂ, ಪ್ರಾಪ್ತವಯಸ್ಕಳಾದರೂ ಯಾರೂ ಆಕೆಯನ್ನು ವರಿಸಲು ಮುಂದೆ ಬರಲಿಲ್ಲ.

ಇದರಿಂದ ಚಿಂತಾಕ್ರಾಂತನಾದ ಅಶ್ವಪತಿರಾಜನು, 'ಮಗಳೇ, ನಿನ್ನನ್ನು ವರಿಸಲು ಯಾರೂ ಸಿದ್ಧರಾಗಿ ಬರಲಿಲ್ಲ. ಆದ್ದರಿಂದ ಅನುರೂಪನಾದ ಪತಿಯನ್ನು ನೀನೇ ಹುಡುಕಿಕೋ' ಎಂದು ಅವಳನ್ನು ಅಮಾತ್ಯರ ಜೊತೆಮಾಡಿ ಕಳುಹಿಸಿದನು. ಅಷ್ಟರಲ್ಲಿ ಪೂಜ್ಯರಾದ, ಬ್ರಹ್ಮಮಾನಸ ಪುತ್ರರಾದ ನಾರದ ಮಹರ್ಷಿಗಳು ಅಲ್ಲಿಗೆ ಬಂದರು. ರಾಜನು ಅವರನ್ನು ಸತ್ಕರಿಸಿ ಆನಂದಪಟ್ಟನು. ಈ ಮಧ್ಯೆ ತನಗೆ ಯೋಗ್ಯನಾದ ವರನನ್ನು ನೋಡುವುದಕ್ಕೆ ಹೊರಟ ಸಾವಿತ್ರಿ ಬೇಗನೆ ಹಿಂತಿರುಗಿದಳು. ತಂದೆಗೆ ನಮಸ್ಕರಿಸಿ, ಋಷಿಗಳಿಗೆ ವಂದಿಸಿ ನಿಂತಳು. ಆಗ ನಾರದರು, 'ರಾಜನ್, ನಿನ್ನ ಪುತ್ರಿ ಸರ್ವಲಕ್ಷಣ ಸಂಪನ್ನೆಯಾಗಿದ್ದಾಳೆ. ಪ್ರಾಪ್ತವಯಸ್ಕಳೂ ಆಗಿದ್ದಾಳೆ. ಇನ್ನೂ ಈಕೆಯ ವಿವಾಹ ಮಾಡದಿರಲು ಏನು ಕಾರಣ?' ಎಂದು ಕೇಳಿದಾಗ ರಾಜನು ಅವರಿಗೆ ಎಲ್ಲವನ್ನೂ ತಿಳಿಸಿದನು.

ನಾರದರು, 'ಮಗಳೇ ! ನೀನು ಯಾವ ವರನನ್ನು ನೋಡಿ ಬಂದೆ?'ಎಂದು ಕೇಳಿದಾಗ, ವಿನಯಪೂರ್ವಕವಾಗಿ ಸಾವಿತ್ರಿಯು, 'ಮುನಿವರ್ಯರೆ, ದ್ಯುಮತ್ಸೇನ ಎಂಬ ರಾಜನಿದ್ದಾನೆ. ಈತನ ರಾಜ್ಯ ಅಪಹಾರವಾಗಿ ಶತೃಗಳು ಈತನನ್ನು ಹೊರದೂಡಿದ್ದಾರೆ. ಕಣ್ಣುಗಳು ಕುರುಡೂ ಆಗಿವೆ. ಈಗ ಆತನು ತನ್ನ ಹೆಂಡತಿ ಹಾಗೂ ಮಗನೊಡನೆ ಅರಣ್ಯದಲ್ಲಿ ವಾಸಿಸುತ್ತಿದ್ದಾನೆ. ಈತನ ಮಗನೇ ಸತ್ಯವಾನನು. ತಂದೆ–ತಾಯಿಯರ ಸೇವೆಯಲ್ಲಿಯೇ ಯಾವಾಗಲೂ ನಿರತನಾಗಿರುವ ಆ ಹುಡಗನೇ ನನಗೆ ಯೋಗ್ಯವರ ಎಂದು ತೀರ್ಮಾನಿಸಿರುವೆ' ಎಂದು ಲಜ್ಜೆಯಿಂದ ತುಂಬಿದ ಮೆಲುನುಡಿಯಲ್ಲಿ ಹೇಳಿದಳು. ನಾರದರು, 'ರಾಜನೇ ನಿನ್ನ ಮಗಳು ತಪ್ಪುಮಾಡಿದಳಲ್ಲಾ! ಸಕಲಗುಣ ಸಂಪನ್ನನಾದ ಸತ್ಯವಾನನು ತುಂಬಾ ಒಳ್ಳೆಯ ಹುಡುಗ. ಕುದುರೆಗಳಲ್ಲಿ ಅವನಿಗೆ ಪ್ರೀತಿ. ಚಿಕ್ಕಂದಿನಲ್ಲಿ ಕುದುರೆಗಳ ಚಿತ್ರ ಬರೆಯುವುದೆಂದರೆ ಅವನಿಗೆ ತುಂಬಾ ಆಸೆ. ಅವನಿಗೆ ಚಿತ್ರಾಶ್ವ ಎಂಬ ಹೆಸರಿದೆ. ಆದರೆ ಅವನು ಅಲ್ಪಾಯುಷಿ. ಇನ್ನೊಂದು ವರ್ಷದಲ್ಲಿ ಆತ ಮರಣ ಹೊಂದುತ್ತಾನೆ. ಆದ್ದರಿಂದ ನಿಧಾನವಾಗಿ ಯೋಚಿಸಿ ತೀರ್ಮಾನಿಸು' ಎಂದರು.

ಅಶ್ವಪತಿಯು, ಮಗಳೇ, ಋಷಿಗಳು ಹೇಳುವುದು ತಂಬಾ ಯೋಗ್ಯವಾಗಿದೆ. ನೀನು ಸತ್ಯವಾನನನ್ನು ಹೊರತು ಇನ್ನೊಬ್ಬ ವರನನ್ನು ಅರಸಿ ಬಾ. ಮದುವೆಗೆ ತಡವಾಗುವುದು ಬೇಡ ಎಂದನು. ಸಾವಿತ್ರಿಯು 'ತಂದೆಯೇ! ನಾನು ಆತನನ್ನೇ ವರಿಸುವುದೆಂದು ತೀರ್ಮಾನಮಾಡಿದ್ದೇನೆ. ಸತ್ಯದ ಮಾರ್ಗವೆಂದರೆ ಮನಸ್ಸಿನಲ್ಲಿ ನಿಶ್ಚಯಿಸದ ಮೇಲೆ ಬದಲಾವಣೆ ಮಾಡುತ್ತಾ ಹೋಗುವುದಿಲ್ಲ. ನಿಶ್ಚಯ ಕೇವಲ ಒಂದು ಸಲ ಮಾಡಿದರೆ ತೀರಿತು ಎಂದಳು. ರಾಜನ ಮಾತು, ಪಂಡಿತರ ನುಡಿ, ಕನ್ಯಾದಾನ–ಇವು ಮೂರು ಒಂದು ಸಲ ಮಾತ್ರಮಾಡುವಂತಹುದು. ಆದ್ದರಿಂದ ಆತನು ಅಲ್ಪಾಯುಷಿಯೇ ಆಗಿರಲಿ, ಏನೇ ಇರಲಿ, ಆತನೇ ನನ್ನ ಪತಿ, ಇದರಲ್ಲಿ ಬದಲಾವಣೆಯ ಮಾತಿಲ್ಲ. ವಿವಾಹದ ಸಿದ್ಧತೆಗಳನ್ನು ಮಾಡಿರಿ ಎಂದು ಹೇಳಿದಳು.

ಮಗಳ ದೃಢ ನಿಶ್ಚಯವನ್ನು ತಿಳಿದ ಅಶ್ವಪತಿರಾಜನು ಅಲ್ಪಪರಿವಾರದೊಡನೆ ದ್ಯುಮತ್ಸೇನನಿದ್ದ ಸ್ಥಳಕ್ಕೆ ಹೊರಟನು. ನಾರದರು ಅದೃಶ್ಯರಾದರು. ಒಂದು ಮರದಡಿ ಕುಳಿತಿದ್ದ ಅಂಧನಾದ ದ್ಯಮತ್ಸೇನನನ್ನು ಕಂಡು ಅಶ್ವಪತಿ ಆತನಿಗೆ ನಮಸ್ಕರಿಸಿ, ತಾನು ಅಲ್ಲಿಗೆ ಬಂದ ಕಾರಣವನ್ನು ತಿಳಿಸಿದನು. ದ್ಯುಮತ್ಸೇನನು ರಾಜನನ್ನು ಗಡ್ಡೆಗೆಣಸುಗಳಿಂದ ಸತ್ಕರಿಸು, 'ನಾನು ರಾಜ್ಯಭ್ರಷ್ಟನಾಗಿದ್ದೇನೆ. ನಿನ್ನ ಮಗಳೋ ಸುಖದಲ್ಲಿ ಬೆಳೆದವಳು. ಆಕೆ ನಮ್ಮ ಈ ಅರಣ್ಯವಾಸದ ದುಃಖವನ್ನು ಹೇಗೆ ಸಹಿಸಿಯಾಳು ? ನಿಮ್ಮ ಬಾಂಧವ್ಯ ನನಗೆ ಇಷ್ಟವಾದರೂ ಇನ್ನೊಮ್ಮೆ ಯೋಚಿಸಿ ನೋಡಿರಿ' ಎಂದನು.

ಅಶ್ವಪತಿಯು, ಇದೆಲ್ಲಾ ನನಗೆ ಗೊತ್ತಿದೆ. ನಿಮ್ಮ ಮಗನೇ ತನ್ನ ಪತಿಯೆಂದು ಸಾವಿತ್ರಿಯು ತೀರ್ಮಾನಿಸಿದ್ದಾಳೆ. ನಿಮ್ಮ ಮನೆಯಲ್ಲಿ ಆಕೆಗೆ ಸುಖ ದೊರೆಯುತ್ತದೆಂದು ತಿಳಿದಿರುವಳು ಎಂದನು. ಹಾಗಾದರೆ ಈ ವಿವಾಹಕ್ಕೆ ನನ್ನ ಒಪ್ಪಿಗೆ ಇದೆ ಎಂದ ದ್ಯುಮತ್ಸೇನ ರಾಜ. ಅಶ್ವಪತಿಯು ತಡಮಾಡದೇ ಅಲ್ಲಿಯೇ ಸಾವಿತ್ರಿ–ಸತ್ಯವಾನರಿಗೆ ವಿಧಿಪೂರ್ವಕ ವಿವಾಹವನ್ನು ನಡೆಸಿದನು. ಸಾವಿತ್ರಿ ತುಂಬ ಸಂತುಷ್ಟಳಾಗಿ ಪತಿಗೃಹವನ್ನು ಸೇರಿದಳು. ಗಂಡ–ಹೆಂಡಿರು ಸುಖವಾಗಿ ಜೀವಿಸುತ್ತಿದ್ದರು. ದಿನಕಳೆದಂತೆ ವರ್ಷ ಹತ್ತಿರವಾಯಿತು. ಇನ್ನು ತನ್ನ ಪತಿಯ ಆಯುಃಪ್ರಮಾಣ ಮೂರೇ ದಿನಗಳೆಂದು ತಿಳಿದ ಸಾವಿತ್ರಿಯು ವಟಸಾವಿತ್ರೀ ವ್ರತ ನಿಯಮವನ್ನು ಕೈಗೊಂಡು ಅಹೋರಾತ್ರಿ ಈ ವ್ರತನಿರತಳಾದಳು. ನಾಲ್ಕನೆಯ ದಿನ ಒಳಗಿನಲ್ಲಿ ವ್ರತವನ್ನು ಮುಗಿಸಿ, ಅತ್ತೆ ಮಾವಂದಿರಿಗೆ ನಮ್ಮಸರಿಸಿದಳು.

ಆ ದಿನ ಸತ್ಯವಾನನು ಕಟ್ಟಿಗೆ ತರಲು ಕೊಡಲಿಯನ್ನು ಹಿಡಿದು ಕಾಡಿಗೆ ಹೊರಟಾಗ ಸಾವಿತ್ರಿ ಅವನನ್ನು ತಡೆದಳು. ಈ ದಿನ ಕಾಡಿಗೆ ಹೋಗಬೇಡಿ, ಹೋಗಲೇಬೇಕು ಎಂದರೆ ನಾನೂ ನಿಮ್ಮೊಂದಿಗೆ ಬರುತ್ತೇನೆಂದಳು. ನನಗೆ ಅರಣ್ಯವನ್ನು ನೋಡಲು ಬಯಕೆಯಾಗಿದೆ, ಹೋಗಿಬರೋಣವೇ ಎಂದಾಗ ತಂದೆ ತಾಯಿಗಳು ಸಮ್ಮತಿನೀಡಿದರೆ ನೀನೂ ಬರಬಹುದು ಎಂದು ಸತ್ಯವಾನನು ನುಡಿದನು. ದ್ಯುಮತ್ಸೇನನು ಸೊಸೆಯ ಈ ಅಪೇಕ್ಷೆಯನ್ನು ಕೇಳಿ ಮಗೂ, ಮೂರು ದಿನಗಳ ಉಪವಾಸ ವ್ರತದಿಂದ ಬಳಲಿರುವೆ, ಪಾರಣೆಯ ನಂತರ ಹೋಗು ಎಂದನು. ಸಾವಿತ್ರಿಯು ಈ ದಿನ ಹೇಗೂ ಚಂದ್ರೋದಯದ ನಂತರವೇ ನನಗೆ ಭೋಜನ. ಅಷ್ಟರೊಳಗೆ ಅರಣ್ಯ ನೋಡಿ ಬರುವೆ ಎಂದಳು. ಹಾಗಾದರೆ ಪತಿಯನ್ನು ಜೊತೆ ಮಾಡಿಕೊಂಡು ಹೋಗಿ ಬಾ ಎಂದು ಮಾವನು ಹೇಳಿದಾಗ ಸಾವಿತ್ರಿಯು ಸತ್ಯವಾನನ ಜೊತೆಯಲ್ಲಿ ಅರಣ್ಯಕ್ಕೆ ಹೊರಟಳು.

ಅರಣ್ಯವನ್ನು ತಲುಪಿದ ಅವರು ಹಣ್ಣುಹಂಪಲುಗಳನ್ನು ಕಲೆಹಾಕಿದರು. ವೃಕ್ಷಸೌಂದರ್ಯವನ್ನು ನೋಡಿ ಸಾವಿತ್ರಿಗೆ ಸಂತೋಷವಾಯಿತು. ಕಟ್ಟಿಗೆಗಳನ್ನು ಒಟ್ಟುಗೂಡಿಸಿದ ಸತ್ಯವಾನನು ನನಗೆ ಏಕೋ ತಲೆ ಶೂಲೆಯಾಗುತ್ತಿದೆ ಎಂದು

ವಟವೃಕ್ಷದ ಅಡಿಯಲ್ಲಿ ಕುಳಿತಿದ್ದ ಸಾವಿತ್ರಿಯ ತೊಡೆಯ ಮೇಲೆ ಮಲಗಿದನು. ಸತ್ಯವಾನನ ಮಾತು ಕೇಳಿ ಸಾವಿತ್ರಿಗೆ ಆತನ ಅಂತ್ಯಕಾಲ ಸಮೀಪಿಸಿದೆ ಎನ್ನಿಸಿತು.

ತೊಡೆಯ ಮೇಲೆ ತಲೆಯಿಟ್ಟು ಮಲಗಿದ ಪತಿಯನ್ನೇ ನೋಡುತ್ತಾ ದುಃಖದಿಂದ ಕುಳಿತಳು. ಸ್ವಲ್ಪ ಹೊತ್ತಿನಲ್ಲಿ ಕೃಷ್ಣ ಪಿಂಗಲ ವರ್ಣದ ತೇಜಸ್ವಿಯಾದ ಒಬ್ಬ ಮಹಾಪುರುಷನು ಅಲ್ಲಿಗೆ ಬಂದನು. ನೀವು ಯಾರು ಎಂದು ಆತನನ್ನು ಪ್ರಶ್ನಿಸಿದಾಗ, ಲೋಕಭಯಂಕರನಾದ ಯಮಧರ್ಮರಾಜನು, ಪತಿವ್ರತೆಯೇ ನಿನ್ನ ಗಂಡನ ಆಯುಷ್ಯ ಇಂದಿಗೆ ಮುಗಿಯಿತು. ಈತನನ್ನು ಪಾಶದಿಂದ ಕಟ್ಟಿ ತೆಗೆದುಕೊಂಡು ಹೋಗಲು ಬಂದಿದ್ದೇನೆ ಎಂದನು.

ಸಾವಿತ್ರಿಯು ಸ್ವಾಮಿನ್, ಮೃತರಾದವರನ್ನು ಕರೆದೊಯ್ಯಲು ಯಮದೂತರು ಬರುತ್ತಾರೆಂದು ಕೇಳಬಲ್ಲೆ. ಆದರೆ ತಾವೇ ಸ್ವತಃ ಇಲ್ಲಿಗೆ ಬರಲು ಕಾಣವೇನು ಎಂದು ಧೈರ್ಯದಿಂದ ಕೇಳಿದಳು. ಯಮದೇವನು, ನಿನ್ನ ಪತಿ ಪರಮಧಾರ್ಮಿಕನೂ, ಸದ್ಗುಣ ಶೀಲನೂ ಆಗಿದ್ದಾನೆ. ಇವನನ್ನು ನನ್ನ ದೂತರು ಮುಟ್ಟುವುದಕ್ಕೆ ಕೂಡ ಸಮರ್ಥರಲ್ಲ. ಆದ್ದರಿಂದ ನಾನೇ ಬಂದಿರುವೆ ಎಂದನು. ಸ್ವಲ್ಪ ಹೊತ್ತಿನಲ್ಲಿಯೇ ಹೆಬ್ಬೆರಳ ಗಾತ್ರದ ಜೀವನನ್ನು ಸತ್ಯವಾನನ ದೇಹದಿಂದ ಹೊರತೆಗೆದು ಪಾಶದಿಂದ ಕಟ್ಟಿ ದಕ್ಷಿಣಾಭಿಮುಖವಾಗಿ ಹೊರಟ ಯಮರಾಜನನ್ನು ಧೈರ್ಯವಂತೆಯಾದ ಸಾವಿತ್ರಿ ಹಿಂಬಾಲಿಸಿದಳು. ಯಮನು, ನೀನು ಏಕೆ ನನ್ನನ್ನು ಹಿಂಬಾಲಿಸುವೆ? ನಿನ್ನ ಪತಿಯ ಉತ್ತರಕ್ರಿಯಾದಿಗಳನ್ನು ಮಾಡಿಸಲು ಹೋಗು ಎಂದನು. ಸಾವಿತ್ರಿಯು ಇದು ಯೋಗ್ಯವಲ್ಲ. ನನ್ನ ಪತಿ ಎಲ್ಲಿಗೆ ಕರೆದೊಯ್ಯಲ್ಪಡುತ್ತಾನೋ ನಾನೂ ಅಲ್ಲಿಗೆ ಹೋಗಬೇಕು, ಇದೆ ಪತಿವ್ರತಾ ನಿಯಮ. ಅದು ಅಲ್ಲದೆ ಸತ್ಪುರುಷರ ಜೊತೆ ಏಳು ಹೆಜ್ಜೆ ನಡೆದು ಹೋಗಬೇಕೆಂಬುದು ಹಿರಿಯರ ಅನುಶಾಸನ. ಆದುದರಿಂದಲೇ ಮಿತ್ರ ಗೌರವದಿಂದ ನಿನ್ನ ಹಿಂದೆಯೇ ನಾನು ಬಂದಿದ್ದೇನೆ. ಧರ್ಮಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲ. ಸಜ್ಜನರ ಸಮ್ಮತಿಯಿಂದ ಹೊರಟ ಧರ್ಮದ ಆಚರಣೆಯೇ ಶ್ರೇಯಸ್ಕರವಾಗಿದೆ. ಇದರ ಹೊರತು ಬೇರೇನೂ ನನಗೆ ಬೇಡ ಎಂದಳು.

ಸಾವಿತ್ರಿಯ ತತ್ವರಸಪೂರ್ಣವಾದ ಮಾತನ್ನು ಮೆಚ್ಚಿದ ಯಮನು, ನಿನ್ನ ಗುಣಗಳಿಗೆ ನಾನು ಮೆಚ್ಚಿದ್ದೇನೆ. ನಿನಗೆ ವರವನ್ನು ಕೊಡಬೇಕನಿಸಿದೆ. ಗಂಡನ ಪ್ರಾಣದ ಹೊರತಾಗಿ ನಿನಗೇನು ಬೇಕೋ ಕೇಳು ಎಂದು ಅನುಗ್ರಹಿಸಿದನು. ಸಾವಿತ್ರಿಯು, ಧರ್ಮರಾಜ, ನನ್ನ ಮಾವ ದ್ಯುಮತ್ಸೇನ ಮಹಾರಾಜರು ರಾಜ್ಯ ಭ್ರಷ್ಟರಾಗಿದ್ದಾರೆ. ಹಾಗೂ ಅಂಧರಾಗಿದ್ದಾರೆ. ಅವರು ಮೊದಲಿನಂತೆಯೇ ಕಣ್ಣುಗಳನ್ನು ಪಡೆದು ರಾಜ್ಯವನ್ನು ಮರಳಿ ಪಡೆಯಲಿ ಎಂದಳು. 'ತಥಾಸ್ತು' ಎಂದ ಯಮರಾಜನು ನೀನು ಇನ್ನು ಹಿಂತಿರುಗಬಹುದಲ್ಲ ಎಂದು ಹೇಳಲು ನನಗೆ ಶ್ರಮವೇ ಇಲ್ಲ. ಪತಿಯ ಸಂಗಡ ನಾನು ಎಲ್ಲಿಗೆ ಬೇಕಾದರೂ ಬರುತ್ತೇನೆ

ಎನ್ನುತ್ತಾ ಸಾವಿತ್ರಿಯು ದೇವ, ನಾನು ಕೇಳುವುದಿನ್ನೂ ಇದೆ. ನನಗೆ ಸತ್ಸಹವಾಸದಲ್ಲೇ ಇರುವಂತಾಗಲಿ ಎಂದು ಹೇಳಿದಳು. ಯಮರಾಜನು ಇದೋ ನಿನಗೆ ಎರಡು ವರಗಳನ್ನು ನೀಡುತ್ತೇನೆ. ನಿನ್ನ ಮಾವನಿಗೆ ಅಂಧತ್ವ ಕಳೆದು, ರಾಜ್ಯಪ್ರಾಪ್ತಿಯಾಗುವುದು ಎಂದಾಶೀರ್ವದಿಸಿದನು.

ಸಾವಿತ್ರಿಯು 'ನೀನು ಎಲ್ಲಾ ಪ್ರಾಣಿಗಳನ್ನು ನಿಯಮಗಳೆಂಬ ಬಂಧನದಿಂದ ಕಟ್ಟಿದ್ದೀಯೆ. ಆದ್ದರಿಂದಲೇ ನಿನಗೆ ಯಮನೆಂಬ ಹೆಸರು. ಕಾಯಾ, ವಾಚಾ, ಮನಸಾ ಧರ್ಮಮಾರ್ಗವನ್ನನುಸರಿಸುವುದೇ ಸತ್ಪುರುಷರ ಧರ್ಮ. ಆದರೆ ನನ್ನ ತಂದೆ ಪುತ್ರ ಪ್ರಾಪ್ತಿಯಿಲ್ಲದೆ ನೊಂದಿದ್ದಾನೆ. ಧರ್ಮಮಾರ್ಗಿಗಳಾದ ನೂರುಜನ ಮಕ್ಕಳನ್ನು ನನ್ನ ತಂದೆಗೆ ಕರುಣಿಸು ಎಂದಳು. ಮೂರು ವರಗಳನ್ನೂ ಸಂತೋಷದಿಂದ ನೀಡಿದ ಧರ್ಮರಾಜನು ಮತ್ತೆ ಹಿಂಬಾಲಿಸುತ್ತಿದ್ದ ಸಾವಿತ್ರಿಯನ್ನು ಹಿಂದಿರುಗಿ ಹೋಗುವಂತೆ ತಿಳಿಸಿದನು. ಸತ್ಯವಾನನ ಪ್ರಾಣದ ಹೊರತಾಗಿ ಏನನ್ನು ಬೇಕಾದರೂ ಕೇಳು ಎಂದನು. ನಾನು ಬದುಕಿರಬೇಕಾದರೆ ನನ್ನ ಪತಿಯ ವಿನಹ ಸಾಧ್ಯವಿಲ್ಲ. ಆದ್ದರಿಂದ ಸತ್ಯವಾನನನ್ನು ಬದುಕಿಸಿಕೊಡು. ಇಲ್ಲದಿದ್ದರೆ ನಾನೂ ಮರಣ ಹೊಂದುವೆ ಎಂದಳು. ನಾಲ್ಕನೆ ವರವಾಗಿ ಬಲಶಾಲಿಗಳಾದ ನೂರುಜನ ಮಕ್ಕಳನ್ನು ಅನುಗ್ರಹಿಸು ಎಂದಳು. ಈ ವರವೂ ಅವಳಿಗೆ ಸಿಕ್ಕಿತು. ಈಗ ನಿರುಪಾಯನಾದ ಯಮರಾಜನು ಸತ್ಯವಾನನ ಜೀವವನ್ನು ಪಾಶದಿಂದ ಬಿಡುಗಡೆ ಮಾಡಿದನು. ನಿನ್ನ ಪತಿಯನ್ನು ಪಾಶಮುಕ್ತನಾಗಿ ಮಾಡಿದ್ದೇನೆ. ಈತನು ಐಶ್ವರ್ಯಪೂರ್ಣನಾಗಿ ನಾಲ್ಕನೂರುವರುಷ ಸುಖವಾಗಿ ಬಾಳುತ್ತಾನೆ, ಈತನಿಗೆ ಪೂರ್ಣಾಯುಷ್ಯವನ್ನು ನೀಡಿದ್ದೇನೆ ಎಂದನುಗ್ರಹಿಸಿದನು. ಸತ್ಯವಾನನು ಮಲಗಿದ್ದ ವೃಕ್ಷದ ಬಳಿ ಬಂದಾಗ ಆತನು ನಿದ್ರೆಯಿಂದ ಎದ್ದವನಂತೆ ಕುಳಿತನು. ಯಮ–ಸಾವಿತ್ರಿಯರ ಸಂವಾದವನ್ನು ತಾನು ಕನಸಿನಲ್ಲಿ ಕಂಡಂತೆ ವರ್ಣಿಸಿದನು.

ದ್ಯುಮತ್ಸೇನನಿಗೆ ಕಣ್ಣುಗಳು ಮರಳಿ ಬಂದಿತು. ಆಶ್ರಮಕ್ಕೆ ಹಿಂದಿರುಗಿದ ಸತ್ಯವಾನನನ್ನು ಆದರದಿಂದ ಸ್ವಾಗತಿಸಿದರು. ಇವೆಲ್ಲಾ ವಟಸಾವಿತ್ರಿಯ ವ್ರತಾನುಷ್ಠಾನ ಮಹಿಮೆ ಎಂದು ಅವರಿಗೆ ತಿಳಿಯಿತು. ಅಷ್ಟರಲ್ಲಿಯೇ ರಾಜದೂತರು ಬಂದು ಆತನ ಮಂತ್ರಿಯು ಶತ್ರುಸಂಹಾರ ಮಾಡಿ ರಾಜ್ಯವನ್ನು ಮರಳಿಗಳಿಸಿದ್ದಾರೆ, ನೀವು ತ್ವರೆಮಾಡಿ ರಾಜಧಾನಿಗೆ ಹಿಂದಿರುಗಿ, ರಾಜ್ಯಾಭೀಷೇಕವನ್ನು ನಡೆಸಿಕೊಳ್ಳಿ ಎಂದು ಹೇಳಿದರು. ಹೀಗೆ ವಟಸಾವಿತ್ರೀ ವ್ರತ ಮಹಿಮೆಯಿಂದ ರಾಜ್ಯಪ್ರಾಪ್ತಿ ವೈಧವ್ಯನಿವೃತ್ತಿ ಪುತ್ರಪ್ರಾಪ್ತಿಗಳಾದುವು.

ಸನತ್ಕುಮಾರರು ಸಂತೋಷದಿಂದ ಈ ವ್ರತ ಮಹಿಮೆಯನ್ನು ಕೇಳಿ ತಿಳಿದು ಇದರ ಆಚರಣಾ ವಿಧಾನವನ್ನು ಕೇಳಿದರು. ಈಶ್ವರನು ಇದರ ವಿಧಿಗಳನ್ನು ಹೀಗೆ ತಿಳಿಸಿದನು. ಈ ವ್ರತವನ್ನು ಮಾಡಬೇಕೆಂದಿರುವ ಸ್ತ್ರೀಯರು ಒಂದು ವರ್ಷ ಪೂರ್ತಿ ಒಂದಾವರ್ತಿ ಊಟಮಾಡಬೇಕು, ಮೂರುದಿವಸ ಉಪವಾಸ ಮಾಡಿ ನಾಲ್ಕನೇದಿನ

ಚಂದ್ರೋದಯದ ನಂತರ ಚಂದ್ರನಿಗೆ ಅರ್ಘ್ಯಕೊಟ್ಟು ಬ್ರಾಹ್ಮಣ ಸುವಾಸಿನಿಯರಿಗೆ ಭೋಜನ ಮಾಡಿಸಿ ತಾನು ಊಟಮಾಡಬೇಕು. ಸಾವತ್ರೀ–ಪ್ರಸಾವತ್ರಿ ದೇವಿಯರನ್ನು ನಿರ್ವಿಘ್ನವಾಗಿ ಪೂಜಿಸುವುದರಿಂದ ಮಂಗಳವಾಗುತ್ತದೆ.

ಈ ವ್ರತದ ಇತರ ನಿಯಮಗಳೆಂದರೆ ಪ್ರತಿದಿನ ವಟವೃಕ್ಷಕ್ಕೆ ನೀರು ಹಾಕಬೇಕು. ಬಿದಿರು ಪಾತ್ರೆಯಲ್ಲಿ ಮರಳುಹಾಕಿ ಅದರ ಮೇಲೆ ಸಪ್ತಧಾನ್ಯಗಳನ್ನು ತುಂಬಬೇಕು. ಈ ಪಾತ್ರೆಗೆ ಎರಡು ವಸ್ತ್ರಗಳನ್ನು ಸುತ್ತಿ ಅದರ ಮೇಲೆ ಸತ್ಯವಾನ್ ಸಾವಿತ್ರಿಯರ ಪ್ರತಿಮೆಗಳನ್ನು ಸ್ಥಾಪಿಸಬೇಕು. ಈ ಪ್ರತೀಕವನ್ನು ಷೋಡಶೋಪಚಾರ ಪೂಜೆಗಳಿಂದ ಪೂಜಿಸಬೇಕು. ಹೀಗೆ ಮೂರು ದಿನಗಳ ನಂತರ ಹದಿನಾರು ದಂಪತಿಗಳಿಗೆ ಭೂರಿಭೋಜನ ಮಾಡಿಸಬೇಕು, ಪೂಜಾಂತ್ಯದಲ್ಲಿ ಈ ಪ್ರತಿಮೆಯನ್ನು ದಾನಮಾಡಿ, ದಕ್ಷಿಣಾದಿಗಳಿಂದ ಯೋಗ್ಯ ಬ್ರಾಹ್ಮಣರನ್ನು ಸತ್ಕರಿಸಬೇಕು. ಈ ವ್ರತ ಪ್ರಭಾವದಿಂದ ಸ್ತ್ರೀ ದೀರ್ಘಸೌಭಾಗ್ಯವನ್ನು ಪಡೆಯುತ್ತಾಳೆ.

ಹೀಗೆ ಸ್ಕಂದಪುರಾಣದ ಶಿವ–ಸನತ್ಕುಮಾರ ಸಂವಾದದಲ್ಲಿ ವಟಸಾವಿತ್ರೀ ಕಥೆಯು ಮುಗಿಯಿತು.



# ಗರುಡಪಂಚಮೀ ವ್ರತ

## (ಶ್ರಾವಣ ಶುದ್ಧ ಪಂಚಮೀ)

(ಶ್ರಾವಣ ಶುದ್ಧ ಪಂಚಮಿಯ ದಿನ ಅಣ್ಣ ತಮ್ಮಂದಿರನ್ನು ಪಡೆದಿರುವ ಸ್ತ್ರೀಯರು ಈ ವ್ರತವನ್ನು ಆಚರಿಸುತ್ತಾರೆ. ಈ ದಿವಸ ಪ್ರಾತಃಕಾಲದಲ್ಲೆದ್ದು ಶುಚಿರ್ಭೂತರಾಗಿ ಗೌರೀದೇವಿಯನ್ನು ಪೂಜಿಸಬೇಕು, ವಿಷ್ಣುವಾಹನನಾದ ವಿನತಾಪುತ್ರ ಗರುಡ ಜನಿಸಿದ್ದ ಶ್ರಾವಣ ಶುದ್ಧ ಪಂಚಮೀದಿನ. ಆದುದರಿಂದ ಈ ವ್ರತವನ್ನು ಗರುಡ ಪಂಚಮೀ ವ್ರತ ಎನ್ನುತ್ತಾರೆ. ಫಣಿಗೌರೀವ್ರತ ಹಾಗೂ ನಾಗಪಂಚಮೀವ್ರತ ಎಂಬ ಹೆಸರುಗಳೂ ಇವೆ. ಇದನ್ನು ತಮ್ಮ ಸಂಪ್ರದಾಯಾನುಸಾರ ಆಚರಿಸಿ, ಸಹೋದರರಿಗೆ ಶುಭ ಕೋರಬೇಕು.)

### ಪೂಜಾವಿಧಾನ

(ಘಂಟಾನಾದ ಮಾಡಿ) ಆಗಮಾರ್ಥಂತು ದೇವಾನಾಂ ಗಮನಾರ್ಥಂತು ರಕ್ಷಸಾಂ। ಕುರ್ಯಾದ್ಘಂಟಾರವಂ ತತ್ರ (ದೇವತಾಹ್ವಾನ ಲಾಂಚನಂ ॥) ಪ್ರಾರ್ಥನಾ ॥ ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ। ಪ್ರಸನ್ನ ವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಅಭೀಪ್ಸಿತಾರ್ಥ ಸಿದ್ಧ್ಯರ್ಥಂ ಪೂಜಿತೋಯಸ್ಸುರೈರಪಿ । ಸರ್ವವಿಘ್ನಹರಸ್ತಸ್ಮೈ ಗಣಾಧಿಪತಯೇ ನಮಃ ॥

(ವಿನಾಯಕ ವ್ರತದಲ್ಲಿರುವಂತೆ ಪ್ರಾರ್ಥನಾ ಶ್ಲೋಕಗಳನ್ನು ಪಠಿಸಿ,)

ಆಚಮ್ಯ.....(ಮೂರುಸಲ ಆಚಮನಮಾಡಿ)

**ಕೇಶವಾಯಸ್ವಾಹಾ । ನಾರಾಯಣಾಯಸ್ವಾಹಾ । ಮಾಧವಾಯಸ್ವಾಹಾ। ಗೋವಿಂದಾಯನಮಃ..........ಶ್ರೀಕೃಷ್ಣಾಯನಮಃ (ಪ್ರಾಣಾಯಾಮ್ಯ) ಓಂ ಭೂಃ, ಓಂ ಭುವಃ, ಓಂ ಸುವಃ, ಓಂ ಮಹಃ, ಓಂ ಜನಃ, ಓಂ ತಪಃ, ಓಂ ಸತ್ಯಂ ಭೂರ್ಭುವಸ್ಸುವರೋಂ..........**

(ಸಂಕಲ್ಪ) : ಮಮ ಉಪಾತ್ತ ಸಮಸ್ತದುರಿತಕ್ಷಯದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಶುಭೇ ಶೋಭನೇ ಮುಹೂರ್ತೇ........ನಾಮ ಸಂವತ್ಸರೇ ದಕ್ಷಿಣಾಯನೇ ವರ್ಷಋತೌ ಶ್ರಾವಣ ಮಾಸೇ ಶುಕ್ಲಪಕ್ಷೇ ಪಂಚಮ್ಯಾಂ... ವಾಸರ...ನಕ್ಷತ್ರಯುಕ್ತಾಯಾಂ ಅಸ್ಯಾಂ ಶುಭತಿಥೌ ಅಸ್ಮಾಕಂ ಸಹಕುಟುಂಬಾನಾಂ ಕ್ಷೇಮಸ್ಥೈರ್ಯ ವಿಜಯಾಯುರಾರೋಗ್ಯ ಐಶ್ವರ್ಯಾಭಿವೃದ್ಧ್ಯರ್ಥಂ ದೀರ್ಘಸುಮಂಗಲೀತ್ವ ಸಿದ್ಧ್ಯರ್ಥಂ ಸಮಸ್ತ ಮಂಗಲಾವಾಪ್ತ್ಯರ್ಥಂ ವರ್ಷೇ ವರ್ಷೇ ಪೂಜ್ಯಮಾನಾಂ ಫಣಿಗೌರೀದೇವತಾಮುದ್ದಿಶ್ಯ ಫಣಿಗೌರೀದೇವತಾ ಪ್ರೀತ್ಯರ್ಥಂ ಯಾವಚ್ಛಕ್ತಿ

ಧ್ಯಾನಾವಾಹನಾದಿ ಷೋಡಶೂಪಚಾರ ಪೂಜಾಂ ಕರಿಷ್ಯೇ॥

(ಮಂತ್ರಾಕ್ಷತೆ ನೀರನ್ನು ಅರ್ಘ್ಯ ಪಾತ್ರೆಯಲ್ಲಿ ಬಿಡಿ.)

ಕಲಶಪೂಜಾ॥ ಕಲಶಸ್ಯ ಮುಖೇ.........ಸಮಾಶ್ರಿತಾಃ

(ನಂತರ ಗಣಪತಿ ಪೂಜೆಯನ್ನು ಮಾಡಬೇಕು, ಇದಾದ ಮೇಲೆ ಕಲಶದಲ್ಲಿ ಫಣಿಗೌರಿಯನ್ನು ಆವಾಹಿಸಿ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು. ಇವೆಲ್ಲಾ ವಿನಾಯಕ ವ್ರತದಲ್ಲಿರುವಂತೆ ಮಾಡತಕ್ಕದ್ದು.)

॥ಫಣಿಗೌರೀಪೂಜಾ॥ (ಕೈಜೋಡಿಸಿ)

ಆಗಚ್ಛ ದೇವ ದೇವೇಶಿ ಶಂಕರಾರ್ಧ ಶರೀರಿಣೇ।
ಆವಾಹಯಾಮಿ ಭಕ್ತ್ಯಾ ತ್ವಾಂ ಫಣಿಗೌರಿ ನಮೋಸ್ತು ತೇ॥
(ಫಣಿಗೌರೀ ದೇವತಾಯೈ ಆವಾಹನಂ ಸಮರ್ಪಯಾಮಿ) (ಮಂತ್ರಾಕ್ಷತೆ ಏರಿಸಿ)

ಮಾಣಕ್ಯ ವಜ್ರ ವೈಢೂರ್ಯ ನೀಲರತ್ನಾದಿ ಶೋಭಿತಂ।
ರತ್ನ ಸಿಂಹಾಸನಂ ದಿವ್ಯಂ ಗೃಹಾಣ ಪರಮೇಶ್ವರಿ।
(ಫಣಿಗೌರೀ ದೇವತಾಯೈ ಆಸನಂ ಸಮರ್ಪಯಾಮಿ)(ಮಂತ್ರಾಕ್ಷತೆ ಏರಿಸಿ.)

ಗಂಗಾ ಗೋದಾವರೀ ತೋಯಂ ಕೃಷ್ಣ ವೇಣಿ ಸಮುದ್ಭವಂ।
ಅರ್ಘ್ಯಂ ದಾಸ್ಯಾಮಿ ತೇ ದೇವಿ ಫಣಿಗೌರಿ ನಮೋಽಸ್ತುತೇ ॥
ಫಣಿಗೌರೀ ದೇವತಾಯೈ ಅರ್ಘ್ಯಂ॥ ಮಧುಪರ್ಕಂ ಸಮರ್ಪಯಾಮಿ॥
(ಅರ್ಘ್ಯವನ್ನಿತ್ತು ಹೂವನ್ನು ಸಕ್ಕರೆ ನೀರಿನಲ್ಲಿ ಅದ್ದಿ ಪ್ರೋಕ್ಷಿಸಬೇಕು)

ಪಯೋದಧಿ ಸಮಾಯುಕ್ತಂ ಘೃತಶರ್ಕರ ಸಂಯುತಂ ।
ಪಂಚಾಮೃತೈಃ ಸ್ನಾನಮಿದಂ ಗೃಹಾಣಾಸುರ ಮರ್ದನೀ ॥
ಮಂತ್ರ॥ ಆಪೋಹಿಷ್ಠಾಮಯೋಭುವಃ........ಆಪೋಜನಯಥಾಚನಃ ॥

ಫಣಿಗೌರೀ ದೇವತಾಯೈ ಶುದ್ಧೋದಕ ಸ್ನಾನಂ ಸಮರ್ಪಯಾಮಿ ॥
ರಕ್ತಪೀತಮಯಂ ವಸ್ತ್ರಂ ಮಕೂಲಂ ಚ ಮನೋಹರಂ ।
ಮಯಾ ದತ್ತಮಿದಂ ವಸ್ತ್ರಂ ಧಾರ್ಯತೇ ಭಂಡಮರ್ದನಿ ॥
ಫಣಿಗೌರೀ ದೇವತಾಯೈ ವಸ್ತ್ರಯುಗ್ಮಂ ಸಮರ್ಪಯಾಮಿ ॥
(ಗೆಜ್ಜೆ ವಸ್ತ್ರವನ್ನು ಅರ್ಪಿಸಿ)

ಬ್ರಹ್ಮಸೂತ್ರಂ ಶುಭಮಿದಂ ತ್ರಿಗುಣಂ ತ್ರಿಗುಣೈರ್ಯುತಂ।
ಬ್ರಹ್ಮಗ್ರಂಥಿಯುತಂ ದೇವತಾಯೈ ಯಜ್ಞೋಪವೀತಂ ಸಮರ್ಪಯಾಮಿ॥

(ಯಜ್ಞೋಪವೀತ ಅಥವಾ ಹಸೀದಾರ ಅರ್ಪಿಸಿ)

ಮಂತ್ರ ॥ ಗೌರೀಮಿಮಾಯ ಸಲಿಲಾನಿ ದಕ್ಷತ್ಯೇಕಪದೀ ದ್ವಿಪದೀಸಾ ಚತುಷ್ಪದೀ ಅಷ್ಟಾಪದೀ ನವಪದೀ ಬಭೂವುಷೀ ಸಹಸ್ರಾಕ್ಷರಾ ಪರಮೇ ವ್ಯೋಮನ್॥ ಫಣಿಗೌರೀ ದೇವತಾಯೈ ಕುಂಕುಮಾದಿ ಪರಿಮಳದ್ರವ್ಯಾಣಿ ಸಮರ್ಪಯಾಮಿ॥

(ಅರಿಶಿನ, ಕುಂಕುಮವನ್ನು ಅರ್ಪಿಸಿ)

ಮುಕ್ತಾಮಾಣಿಕ್ಯ ವೈಡೂರ್ಯರತ್ನ ಹೇಮಾದಿ ನಿರ್ಮಿತಂ ।
ದಿವ್ಯ ಮಾಭರಣಂ ದೇವಿ ಗಿರಿಜಾಯೈ ನಮೋಸ್ತುತೇ ॥
ಫಣಿಗೌರೀ ದೇವತಾಯೈ ಆಭರಣಾನಿ ಸಮರ್ಪಯಾಮಿ॥

(ಹೂ, ಮಂತ್ರಾಕ್ಷತೆ ಅರ್ಪಿಸಿ)

ಶ್ರೀಗಂಧಂ ಚಂದನೋನ್ಮಿಶ್ರಂ ಕಸ್ತೂರ್ಯಾದಿ ಸಮನ್ವಿತಂ।
ಗನ್ಧಂ ಗೃಹಾಣ ದೇವೇಶಿ ಮಯಾದತ್ತಮಿದಂ ಶುಭೇ।
ಫಣಿಗೌರೀ ದೇವತಾಯೈ ಗಂಧಾನ್ ಧಾರಯಾಮಿ॥

(ಗಂಧವನ್ನು ಅರ್ಪಿಸಿ)

ಅಕ್ಷತಾನ್ ದವಳಾನ್ ದಿವ್ಯಾನ್ ಶಾಲೀತಂಡುಲ ಮಿಶ್ರಿತಾನ್।
ಹರಿದ್ರಾಚೂರ್ಣ ಸಂಯುಕ್ತಾನ್ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ॥
ಫಣಿಗೌರೀ ದೇವತಾಯೈ ಅಕ್ಷತಾನ್ ಸಮರ್ಪಯಾಮಿ॥

(ಅಕ್ಷತೆ ಕಾಳನ್ನು ಅರ್ಪಿಸಿ)

ಸೇವಂತಿಕಾ ವಕುಲ ಚಂಪಕ ಪಾಟಲಾಬ್ಜೈಃ
ಪುನ್ನಾಗ ಜಾಜಿ ಕರವೀರ ರಸಾಲ ಪುಷ್ಪೈಃ
ಬಿಲ್ವ ಪ್ರವಾಳ ತುಳಸೀದಳ ಮಲ್ಲಿಕಾದ್ಯೈಃ
ತ್ವಾಂ ಪೂಜಯಾಮಿ ಜಗದೀಶ್ವರಿ ತೇ ಪದಾಬ್ಜೇ॥ ಪುಷ್ಪಂ ಸಮರ್ಪಯಾಮಿ॥

(ಹೂಗಳನ್ನು ಅರ್ಪಿಸಿ)

## ॥ ಅಥ ಅಂಗಪೂಜಾ ॥

| | | |
|---|---|---|
| ಶಿವಾಯೈ ನಮಃ | ಪಾದೌ | ಪೂಜಯಾಮಿ |
| ಭವಾನ್ಯೈ ನಮಃ | ಗುಲ್ಫೌ | ,, |
| ರುದ್ರಾಣ್ಯೈ ನಮಃ | ಊರೂನ್ | ,, |
| ಶರ್ವಾಣ್ಯೈ ನಮಃ | ಜಂಘೇ | ,, |
| ಸರ್ವಮಂಗಲಾಯೈ ನಮಃ | ಕಟಿಂ | ,, |
| ಅಪರ್ಣಾಯೈ ನಮಃ | ಸ್ತನೌ | ,, |
| ಮೃಡಾನ್ಯೈ ನಮಃ | ಕಂಠಂ | ,, |
| ಚಂಡಿಕಾಯೈ ನಮಃ | ಬಾಹೂನ್ | ,, |

| | | |
|---|---|---|
| ಅಯರ್ಾಯೈ ನಮಃ | ಮುಖಂ | ಪೂಜಯಾಮಿ |
| ಸತ್ಯೈ ನಮಃ | ನಾಸಿಕಾಂ | ,, |
| ಸುನೇತ್ರಾಯೈ ನಮಃ | ನೇತ್ರೇ | ,, |
| ಸುಕರ್ಣಾಯೈ ನಮಃ | ಕರ್ಣೇ | ,, |
| ಮೇನಕಾತ್ಮಜಾಯೈ ನಮಃ | ಲಲಾಟಂ | ,, |
| ಫಣಿಗೌರ್ಯೈ ನಮಃ | ಶಿರಃ | ,, |
| ಮಹಾಗೌರ್ಯೈ ನಮಃ | ಸರ್ವಾಂಗಾಣಿ ಪೂಜಯಾಮಿ॥ | |

## ॥ ಅಷ್ಟೋತ್ತರ ಶತನಾಮಾವಳಿಃ ॥

ಓಂ ಮಹಾಗೌರ್ಯೈನಮಃ
ಓಂ ಮಹಾದೇವ್ಯೈನಮಃ
ಓಂ ಜಗನ್ಮಾತ್ರೇನಮಃ
ಓಂ ಸರಸ್ವತ್ಯೈನಮಃ
ಓಂ ಚಂಡಿಕಾಯೈನಮಃ
ಓಂ ತ್ರಿಲೋಕಜನನ್ಯೈನಮಃ
ಓಂ ಸರ್ವದೇವಾಧಿದೇವತಾಯೈನಮಃ
ಓಂ ಪಾರ್ವತ್ಯೈನಮಃ
ಓಂ ಪರಮಾಯೈನಮಃ
ಓಂ ಈಶಾಯೈನಮಃ 10
ಓಂ ನಗೇಂದ್ರತನಯಾಯೈನಮಃ
ಓಂ ಸತ್ಯೈನಮಃ
ಓಂ ಬ್ರಹ್ಮಚಾರಿಣ್ಯೈನಮಃ
ಓಂ ಶರ್ವಾಣ್ಯೈನಮಃ
ಓಂ ದೇವಮಾತ್ರೇನಮಃ
ಓಂ ತ್ರಿಲೋಚನ್ಯೈನಮಃ
ಓಂ ಬ್ರಹ್ಮಣ್ಯಾಯೈನಮಃ
ಓಂ ವೈಷ್ಣವ್ಯೈನಮಃ
ಓಂ ರೌದ್ರ್ಯೈನಮಃ
ಓಂ ಕಾಲರಾತ್ರ್ಯೈನಮಃ
ಓಂ ತಪಸ್ವಿನ್ಯೈನಮಃ
ಓಂ ಶಿವದೂತ್ಯೈನಮಃ
ಓಂ ವಿಶಾಲಾಕ್ಷ್ಯೈನಮಃ
ಓಂ ಚಾಮುಂಡಾಯೈನಮಃ
ಓಂ ವಿಷ್ಣುಸೋದರ್ಯೈನಮಃ
ಓಂ ಚಿತ್ಕಲಾಯೈನಮಃ
ಓಂ ಚಿನ್ಮಯಾಕಾರಾಯೈನಮಃ
ಓಂ ಮಹಿಷಾಸುರ ಮರ್ದಿನ್ಯೈನಮಃ
ಓಂ ಕಾತ್ಯಾಯನ್ಯೈನಮಃ
ಓಂ ಕಾಲರೂಪಾಯೈನಮಃ 30
ಓಂ ಗಿರಿಜಾಯೈನಮಃ
ಓಂ ಮೇನಕಾತ್ಮಜಾಯೈನಮಃ
ಓಂ ಭವಾನ್ಯೈನಮಃ
ಓಂ ಮಾತೃಕಾಯೈನಮಃ
ಓಂ ಗೌರ್ಯೈನಮಃ
ಓಂ ರಮಾಯೈನಮಃ
ಓಂ ರಾಮಾಯೈನಮಃ
ಓಂ ಶುಚಿಸ್ಮಿತಾಯೈನಮಃ
ಓಂ ಬ್ರಹ್ಮಸ್ವರೂಪಿಣ್ಯೈನಮಃ
ಓಂ ರಾಜಲಕ್ಷ್ಮ್ಯೈನಮಃ 40
ಓಂ ಶಿವಪ್ರಿಯಾಯೈನಮಃ
ಓಂ ನಾರಾಯಣ್ಯೈನಮಃ
ಓಂ ಮಹಾಶಕ್ತ್ಯೈನಮಃ
ಓಂ ನವೋಢಾಯೈನಮಃ
ಓಂ ಭಾಗ್ಯದಾಯಿನ್ಯೈನಮಃ
ಓಂ ಅನ್ನಪೂರ್ಣಾಯೈನಮಃ
ಓಂ ಸದಾನಂದಾಯೈನಮಃ
ಓಂ ಯೌವನಾಯೈನಮಃ

ಓಂ ಮೋಹಿನ್ಯೈನಮಃ
ಓಂ ಜ್ಞಾನಶುದ್ಧ್ಯೈನಮಃ 50
ಓಂ ಜ್ಞಾನಗಮ್ಯಾಯ್ಯೈನಮಃ
ಓಂ ನಿತ್ಯಾನಿತ್ಯಸ್ವರೂಪಿಣ್ಯೈನಮಃ
ಓಂ ಕಮಲಾಯ್ಯೈನಮಃ
ಓಂ ಕಮಲಾಕಾರಾಯ್ಯೈನಮಃ
ಓಂ ರಕ್ತವರ್ಣಾಯ್ಯೈನಮಃ
ಓಂ ಕಲಾನಿಧಯೇನಮಃ
ಓಂ ಮದುಪ್ರಿಯಾಯ್ಯೈನಮಃ
ಓಂ ಕಲ್ಯಾಣ್ಯೈನಮಃ
ಓಂ ಕರುಣಾಯ್ಯೈನಮಃ
ಓಂ ಜನಸ್ಥಾನಾಯ್ಯೈನಮಃ 60
ಓಂ ವೀರಪತ್ನ್ಯೈನಮಃ
ಓಂ ವಿರೂಪಾಕ್ಷ್ಯೈನಮಃ
ಓಂ ವಿರಾಧಿತಾಯ್ಯೈನಮಃ
ಓಂ ಹೇಮಾಭಾಯ್ಯೈನಮಃ
ಓಂ ಸೃಷ್ಟಿರೂಪಾಯ್ಯೈನಮಃ
ಓಂ ಸೃಷ್ಟಿಸಂಹಾರಕಾರಿಣ್ಯೈನಮಃ
ಓಂ ರಂಜನಾಯ್ಯೈನಮಃ
ಓಂ ಯೌವನಾಕಾರಾಯ್ಯೈನಮಃ
ಓಂ ಪರಮೇಶ್ವರಪ್ರಿಯಾಯ್ಯೈನಮಃ
ಓಂ ಪರಾಯ್ಯೈ ನಮಃ 70
ಓಂ ಪುಷ್ಟಿಣ್ಯೈನಮಃ
ಓಂ ಪುರುಷಾಕಾರಾಯ್ಯೈನಮಃ
ಓಂ ಮಹಾರೂಪಾಯ್ಯೈನಮಃ
ಓಂ ಮಹಾರೌದ್ರ್ಯೈನಮಃ
ಓಂ ಮಹಾಪಾತಕನಾಶಿನ್ಯೈನಮಃ
ಓಂ ಕಾಮಾಕ್ಷ್ಯೈನಮಃ
ಓಂ ವಾಮದೇವ್ಯೈನಮಃ
ಓಂ ವರದಾಯ್ಯೈನಮಃ
ಓಂ ಭಯನಾಶಿನ್ಯೈನಮಃ
ಓಂ ವಾಗ್ದೇವ್ಯೈ ನಮಃ 80
ಓಂ ವಚಸ್ಯೈನಮಃ
ಓಂ ವಾರಾಹ್ಯೈನಮಃ
ಓಂ ವಿಶ್ವಮೋಹಿನ್ಯೈನಮಃ
ಓಂ ಪರ್ಣನಿಲಯಾಯ್ಯೈನಮಃ
ಓಂ ವಿಶಾಲಾಕ್ಷ್ಯೈನಮಃ
ಓಂ ಕುಲಸಂಪತ್ಪ್ರದಾಯಿನ್ಯೈನಮಃ
ಓಂ ಆತ್ಮ ದುಃಖಚ್ಛೇದದಕ್ಷಾಯ್ಯೈನಮಃ
ಓಂ ಅಂಬಾಯ್ಯೈನಮಃ
ಓಂ ನಿಖಿಲ ಯೋಗಿನ್ಯೈನಮಃ
ಓಂ ಸದಾಪುರುಸ್ಥಾಯಿನ್ಯೈನಮಃ 90
ಓಂ ತರೋರ್ಮೂಲತಲಂಗತಾಯ್ಯೈನಮಃ
ಓಂ ಹಾರವಾಹ ಸಮಾಯುಕ್ತಾಯ್ಯೈನಮಃ
ಓಂ ಮುನಿಮೋಕ್ಷಪ್ರದಾಯ್ಯೈನಮಃ
ಓಂ ಧರಾಧರ ಭವಾಯ್ಯೈನಮಃ
ಓಂ ಮುಕ್ತಾಯ್ಯೈನಮಃ
ಓಂ ಪುರಮಂತ್ರಾಯ್ಯೈನಮಃ
ಓಂ ವರಪ್ರದಾಯ್ಯೈನಮಃ
ಓಂ ಕಾರ್ನ್ಯೈನಮಃ
ಓಂ ವಾಗ್ಭವ್ಯೈನಮಃ
ಓಂ ದೇವ್ಯೈನಮಃ 100
ಓಂ ಕ್ಲೀಂಕಾರ್ಯೈನಮಃ
ಓಂ ಸಂವಿದೇನಮಃ
ಓಂ ಈಶ್ವರ್ಯೈನಮಃ
ಓಂ ಹ್ರೀಂಕಾರಾಕ್ಷರ ಬೀಜಾಯ್ಯೈ ನಮಃ
ಓಂ ಶಾಂಭವ್ಯೈನಮಃ
ಓಂ ಪ್ರಣವಾತ್ಮಿಕಾಯ್ಯೈ ನಮಃ
ಓಂ ಶ್ರೀ ಮಹಾಗೌರ್ಯೈನಮಃ
ಓಂ ಫಣಿಗೌರ್ಯೈನಮಃ 108

॥ ಅಷ್ಟೋತ್ತರಶತನಾಮಪೂಜಾಂ ಸಮರ್ಪಯಾಮಿ॥

ದಶಾಂಗಂ ಗುಗ್ಗುಲೋಪೇತಂ ಸುಗಂಧಂ ಚ ಮನೋಹರಂ॥
ಧೂಪಂ ದಾಸ್ಯಾಮಿ ದೇವೇಶಿ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್॥
॥ ಫಣಿಗೌರ್ಯೈ ಧೂಪಮಾಘ್ರಾಪಯಾಮಿ॥
(ಅಗರು, ಧೂಪವನ್ನು ಆರತಿ ಎತ್ತಬೇಕು)

ಭಕ್ತ್ಯಾದತ್ತಂ ಮಯಾ ದೀಪಂ ತ್ರಿವರ್ತಿ ಘೃತಸಂಯುತಂ ॥
ಅಂಧಕಾರ ನಿವೃತ್ತ್ಯರ್ಥಂ ಗೃಹಾಣಾಜ್ಞಾನ ನಾಶಿನಿ ॥
॥ ಫಣಿಗೌರ್ಯೈ ದೀಪಂ ದರ್ಶಯಾಮಿ ॥
(ತುಪ್ಪದ ಬತ್ತಿಯಿಂದ ಮಂಗಳಾರತಿ ಬೆಳಗಿಸಿ)

ಭಕ್ಷ್ಯೈರ್ಭೋಜ್ಯೈಶ್ಚ ಚೋಷ್ಯೈಶ್ಚ ಪರಮಾನ್ನಂ ಸಶರ್ಕರಂ ।
ನೈವೇದ್ಯಂ ಗೃಹ್ಯತಾಂ ದೇವಿ ಶಂಭುಪತ್ನೀ ನಮೋಽಸ್ತುತೇ ॥
ಫಣಿಗೌರೀದೇವ್ಯೈ ನೈವೇದ್ಯಂ ಸಮರ್ಪಯಾಮಿ
(ಮಹಾನೈವೇದ್ಯವನ್ನು ಸಮರ್ಪಿಸಿ)

ಪೂಗೀಫಲ ಸಮಾಯುಕ್ತಂ ನಾಗವಲ್ಲೀದಲೈರ್ಯುತಂ ।
ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥
ಫಣಿಗೌರ್ಯೈ ತಾಂಬೂಲಂ ಸಮರ್ಪಯಾಮಿ ॥ ಸುವರ್ಣಪುಷ್ಪದಕ್ಷಿಣಾಃ
ಸಮರ್ಪಯಾಮಿ॥(ವೀಳೆಯದೆಲೆ,ಅಡಿಕೆ, ಸುಣ್ಣವನ್ನು ತಟ್ಟೆಯಲ್ಲಿಟ್ಟು ಅರ್ಪಿಸಿ)

ಮಂತ್ರ ॥ ಮನೋಹಿಂಸೀಜ್ಜಾತವೇದೋ ಗಾಮಶ್ವಂ ಪುರುಷಂ ಜಗತ್
ಅಬಿಭ್ರದಗ್ನ ಆಗಹಿ ಶ್ರಿಯಾ ಮಾ ಪರಿಪಾತಯ॥
ಫಣಿಗೌರ್ಯೈ ನೀರಾಜನಂ ದರ್ಶಯಾಮಿ॥

(ಮಹಾಮಂಗಳಾರತಿ ಮಾಡಬೇಕು. ಇದಕ್ಕೆ ಮುಂಚೆ ಕರ್ಪೂರದ ಆರತಿ ಹಾಗೂ ಕದಲಾರತಿ ಬೆಳಗಬೇಕು.)

॥ ಮಂತ್ರಪುಷ್ಪಂ ॥

ಜಾತವೇದಸೇ ಸುನವಾಮ ಸೋಮಮರಾತೀಯತೋ ನಿದಹಾತಿ ವೇದಃ ।
ಸನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ॥

॥ ಫಣಿಗೌರ್ಯೈ ನಮಃ ಮಂತ್ರಪುಷ್ಪಾಂಜಲಿಂ ಸಮರ್ಪಯಾಮಿ॥

ಯಾನಿ ಕಾನಿ ಚ ಪಾಪಾನಿ ಜನ್ಮಾಂತರ ಕೃತಾನಿ ಚ॥
ತಾನಿ ತಾನಿ ಪ್ರಣಶ್ಯಂತಿ ಪ್ರದಕ್ಷಿಣ ಪದೇ ಪದೇ॥

ಆತ್ಮ ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ (ಪ್ರದಕ್ಷಿಣ ನಮಸ್ಕಾರ ಮಾಡಬೇಕು.

(ಕೈ ಜೋಡಿಸಿ)ಫಣಿಗೌರಿ ನಮಸ್ತೇಸ್ತು ಕೈಲಾಸನಿಲಯೇ ಸ್ಥಿತೇ।
ಲೋಕಮಾತರ್ನಮಸ್ತುಭ್ಯಂ ಸೌಭಾಗ್ಯಂ ದೇಹಿ ಮೇ ಸದಾ॥
(ಪ್ರಾರ್ಥಿಸಬೇಕು)

(ಈಗ ದೇವಿಯ ಮುಂದೆ ಇರಿಸಿದ ಅರಿಶಿನ ದಾರಕ್ಕೆ ಕುಂಕುಮವನ್ನು ಹಚ್ಚಿ ಪೂಜಿಸಬೇಕು. ಇದಕ್ಕೆ ಹತ್ತು ಸಮವಾದ ಗಂಟುಗಳನ್ನು ಹಾಕಿ ಬಲಗೈಯಲ್ಲಿ ಕಟ್ಟಿಕೊಳ್ಳಬೇಕು. ಈ ರೀತಿ ಮಂತ್ರವನ್ನು ಹೇಳಬೇಕು.)

ದಶಗ್ರಂಥಿ ಸಮಾಯುಕ್ತಂ ಕುಂಕುಮಾಕ್ತಂ ಸುದೋರಕಂ।
ಕರೇ ಬಧ್ನಾಮಿ ವರದೇ ತವ ಪ್ರೀತಿಕರಂ ಶುಭಮ್॥

(ಹೀಗೆ ಹೇಳುತ್ತಾ ದೋರಬಂಧನ ಮಾಡಿಕೊಳ್ಳಬೇಕು. ಹಿರಿಯ ಮುತ್ತೈದೆಯರಿಗೆ ಮೊದಲು ಅದನ್ನು ಕೊಟ್ಟು ಅವರಿಂದ ಕಟ್ಟಿಸಿಕೊಳ್ಳಬೇಕು.)

## ॥ ವಾಯನ ದಾನಂ ॥

ಫಣಿಗೌರೀ ಚ ಗೃಹ್ಣಾತು ಫಣಿಗೌರೀ ದದಾತಿ ಚ।
ತಾರಕಾ ಫಣಿಗೌರೀ ಚ ಫಣಿಗೌರೀ ನಮೋಽಸ್ತುತೇ॥

(ಈ ಶ್ಲೋಕವನ್ನು ಹೇಳಿ ವಾಯನದಾನ ನೀಡಬೇಕು. ಪುನಃಪೂಜಾ ಷೋಡಶೋಪಚಾರಪೂಜೆ, ನೈವೇದ್ಯ, ಮಂಗಳಾರತಿ ಮಾಡಬೇಕು).

॥ ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ।
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಮಹೇಶ್ವರಿ
ಯತ್ಪೂಜಿತಂ ಮಯಾ ದೇವಿ ಪರಿಪೂರ್ಣಂ ತದಸ್ತು ತೇ॥

॥ ಅನೇನ ಕಲ್ಪೋಕ್ತ ಪ್ರಕಾರೇಣ ಆಚರಿತೇನ ಪೂಜಾ ವಿಧಿನಾ
ಫಣಿಗೌರೀ ದೇವತಾ ಸುಪ್ರೀತಾ ಸುಪ್ರಸನ್ನಾ ವರದಾ ಭವತು॥
(ಸಂಜೆ ಪುನಃ ಪೂಜೆ ಮಾಡಿ ಕದಲಿಸಬಹುದು)

ಪೂಜಾ ವಿಧಾನ ಮುಗಿಯಿತು.

# ಗರುಡ ಪಂಚಮೀ ವ್ರತಕಥೆ

ಸೂತಪುರಾಣಿಕರು ಶೌನಕರೇ ಮೊದಲಾದ ಋಷಿಗಳನ್ನುದ್ದೇಶಿಸಿ ಹೇಳಿದರುಃ ಮುನಿವರ್ಯರಿರಾ, ಸೌಭಾಗ್ಯಪ್ರದವಾದ ಅತ್ಯುತ್ತಮ ವ್ರತವೊಂದನ್ನು ಹೇಳುತ್ತೇನೆ ಕೇಳಿರಿ. ಈ ವ್ರತವನ್ನು ಅಣ್ಣ ತಮ್ಮಂದಿರಿರುವ ಸ್ತ್ರೀಯರು ಆಚರಿಸಬೇಕು. ಈ ಗರುಡ ಪಂಚಮಿ ವ್ರತವನ್ನು ಪ್ರತಿವರ್ಷ ಶ್ರಾವಣ ಶುದ್ಧ ಪಂಚಮಿಯ ಶುಭ ದಿವಸ ಮಾಡಬೇಕು. ಈ ವ್ರತವನ್ನು ಹತ್ತು ವರುಷ ಮಾಡಿ ಉದ್ಯಾಪನೆ ಮಾಡಬೇಕು.

ಶೌನಕರು 'ಮಹಾತ್ಮರಾದ ಸೂತರೆ, ಈ ವ್ರತದಲ್ಲಿ ನನಗೆ ಆಸಕ್ತಿ ಉಂಟಾಗಿದೆ. ಇದರ ಆಚರಣೆಯ ಬಗ್ಗೆ ಕೃಪೆಯಿಟ್ಟು ನನಗೆ ತಿಳಿಸಿ ಎಂದು ಪ್ರಾರ್ಥಿಸಿದರು. ಸೂತರು ಈ ವ್ರತದ ಬಗ್ಗೆ ಹೇಳತೊಡಗಿದರು. ಶ್ರಾವಣ ಮಾಸದ ಶುದ್ಧ ಪಂಚಮಿಯ ದಿನ ಸೋದರರನ್ನು ಹೊಂದಿರುವ ಸ್ತ್ರೀಯು ಇದನ್ನು ಆಚರಿಸಿದರೆ ಆಕೆಗೆ ಅಮಿತವಾದ ಸೌಭಾಗ್ಯ, ಪುಣ್ಯಗಳು ದೊರೆಯುತ್ತವೆ. ಪ್ರಾತಃಕಾಲದಲ್ಲಿ ಎದ್ದು ಶುಚಿರ್ಭೂತಳಾಗಿ ಅರಿಶಿನ ಮೊದಲಾದ ಮಂಗಳ ದ್ರವ್ಯಗಳನ್ನು ಬಳಸಿ ಮಂಗಳಸ್ನಾನ ಮಾಡಬೇಕು. ಶುಭ್ರವಸ್ತ್ರಗಳನ್ನು ಧರಿಸಬೇಕು. ನಂತರ ಪೂಜಾ ಮಂಟಪವನ್ನು ಹೂಗಳಿಂದ ಸುಂದರವಾಗಿ ಅಲಂಕಾರ ಮಾಡಬೇಕು. ಈ ಮಂಟಪದ ಮಧ್ಯೆ ರಂಗವಲ್ಲಿಯಿಂದ ಶ್ರೀಚಕ್ರವನ್ನು ರಚಿಸಬೇಕು. ಈ ರಂಗವಲ್ಲಿಯ ಮೇಲೆ ಆಸನವನ್ನು ಹಾಕಬೇಕು. ಇದರ ಮೇಲೆ ಅಕ್ಕಿಯನ್ನೂ ಹೂಗಳನ್ನೂ ಹರಡಬೇಕು. ಬಂಗಾರ, ಬೆಳ್ಳಿ, ತಾಮ್ರ ಮೊದಲಾದ ಶ್ರೇಷ್ಠ ಲೋಹಗಳಿಂದ ನಿರ್ಮಿತವಾದ ಶೇಷನಾಗ ಪ್ರತಿಮೆಯನ್ನು ಇರಿಸಿ ಅದರಲ್ಲಿ ಗೌರೀದೇವಿಯನ್ನು ಆವಾಹಿಸಿ ಪೂಜಿಸಬೇಕು. ಪಂಚಾಮೃತ, ಪಂಚಗವ್ಯ, ವಸ್ತ್ರ, ಆಭರಣ, ಗಂಧ, ಅಕ್ಷತೆಗಳಿಂದ ದೇವಿಯನ್ನು ಪೂಜಿಸಬೇಕು. ನೈವೇದ್ಯ, ತಾಂಬೂಲಾದಿಗಳಿಂದ, ಪ್ರದಕ್ಷಿಣ ನಮಸ್ಕಾರ, ಧೂಪ, ದೀಪಾದಿಗಳಿಂದ ಆಕೆಯನ್ನು ಪೂಜಿಸಿ ಹತ್ತು ಗ್ರಂಥಿಗಳುಳ್ಳ ದಾರವನ್ನು ಪೂಜಿಸಿ, ಅದನ್ನು ಬಲಗೈಯಲ್ಲಿ ಕಟ್ಟಿಕೊಳ್ಳಬೇಕು. ನಂತರ ಬ್ರಾಹ್ಮಣೋತ್ತಮನಿಗೆ ವಾಯನ ದಾನವನ್ನು ಕೊಡಬೇಕು. ಗೌರೀದೇವಿಯಲ್ಲಿ ಪರಮ ಭಕ್ತಿಯುಳ್ಳವಳಾಗಿ ದಕ್ಷಿಣೆ, ತಾಂಬೂಲ, ಧಾನ್ಯರಾಶಿಯಿಂದ ಸಹಿತವಾದ ದಾನವನ್ನು ಕೊಟ್ಟು ನಂತರವೇ ತಾನು ಭೋಜನವನ್ನು ಮಾಡಬೇಕು. ಈ ರೀತಿ ಯಾವ ಸ್ತ್ರೀಯು ಹತ್ತು ವರ್ಷ ತಪ್ಪದೆ ವ್ರತಾಚರಣೆ ಮಾಡುತ್ತಾಳೋ ಆಕೆಯ ಮನಸ್ಸಿನ ಆಸೆಗಳೆಲ್ಲಾ ಪೂರೈಸಿ ಪತಿಲೋಕವೇ ಸಿಗುವುದು. ಇಹ–ಪರಗಳಲ್ಲೂ ಆಕೆಗೆ ಪರಮಸುಖ ದೊರೆಯುತ್ತದೆ. ಪುತ್ರಸೌಖ್ಯ, ಧನದಾನ್ಯಸುಖಗಳು ಸಿಗುತ್ತವೆ. ಐಶ್ವರ್ಯಾಭಿವೃದ್ಧಿಯಾಗುವುದು.

ಈ ವ್ರತದ ಮಹಿಮೆಯನ್ನು ತಿಳಿದ ಶೌನಕರು ಗರುಡನ ಜನ್ಮವೃತ್ತಾಂತದ ಬಗ್ಗೆ ನಮಗೆ ತಿಳಿಸಿರಿ ಎಂದು ಸೂತರನ್ನು ಕೇಳಿದಾಗ ಅವರು ಹೀಗೆ ಹೇಳಿದರು. ಬ್ರಹ್ಮದೇವನ

ಮಗನಾದ ಕಶ್ಯಪ ಮಹಾಮುನಿಯು ತನ್ನ ಪತ್ನಿ ಸುಪರ್ಣೀದೇವಿಯಲ್ಲಿ ಗರುತ್ಮಂತನೆಂಬ ಮಗನನ್ನು ಪಡೆದರು. ಈತನನ್ನು ಗರುಡನೆಂದು ಕರೆಯುವರು. ಗರುಡದೇವನು ಬೆಳೆದಂತೆ ತನ್ನ ತಾಯಿಯು ಸವತಿಯ ಮನೆಯಲ್ಲಿ ದಾಸಿಯಂತೆ ಇರುವುದನ್ನು ಕಂಡು, ತಾಯಿ ಇದೇಕೆ ನಿನಗೆ ಈ ದಾಸ್ಯಭಾವ ? ಎಂದು ಕೇಳಿದನು. ಮಗೂ ಅಮೃತವನ್ನು ತಂದು ಸೇವಿಸುವುದರಿಂದ ನಮ್ಮ ಈ ದಾಸ್ಯವು ನಿವಾರಣೆಯಾಗುವುದು ಎಂಬ ತಾಯಿಯ ಮಾತನ್ನು ಕೇಳಿದೊಡನೆಯೆ ಗರುಡನು ದೇವಲೋಕಕ್ಕೆ ಹೊರಟನು. ಅಮೃತವನ್ನು ತರಲು ಹೊರಟ ಗರುಡನನ್ನು ನೋಡಿದ ಇಂದ್ರಾದಿ ದೇವತೆಗಳು ಹೆದರಿ ಆಯುಧಗಳನ್ನು ಹಿಡಿದು ಬಂದರು. ಅವನನ್ನು ಪರಿಘ ಮುಂತಾದ ಆಯುಧಗಳಿಂದ ಆವರಿಸಿದರು. ಆದರೆ ಗರುಡನು ಕ್ಷಣಮಾತ್ರದಲ್ಲಿಯೇ ಎಲ್ಲವನ್ನೂ ತನ್ನ ರೆಕ್ಕೆಗಳಿಂದ ನಿವಾರಿಸಿಬಿಟ್ಟನು. ಬೇಗನೆ ಅಮೃತವನ್ನು ತೆಗೆದುಕೊಂಡು ತಾಯಿಯ ಬಳಿ ಬಂದನು. ಕದ್ರೂದೇವಿಯು ಇದನ್ನು ನೋಡಿ ಇದರಿಂದ ನಿನ್ನ ದಾಸ್ಯ ನಿವಾರಣೆಯಾಯಿತು. ಇನ್ನು ನೀನು ಸ್ವಂತಂತ್ರಳು ಎಂದು ಸುಪರ್ಣಿಗೆ ಹೇಳಿದಳು. ಇಂತಹ ಅನೇಕ ಸಾಹಸದ ಕೆಲಸಗಳನ್ನು ಗರುಡದೇವನು ಮಾಡಿದ್ದಾನೆ. ಹೀಗೆ ಗರುಡದೇವನು ಶ್ರಾವಣ ಶುದ್ಧ ಪಂಚಮೀ ಜನಿಸಿದುದರಿಂದ ಈ ಶುಭ ದಿನವನ್ನು ಗರುಡಪಂಚಮೀ ಎನ್ನುತ್ತಾರೆ. ಈ ವ್ರತವನ್ನು ಆಚರಿಸಿದವರು, ವ್ರತಕಥೆಯನ್ನು ಕೇಳಿದವರು ಉತ್ತಮ ಲೋಕಗಳನ್ನು ಪಡೆಯಲು ಯೋಗ್ಯರಾಗುತ್ತಾರೆ. ಇಲ್ಲಿಗೆ ಗರುಡಪಂಚಮೀ ವ್ರತಕಥೆ ಸಂಪೂರ್ಣವಾಯಿತು.

# ಜ್ಯೇಷ್ಠಾದೇವೀ ವ್ರತ

## (ಜ್ಯೇಷ್ಠಾಗೌರೀವ್ರತ । ಜ್ಯೇಷ್ಠಾಲಕ್ಷ್ಮೀ ವ್ರತ)

### (ಭಾದ್ರಪದ ಶುದ್ಧ ಅಷ್ಟಮೀ)

(ಈ ವ್ರತವನ್ನು ಭಾದ್ರಪದ ಮಾಸದ ಶುಕ್ಲಪಕ್ಷದಲ್ಲಿ ಜ್ಯೇಷ್ಠಾ ನಕ್ಷತ್ರದಲ್ಲಿ ಆಚರಿಸಬೇಕು. ಆ ದಿನ ಅಷ್ಟಮಿ ಬಂದರೆ ತುಂಬ ಶ್ರೇಷ್ಠವೆಂದು ಹೇಳುತ್ತಾರೆ. ಜ್ಯೇಷ್ಠಾ ನಕ್ಷತ್ರದಲ್ಲಿ ದೇವಿಯನ್ನು ಪೂಜಾವಾಹನೆಗಳನ್ನು ಮಾಡಿ, ಮೂಲಾ ನಕ್ಷತ್ರದಲ್ಲಿ ವಿಸರ್ಜನೆ ಮಾಡಬೇಕು. ಈ ವ್ರತಕ್ಕೆ **ಏಳೀಅಷ್ಟಮಿ** ಎಂದೂ ಹೇಳುತ್ತಾರೆ. ಮಣ್ಣಿನ ಗಡಿಗೆಯ ಮೇಲೆ ದೇವಿಯ ಆಕಾರವನ್ನು ಬರೆದು, ಶಂಖ ಚಕ್ರಗಳನ್ನು ಚಿತ್ರಿಸಬೇಕು. ಇದನ್ನು ಧಾನ್ಯದ ಪೀಠದ ಮೇಲಿರಿಸಿ ಧ್ಯಾನಾವಾಹನಗಳನ್ನು ಮಾಡಬೇಕು)

**ಪೂಜಾವಿಧಾನ** (ಘಂಟಾನಾದ ಮಾಡಿ)

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ ।
ಕುರು ಘಂಟಾರವಂ ತತ್ರ ದೇವತಾಹ್ವಾನ ಲಾಂಛನಂ ।

ಅಪಸರ್ಪಂ ತು ಯೇ ಭೂತಾ ಯೇ ಭೂತಾ ಭೂಮಿ ಸಂಸ್ಥಿತಾಃ ।
ಸರ್ವೇಷಾಮವಿರೋಧೇನ ಪೂಜಾಕರ್ಮ ಸಮಾರಭೇತ್ ॥

ಪೃಥ್ವೀತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ
ತ್ವಂಚಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಂ ।

ಶ್ರೀ ಅನಂತಾಸನಾಯ ನಮಃ । ಶ್ರೀ ಕೂರ್ಮಾಸನಾಯ ನಮಃ ।
ಓಂ ಲಂ ಪೃಥಿವ್ಯೈ ನಮಃ । ಓಂ ಭೂರ್ಭುವಸ್ವರೋಮ್ ॥ ಇದಮಾಸನಂ ॥

(ಹೀಗೆ ಪ್ರಾರ್ಥಿಸಿ ಆಚಮನ ಮಾಡಬೇಕು)

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ। ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ। ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ। ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ। ಉಪೇಂದ್ರಾಯ ನಮಃ । ಹರಯೇ ನಮಃ । ಶ್ರೀಕೃಷ್ಣಾಯ ನಮಃ ।

ವಕ್ರತುಂಡ ಮಹಾಕಾಯ ಕೋಟಿ ಸೂರ್ಯ ಸಮಪ್ರಭ । ಅವಿಘ್ನಂ ಕುರುಮೇ ದೇವ ಸರ್ವಕಾರ್ಯೇಷು ಸರ್ವದಾ ॥

ಶ್ರೀಮಹಾಗಣಪತಯೇ ನಮಃ। ಇಷ್ಟದೇವತಾಭ್ಯೋ ನಮಃ। ಕುಲದೇವತಾಭ್ಯೋ ನಮಃ। ಸರ್ವೇಭ್ಯೋ ದೇವೇಭ್ಯೋ ನಮಃ। ಸರ್ವೇಭ್ಯೋ ಬ್ರಾಹ್ಮಣೇಭ್ಯೋ ನಮಃ। ಏತತ್ಕರ್ಮಪ್ರಧಾನ ದೇವತಾಭ್ಯೋ ನಮಃ ನಿರ್ವಿಘ್ನಮಸ್ತು॥

ಸಂಕಲ್ಪ॥ ಶುಭೇ ಶೋಭನೇ ಮುಹೂರ್ತೇ, ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ರೀಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಕಲಿಯುಗೇ ಭರತವರ್ಷೇ ಭರತಖಂಡೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇ ತೀರೇ ಶಾಲೀವಾಹನ ಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ ವರ್ತಮಾನೇ ಚಾಂದ್ರಮಾನೇನ ಪ್ರಭವಾದಿ ಷಷ್ಠಿ ಸಂವತ್ಸರಾಣಾಂ ಮಧ್ಯೇ... ಸಂವತ್ಸರೇ ದಕ್ಷಿಣಾಯನೇ ವರ್ಷಋತೌ ಭಾದ್ರಪದ ಮಾಸೇ ಶುಕ್ಲಪಕ್ಷೇ ಅಷ್ಟಮ್ಯಾಂ...ವಾಸರೇ ಏವಂ ಗುಣ ವಿಶೇಷಣ ವಿಶಿಷ್ಠಾಯೂಂ ಶುಭತಿಥೌ ಮಮ ಇಹ ಜನ್ಮನಿ ಜನ್ಮಾಂತರೇಚ ಅಖಂಡಿತ ಸೌಭಾಗ್ಯ–ಪುತ್ರ–ಪೌತ್ರ–ಐಶ್ವರ್ಯಾದಿ ಸಕಲ ಮನೋರಥ ಸಿದ್ಧಯೇ ಜ್ಯೇಷ್ಠಾ ದೇವೀ ಪೂಜಾಂ ಚ ಕರಿಷ್ಯೇ॥

(ಮಂತ್ರಾಕ್ಷತೆ ನೀರು ಬಿಡಬೇಕು.)

ಪೂಜಾಂಗ ಕಲಶಾರಾಧನಂ ಚ ಕರಿಷ್ಯೇ ॥
ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಸ್ಮಿ ಸನ್ನಿಧಿಂ ಕುರು ॥
ಕಲಶದೇವತಾಭ್ಯೋ ನಮಃ ಗಂಧ ಪುಷ್ಪಾಕ್ಷತಾ ಸಮರ್ಪಯಾಮಿ ।
ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಪಿವಾ ।
ಯಃ ಸ್ಮರೇತ್ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರ ಶ್ಶುಚಿಃ ॥

(ಕುಲಶೋಕದವನ್ನು ತನ್ನ ಮೇಲೆ ಹಾಗೂ ಪೂಜಾದ್ರವ್ಯಗಳ ಮೇಲೆ ಪ್ರೋಕ್ಷಿಸಿ ಕೊಳ್ಳಬೇಕು.)

ಧ್ಯಾನಂ ॥ ದೇವಾನಾಂ ದೇವತಾನಾಂ ಚ ಜ್ಯೇಷ್ಠಾ ದೇವಿತ್ವಮಾಗತಾ ।
ಆದಿಶಕ್ತೇ ನಮಸ್ತೇಽಸ್ತು ನಮಸ್ತೇ ವಿಷ್ಣು ವಲ್ಲಭೇ ॥
॥ ಜ್ಯೇಷ್ಠಾದೇವ್ಯೈ ನಮಃ ಧ್ಯಾನಂ ಸಮರ್ಪಯಾಮಿ॥
ಬ್ರಹ್ಮಪ್ರಿಯೇ ನಮಸ್ತೇಽಸ್ತು ನಮಸ್ತೇ ಭಕ್ತವತ್ಸಲೆ ।
ವಿಷ್ಣುಪ್ರಿಯೇ ನಮಸ್ತೇಽಸ್ತು ಜಗದಾನಂದ ಕಾರಕೇ॥
ಜ್ಯೇಷ್ಠಾದೇವೀಂ ಆವಾಹಯಾಮಿ ॥
ಆಸನೇ ಸ್ವರ್ಣರತ್ನಾಢ್ಯೇ ಸರ್ವಶೋಭಾಸಮನ್ವಿತೇ ।
ಉಪವಿಶ್ಯ ಜಗನ್ಮಾತಃ ಪ್ರಸಾದಾಭಿಮುಖೀ ಭವ ॥
॥ ಆಸನಂ ಸಮರ್ಪಯಾಮಿ ॥
ಇದಂ ಗಂಗಾಜಲಂ ಸಮ್ಯಕ್ ಸುವರ್ಣ ಕಲಶೇ ಸ್ಥಿತಂ ।
ಪಾದ್ಯಾರ್ಘ್ಯಂ ತೇ ಪ್ರಯಚ್ಛಾಮಿ ಸ್ವೀಕುರುಷ್ವ ಹರಿಪ್ರಿಯೇ ॥
॥ ಪಾದ್ಯಂ ಸಮರ್ಪಯಾಮಿ॥

ಗಂಧ ಪುಷ್ಪಾಕ್ಷತೈ : ರಕ್ತಪುಷ್ಪೈ : ತೋಯಸಮನ್ವಿತಂ ।
ಸುವರ್ಣ ಪಾತ್ರ ಪಾತ್ರಸ್ಥಂ ಗೃಹಾಣಾರ್ಘ್ಯಂ ನಮೋಽಸ್ತುತೇ ॥

॥ ಅರ್ಘ್ಯಂ ಸಮರ್ಪಯಾಮಿ॥

(ಉದ್ಧರಣೆಯಲ್ಲಿ ನೀರನ್ನು ತೋರಿಸಿ ತಟ್ಟೆಗೆ ಹಾಕಿ)

ಕರ್ಪೂರೇಲಾ ಮೃಗಮದ್ಯೆ : ಸುವಾಸ್ಯೆರುಪ ಶೋಭಿತಂ ।
ಗೃಹಾಣಾಚಮನೀಯಂ ಚ ಶಿಶಿರಂ ವಿಮಲಂ ಜಲಂ ।

॥ಆಚಮನಂ ಸಮರ್ಪಯಾಮಿ॥ (ನೀರು ತಟ್ಟೆಯಲ್ಲಿ ಹಾಕಿ)

ನದೀನದ ಸಮುದ್ಭೂತಂ ಪವಿತ್ರಂ ನಿರ್ಮಲಂ ಜಲಂ ।
ಸ್ನಾನಾರ್ಥಂ ತೇ ಪ್ರಯಚ್ಛಾಮಿ ಪ್ರಸೀದ ಜಗದಂಬಿಕೇ ॥

॥ ಸ್ನಾನಂ ಸಮರ್ಪಯಾಮಿ॥

(ಹೂವಿನಿಂದ ಶುದ್ಧವಾದ ನೀರನ್ನು ದೇವರ ಮೇಲೆ ಪ್ರೋಕ್ಷಿಸಿ)

ಪಂಚಾಮೃತೇನ ಸ್ನಪನಂ ಕರಿಷ್ಯೇ ಭಕ್ತವತ್ಸಲೇ ।
ಪಯೋಧದಿ ಘೃತೈಶ್ಚೈವ ಶರ್ಕರಾ ಮಧು ಸಂಯುತಂ ॥

॥ ಪಂಚಾಮೃತ ಸ್ನಾನಂ ಸಮರ್ಪಯಾಮಿ॥

(ಹೂವಿನಿಂದ ಪಂಚಾಮೃತವನ್ನು ಪ್ರೋಕ್ಷಿಸಿ)

ಮಂದಾಕಿನ್ಯಾ: ಸಮಾನೀತಂ ಹೇಮಾಂಭೋರುಹ ವಾಸಿತಂ।
ಸ್ನಾನಾರ್ಥಂ ತೇ ಮಯಾದತ್ತಂ ಗೃಹಾಣ ಜಗದಂಬಿಕೇ॥

॥ ಶುದ್ಧೋದಕ ಸ್ನಾನಂ ಸಮರ್ಪಯಾಮಿ ॥

ಕೌಶೇಯವಸನಂ ದಿವ್ಯಂ ಕಂಚೂಕ್ಯಾಚ ಸಮನ್ವಿತಂ ।
ಉಪವಸ್ತ್ರೇಣ ಸಂವೀತಂ ಗೃಹಾಣ ಪರಮೇಶ್ವರೀ ॥

॥ವಸ್ತ್ರಂ ಸಮರ್ಪಯಾಮಿ॥

(ಗೆಜ್ಜೆ ವಸ್ತ್ರ ಅಥವಾ ಕುಬುಸದ ಕಣವನ್ನು ಅರ್ಪಿಸಿ)

ಇದಂ ಗಂಧಂ ಮಹಾದಿವ್ಯಂ ಕುಂಕುಮೇನ ಸಮನ್ವಿತಂ ।
ಲೇಪನಾರ್ಥಂ ಮಯಾದತ್ತಂ ಗೃಹಾಣ ವರದಾಭವ ॥

॥ಗಂಧಂ ಸಮರ್ಪಯಾಮಿ॥

ಕಜ್ಜಲಂ ಚೈವ ಸಿಂಧೂರಂ ಹರಿದ್ರಾ ಕುಂಕುಮಾನಿ ಚ ॥
ಭಕ್ತ್ಯಾ ಮಯಾರ್ಪಿತಾ ನಿತ್ಯಂ ಜ್ಯೇಷ್ಠಾಗೌರಿ ಗೃಹಾಣಭೋ ॥

॥ ನಾನಾವಿಧ ಪರಿಮಳ ದ್ರವ್ಯಾಣಿ ಸಮರ್ಪಯಾಮಿ ॥

(ಅರಿಶಿನ, ಕುಂಕುಮ, ಹೂಗಳನ್ನು ಅರ್ಪಿಸಿ)

ನಾನಾ ವಿಧಾನಿ ಮಾಲ್ಯಾನಿ ಸುಗಂಧೀನಿ ಹರಿಪ್ರಿಯೆ ।
ಗೃಹಾಣ ಜ್ಯೇಷ್ಠಾಗೌರಿ ತ್ವಂ ಪ್ರಸಾದಾಭಿ ಮುಖೀಭವ ॥

॥ ಪುಷ್ಪಾಣಿ ಸಮರ್ಪಯಾಮಿ ॥

(ಬಿಡಿ ಹೂ, ಮಂತ್ರಾಕ್ಷತೆ ಅರ್ಪಿಸಿ)

ವನಸ್ಪತಿ ರಸೋದ್ಭೂತಂ ನಾನಾಗಂಧ ಸಮನ್ವಿತಂ ।
ದಶಾಂಗ ಸಹಿತಂ ದಿವ್ಯಂ ಧೂಪಂ ದೇವಿ ಗೃಹಾಣಭೋ ॥

॥ ಧೂಪಮಾಘ್ರಾಪಯಾಮಿ ॥

(ಗಂಧದ ಕಡ್ಡಿಯನ್ನು ಹಚ್ಚಿ ಆರತಿಮಾಡಿ)

ದೀಪಂ ತಮೋಹರಂ ಜ್ಯೋತ್ಸ್ನಾ ಜ್ಞಾನ ಸಂಬೋಧಕಂ ಶುಭಂ ।
ದೀಪಂ ಗೃಹಾಣ ಮಾತಸ್ತ್ವಂ ಅಪರಾಧ ಶತಾವಹಮ್ ॥

॥ ದೀಪಂ ದರ್ಶಯಾಮಿ ॥

(ಕರ್ಪೂರಾರತಿ, ಕದಲಾರತಿ ಎತ್ತಬೇಕು)

ನಾನಾ ವಿಧಾನಿ ಭಕ್ಷ್ಯಾನಿ ವ್ಯಂಜನಾನಿ ಹರಿಪ್ರಿಯೆ ।
ಗೃಹಾಣ ದೇವಿ ನೈವೇದ್ಯಂ ಸುಖದಂ ಸರ್ವದೇಹಿನಾಂ ॥

॥ ನೈವೇದ್ಯಂ ಸಮರ್ಪಯಾಮಿ॥

ಓಂ ಭೂರ್ಭುವಸ್ಸುವಃ ಓಂ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧೀಯೊ ಯೋನಃ ಪ್ರಚೋದಯಾತ್ । ಸತ್ಯಂತ್ವರ್ತೇನ ಪರಿಷಿಂಚಾಮಿ॥

(ಮಹಾ ನೈವೇದ್ಯವನ್ನು ಮಾಡಿ)

ಗಂಗೋದಕಂ ಸಮಾನೀತಂ ಪಾನೀಯಂ ಜಡಮುತ್ತಮಂ ॥
ಗೃಹಾಣ ಪ್ರಾಶನಂ ದೇವಿ ವರದಾಭವ ಚಂಡಿಕೇ॥

ಪಾನೀಯಂ ಸಮರ್ಪಯಾಮಿ । ಉತ್ತರಾಪೋಶನಂ ಸಮರ್ಪಯಾಮಿ । ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಆಚಮನೀಯಂ ಸಮರ್ಪಯಾಮಿ । ಕರೋದ್ವರ್ತನಂ ಸಮರ್ಪಯಾಮಿ ॥

ರಂಭಾಫಲಂ ದಾಡಿಮಂ ಚ ಖರ್ಜೂರಂ ಮಾತುಲಿಂಗಕಂ ।
ಗೃಹ್ಯತಾಂ ನಾರಿಕೇಳಾದಿ ಫಲಾದಿ ಜಗದಂಬಿಕೇ ॥

॥ ನಾನಾವಿಧ ಫಲಾನಿ ಸಮರ್ಪಯಾಮಿ॥

ಪೂಗೀಫಲ ಸಮಾಯುಕ್ತಂ ನಾಗವಲ್ಲೀ ದಲೈರ್ಯುತಂ ।
ಕರ್ಪೂರ ಚೂರ್ಣ ಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ॥

॥ ತಾಂಬೂಲಂ ಸಮರ್ಪಯಾಮಿ॥(ಅಡಿಕೆ, ಎಲೆಯ ಮೇಲೆ ಪ್ರೋಕ್ಷಿಸಿ)

ಹಿರಣ್ಯಗರ್ಭ ಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।
ಅನಂತ ಪುಣ್ಯಫಲದಂ ಅತಶ್ಶಾಂತಿಂ ಪ್ರಯಚ್ಛ ಮೇ॥
॥ ಸುವರ್ಣಪುಷ್ಪ ದಕ್ಷಿಣಾಃ ಸಮರ್ಪಯಾಮಿ॥
ಚಂದ್ರಾದಿತ್ಯೌ ಚ ಧರಣೀ ವಿದ್ಯುದಗ್ನಿಸ್ತಥೈವ ಚ ।
ತ್ವಮೇವ ಸರ್ವಜ್ಯೋತೀಂಷಿ ಆರ್ತಿಕ್ಯಂ ಪ್ರತಿಗೃಹ್ಯತಾಮ್॥

॥ ಮಹಾನೀರಾಜನಂ ಸಮರ್ಪಯಾಮಿ॥

(ಹದಿನಾರು ಗಂಟು ಹಾಕಿದ ದಾರವನ್ನು ತೆಗೆದುಕೊಂಡು ದೇವಿಯ ಮುಂದೆ ಇಟ್ಟು ಪೂಜಿಸಿದ ನಂತರ ಕೊರಳಲ್ಲಿ ಧರಿಸಬೇಕು)

(ಪುನಃ ಪೂಜೆಯನ್ನು ಮಾಡಿ)

ದೀಪ ಧೂಪ–ನೈವೇದ್ಯ–ಪತ್ರಪುಷ್ಪಾದಿ ಸಮಸ್ತ ರಾಜೋಪಚಾರ ಪೂಜಾಃ ಸಮರ್ಪಯಾಮಿ॥ ಮಂತ್ರಪುಷ್ಪಾಂಜಲಿಂ ಸಮರ್ಪಯಾಮಿ॥

ಪ್ರಾರ್ಥನಾಂ ಸಮರ್ಪಯಾಮಿ॥ ಪ್ರದಕ್ಷಿಣ ನಮಸ್ಕಾರಾನ್ ಸಮರ್ಪಯಾಮಿ॥

(ಪ್ರದಕ್ಷಿಣೆ ನಮಸ್ಕಾರ ಹಾಕಿರಿ)

ಮಂತ್ರಪುಷ್ಪಾಂಜಲಿಃ : ಜಾತವೇದಸೇ ಸುನವಾಮ ಸೋಮಮರಾತೀಯತೋ ನಿದಹಾತಿ ವೇದಃ । ಸನಃ ಪರ್ಷದತಿ ದುರ್ಗಾಣಿ ವಿಶ್ವ ನಾವೇವ ಸಿಂಧುಂ ದುರಿತ್ಯಾತ್ಯಗ್ನಿಃ॥

ಯಸ್ಯಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ
ಯತ್ಕೃತಂ ತು ಮಯಾ ದೇವಿ ಪರಿಪೂರ್ಣಂ ತದಸ್ತು ಮೇ॥

**(ಕೈಯಲ್ಲಿ ಉದ್ಧರಣೆಯಿಂದ ನೀರು ಹಾಕಿಕೊಂಡು)**

ಅನೇನ ಜ್ಯೇಷ್ಠಾಗೌರೀ ಪೂಜನೇನ ಭಗವತೀ ಜ್ಯೇಷ್ಠಾಗೌರೀ ದೇವೀ ಪ್ರೀತಾ ವರದಾ ಸುಪ್ರಸನ್ನಾ ಭವತು॥ ತತ್ಸತ್ ಬ್ರಹ್ಮಾರ್ಪಣಮಸ್ತು॥

(ಎಂದು ಹೇಳುತ್ತಾ ಮಂತ್ರಾಕ್ಷತೆ ಸಹಿತ ನೀರನ್ನು ಅರ್ಘ್ಯ ಪಾತ್ರೆಯಲ್ಲಿ ಹಾಕಿ) ಮಧ್ಯೇ ಮಧ್ಯೇ ಸ್ವರವರ್ಣಲೋಪದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯ ಮಂತ್ರ ಜಪಂ ಕರಿಷ್ಯೇ॥

ಅಚ್ಯುತಾಯ ನಮಃ । ಅನಂತಾಯ ನಮಃ ।
ಅಚ್ಯುತಾಯ ನಮಃ । ಅನಂತಾಯ ನಮಃ ।
ಅಚ್ಯುತಾನಂತ ಗೋವಿಂದೇಭ್ಯೋ ನಮಃ ।

॥ ಭಗವದರ್ಪಣಮಸ್ತು॥

ಪೂಜಾವಿಧಾನ ಮುಗಿಯಿತು

# ಜ್ಯೇಷ್ಠಾದೇವೀ ವ್ರತಕಥೆ

**ಶ್ರೀಗಣೇಶಾಯ ನಮಃ ॥**

ಸೂತಪುರಾಣಿಕರು ಶೌನಕಾದಿ ಮಹಾಮುನಿಗಳಿಗೆ ಭಗವಾನ್ ಶಂಕರನು ಪಾರ್ವತೀದೇವಿಗೆ ಉಪದೇಶಿಸಿದ ಮಹಾನ್ ಸೌಭಾಗ್ಯದಾಯಕವಾದ ವ್ರತದ ಬಗ್ಗೆ ವಿವರವಾಗಿ ತಿಳಿಸಿದರು.

ಕೈಲಾಸ ಪರ್ವತದ ಶಿಖರ ತುಂಬಾ ಮನೋಹರ. ಪ್ರಸನ್ನ ವದನನಾಗಿ ಅಲ್ಲಿ ಕುಳಿತ ಶಿವನನ್ನು ಕುರಿತು ಪಾರ್ವತಿ ಪ್ರಶ್ನೆ ಮಾಡಿದಳು : 'ಸ್ವಾಮಿ, ಸ್ತ್ರೀಯರಿಗೆ ಸಕಲ ಸೌಭಾಗ್ಯ, ಧನಧಾನ್ಯ ಐಶ್ವರ್ಯಾದಿಗಳನ್ನು ಕೂಡಲೇ ದಯಾಪಾಲಿಸುವ ವ್ರತವೊಂದನ್ನು ಕೃಪೆಮಾಡಿ ತಿಳಿಸಿರೆಂದು ನನ್ನ ಪ್ರಾರ್ಥನೆ'.

ಶಿವನು ಮುಗುಳ್ನಕ್ಕು, ಜ್ಯೇಷ್ಠಾದೇವೀ ವ್ರತವೆಂಬುದಿದೆ. ಅದನ್ನು ಭಕ್ತಿ ಶ್ರದ್ಧೆಗಳಿಂದ ಆಚರಿಸಿದವರಿಗೆ ಕಷ್ಟ ಪರಿಹಾರವಾಗುತ್ತದೆ, ಸೌಭಾಗ್ಯ ದೊರೆತು ಸುಖಿಗಳಾಗುತ್ತಾರೆ ಎಂದಾಗ ಪಾರ್ವತಿಯು ಈ ವ್ರತಾಚರಣೆಯ ವಿಧಾನವನ್ನು ಹೇಳಬೇಕೆಂದು ಪ್ರಾರ್ಥಿಸಿದಳು. ಇದನ್ನು ಕೇಳಿದ ಶಿವನು ಆಕೆಯನ್ನು ಭೂಲೋಕದಲ್ಲಿನ ಗಂಗಾತೀರದ ಋಷ್ಯಾಶ್ರಮವೊಂದಕ್ಕೆ ಹೋಗಿ ಅಲ್ಲಿ ವ್ರತ ವಿಧಿಯನ್ನು ತಿಳಿದು ಬರುವಂತೆ ಹೇಳಿದನು. ಪತಿಯಾಜ್ಞೆಯಂತೆ ಪಾರ್ವತೀದೇವಿಯು ಮುನಿಗಳ ಸನ್ನಿಧಾನಕ್ಕೆ ಬಂದು ಸೇರಿದಳು.

ಋಷಿಗಳನ್ನು ಈ ವ್ರತಾಚರಣೆಯ ಬಗ್ಗೆ ಕೇಳಿದಾಗ ಅವರು ಅತ್ಯಂತ ಸಂತೋಷದಿಂದ ಆಕೆಗೆ ಇದರ ವಿವರಗಳನ್ನು ತಿಳಿಸಿದರು. ವರ್ಷಾಕಾಲದಲ್ಲಿ ಭಾದ್ರಪದ ಶುಕ್ಲ ಅಷ್ಟಮೀ ದಿವಸ ಜ್ಯೇಷ್ಠಾ ನಕ್ಷತ್ರದಲ್ಲಿ ಈ ವ್ರತವನ್ನು ಮಾಡಬೇಕು. ಅಷ್ಟಮಿಯ ದಿನ ಜ್ಯೇಷ್ಠಾ ನಕ್ಷತ್ರ ಇಲ್ಲದಿದ್ದರೆ ಮಾರನೆಯ ದಿನ ಅನೂರಾಧಾ ನಕ್ಷತ್ರದಲ್ಲಿ ಇದನ್ನು ಆಚರಿಸಬಹುದು. ಜ್ಯೇಷ್ಠಾದೇವಿಯ ಆವಾಹನೆ ಅನೂರಾಧಾ ನಕ್ಷತ್ರದಲ್ಲಿ, ವಿಸರ್ಜನೆ ಮೂಲಾ ನಕ್ಷತ್ರದಲ್ಲಿ ಆಗಬೇಕು.

ಇದರ ವಿಧಾನವೆಂದರೆ ಉತ್ತಮಲೊಹ ಅಥವಾ ಮಣ್ಣಿನ ಪಾತ್ರೆಯ ಮೇಲೆ ಜ್ಯೇಷ್ಠಾಗೌರಿಯ ಸುಂದರವಾದ ಚಿತ್ರವನ್ನು ಶಂಖಚಕ್ರದೊಂದಿಗೆ ಚಿತ್ರಿಸಬೇಕು. ಈ ಗಡಿಗೆಯನ್ನು ಧಾನ್ಯ ಹರಡಿದ ಪೀಠದ ಮೇಲೆ ಇರಿಸಿ ಮಂಟಪನಿರ್ಮಾಣಮಾಡಿ ಅಲಂಕರಿಸಬೇಕು. ದೇವಿಯನ್ನು ಈ ಕಲಶದಲ್ಲಿ ಆವಾಹಿಸಿ, ಹೊಸ ದಾರವನ್ನು ಅದರಲ್ಲಿ ಹಾಕಬೇಕು. ಈ ದೋರಕವು ನಲ್ವತ್ತೆಂಟು ಅಂಗುಲ ಉದ್ದ ಹಾಗೂ ಹದಿನಾರು ಎಳೆಗಳಿರಬೇಕು.

ಸ್ತ್ರೀಯರು ಮಂಗಳಸ್ನಾತರಾಗಿ, ಮಂಗಳದ್ರವ್ಯಗಳಿಂದ ಈ ಮಹಾಲಕ್ಷ್ಮಿಯಾದ ಜ್ಯೇಷ್ಠಾದೇವಿಯನ್ನು ಪೂಜಿಸಬೇಕು. ಹದಿನಾರು ಗರಿಕೆಯ ದಳಗಳನ್ನು ಆಕೆಗೆ ಅರ್ಪಿಸಬೇಕು. ಅಪೂಪ ಮೊದಲಾದ ಭಕ್ಷ್ಯಗಳನ್ನು ನಿವೇದಿಸಿ, ದಾನ ಮಾಡಿ, ನಂತರ ಭಕ್ಷ್ಯಗಳನ್ನು ತಾನು ಸ್ವೀಕರಿಸಬೇಕು. ಮಾರನೆಯ ದಿನ ಮತ್ತೆ ಮಹಾಲಕ್ಷ್ಮಿಯನ್ನು ಷೋಡಶೋಪಚಾರ ಪೂಜೆಗಳಿಂದ ಅರ್ಚಿಸಿ, ದಾರವನ್ನು

ಕೊರಳಲ್ಲಿ ಧರಿಸಬೇಕು. ಜ್ಯೇಷ್ಠಾದೇವಿಯ ಕಥೆಯನ್ನು ಆಲಿಸುತ್ತಾ ದಾರವನ್ನು ಕಟ್ಟಿಕೊಳ್ಳಬೇಕು. ಆ ಕಥೆಯು ಹೀಗಿದೆ.

ಹಿಂದೆ ಜಯವರ್ಧನ ಎಂಬ ನಗರದಲ್ಲಿ ಸುಭದ್ರನೆಂಬ ವಿದ್ಯಾವಿನಯ ಸಂಪನ್ನನಾದ ಬ್ರಾಹ್ಮಣನಿದ್ದನು. ಈತನ ಪತ್ನಿ ಸುವ್ರತೆ ಎಂಬಾಕೆ ಹೆಸರಿಗೆ ತಕ್ಕಂತೆ ಪತಿವ್ರತೆಯಾಗಿ ಪತಿಯೊಡನೆ ಬಾಳುತ್ತಿದ್ದಳು. ಅವರು ಬಡತನ ಅನುಭವಿಸುತ್ತಿದ್ದರು. ಒಂದು ದಿನ ಏಕಾಂತದಲ್ಲಿರುವಾಗ ಆಕೆ ತನ್ನ ಪತಿಯೊಡನೆ ಈ ದಾರಿದ್ರ್ಯ ಸಹಿಸುವುದು ಕಷ್ಟ, ನಾವು ಬೇರೆ ಎಲ್ಲಾದರೂ ಹೋಗಿ ಬಾಳೋಣ ಎಂದು ನುಡಿದಳು. ಸತಿಪತಿಯರು ಬೇರೊಂದು ವನಕ್ಕೆ ಹೋಗಿ ಆಶ್ರಮ ನಿರ್ಮಿಸಿ ವಾಸಿಸುತ್ತಿದ್ದರು.

ಒಮ್ಮೆ ಘೋರಾರಣ್ಯದಲ್ಲಿ ಅವರು ನಡೆಯುತ್ತಿದ್ದಾಗ ದೂರದಲ್ಲಿ ಜನ ಸಮೂಹವನ್ನು ಕಂಡ ಅವರು ಅಲ್ಲಿಗೆ ತಲುಪಿದರು. ಪತಿಯು ಸ್ನಾನಕ್ಕೆ ಹೊರಟನು. ಆ ಸಮಯದಲ್ಲಿ ಸುವ್ರತೆಯು ಅಲ್ಲಿದ್ದ ಸುವಾಸಿನಿಯರು ದೇವಿಯನ್ನು ಪೂಜಿಸುತ್ತಿರುವುದನ್ನು ಕಂಡಳು. ಆಕೆಯು ದೇವಿಗೆ ನಮಸ್ಕರಿಸಿ, ಈ ಪತಿವ್ರತೆಯರನ್ನು 'ಇದೇನು ವ್ರತಮಾಡುತ್ತಿದ್ದೀರಿ' ಎಂದು ಕೇಳಿದಳು. ಅವರು ಇದು ಜ್ಯೇಷ್ಠಾದೇವಿಯ ವ್ರತ, ತುಂಬಾ ಮಂಗಳಪ್ರದವಾದುದು ಎಂದರು. ಇದರಿಂದ ಸಕಲ ಸೌಭಾಗ್ಯ, ಅಷ್ಟೈಶ್ವರ್ಯ ಪ್ರಾಪ್ತಿಯಾಗುವುದು ಎಂದರು.

'ನಾನು ಬಡ ಹೆಂಗಸು. ಗಂಡನೊಡನೆ ಅರಣ್ಯಕ್ಕೆ ಬಂದಿದ್ದೇನೆ. ಈ ವ್ರತ ವಿಧಾನ ನನಗೆ ತಿಳಿಯದು' ಎಂದು ಆಕೆ ಆ ವ್ರತವನ್ನು ಮಾಡಿಸುತ್ತಿದ್ದ ವಸಿಷ್ಠಮುನಿಯನ್ನು ಕೇಳಿದಳು. ಆ ಮುನಿಗಳು ಆಕೆಗೆ ವ್ರತವಿಧಾನವನ್ನು ತಿಳಿಸಿದರು. ಭಾದ್ರಪದ ಶುದ್ಧ ಅಷ್ಟಮೀ ಜ್ಯೇಷ್ಠಾ ನಕ್ಷತ್ರದಲ್ಲಿ ಆಕೆಯು ತನ್ನ ಶಕ್ತ್ಯಾನುಸಾರ ಈ ವ್ರತವನ್ನು ಭಕ್ತಿಶ್ರದ್ಧೆಗಳಿಂದ ಆಚರಿಸಿದಳು.

ವ್ರತಾಚರಣೆಯನ್ನು ಮುಗಿಸಿ ಆಶ್ರಮವನ್ನು ತಲುಪಿದಾಗ ಅಲ್ಲಿ ಆಕೆಗೊಂದು ಆಶ್ಚರ್ಯಕಾದಿತ್ತು. ಆಶ್ರಮದ ಜಾಗದಲ್ಲಿ ಈಗ ಧನ, ಧಾನ್ಯಗಳಿಂದ ತುಂಬಿದ ಅರಮನೆಯಂತಹ ಮನೆಯಿತ್ತು. ಇದನ್ನೆಲ್ಲ ಕಂಡ ಸುಭದ್ರ ಬ್ರಾಹ್ಮಣನಿಗೆ ಅತ್ಯಾಶ್ಚರ್ಯವಾಯಿತು. ಪತ್ನಿಯಿಂದ ನಡೆದದ್ದೆಲ್ಲವನ್ನು ತಿಳಿದ ಆತನು ಆ ದಿನವೇ ಭೂರಿಭೋಜನವನ್ನು ಏರ್ಪಡಿಸಿದನು.

ಯಾವ ವ್ರತದಿಂದ ನಮಗೆ ಇಂತಹ ಭಾಗ್ಯಬಂದಿತು ಎನ್ನಲು, ವಸಿಷ್ಠ ಮಹರ್ಷಿಗಳ ಉಪದೇಶದಂತೆ ತಾನು ಆಚರಿಸಿದ ಜ್ಯೇಷ್ಠಾದೇವೀ ವ್ರತ ಮಹಿಮೆಯಿದು ಎಂದು ಆಕೆ ತಿಳಿಸಿದಳು . ಈ ವ್ರತದ ಮಹಿಮೆಯಿಂದ ಆ ದಂಪತಿಗಳಿಗೆ ಪುತ್ರ ಸಂತಾನವಾಯಿತು. ಸಂಪತ್ಸೌಭಾಗ್ಯಗಳು ಹೆಚ್ಚಿದುವು. ಈ ಶುಭವ್ರತವನ್ನು ಮುನಿಗಳು ಪಾರ್ವತೀದೇವಿಗೆ ತಿಳಿಸಿದರು.

ಈ ವ್ರತದ ಪುಣ್ಯಕಥೆಯನ್ನು ಶ್ರವಣ ಮಾಡಿದವರಿಗೆ ಸುಖಸೌಭಾಗ್ಯಗಳು ಜ್ಯೇಷ್ಠಾದೇವಿಯ ಕೃಪೆಯಿಂದ ದೊರೆತು ಪಾಪಮುಕ್ತರಾಗಿ ಉತ್ತಮಗತಿ ಹೊಂದುವರು ಎಂಬುದು ಶ್ರೀ ಭವಿಷ್ಯೋತ್ತರ ಪುರಾಣದ ಜ್ಯೇಷ್ಠಾದೇವೀ ವ್ರತಕಥೆಯ ಸಾರಾಂಶವಾಗಿದೆ ॥ ಭದ್ರಂ ಶುಭಂ ಮಂಗಳಂ॥

# ಹನುಮಜ್ಜಯಂತೀ ವ್ರತ

(ಶ್ರೀರಾಮಭಕ್ತ ಹನುಮಂತ ಜನಿಸಿದ್ದು ಮಾರ್ಗಶಿರ ಶುದ್ಧ ತ್ರಯೋದಶೀ ಮೂಲಾ ನಕ್ಷತ್ರದಲ್ಲಿ. ಈ ದಿನವನ್ನು ಹನುಮದ್ವ್ರತವನ್ನಾಗಿ ಆಚರಿಸುತ್ತಾರೆ. ತ್ರಯೋದಶಿಯ ದಿನ ಉಪವಾಸ ಮಾಡಿ, ವ್ರತವನ್ನಾಚರಿಸಿ, ಮಾರನೆಯ ದಿನ ಪಾರಣೆಯನ್ನು ಮಾಡಬೇಕು. ಮಂಗಳಸ್ನಾನ, ಪ್ರಾತರಾಹ್ನಿಕಗಳನ್ನು ಮುಗಿಸಿಕೊಂಡು ಪೂಜೆಗೆ ಸಿದ್ಧಪಡಿಸಿಕೊಳ್ಳಬೇಕು. ಪೂಜಾದ್ರವ್ಯಗಳ ಜೊತೆಗೆ ಬಾಳೆಹಣ್ಣು ಜೇನು ತುಪ್ಪ, ಪಾರಿಜಾತ, ಕೇದಿಗೆ ಹೂಗಳನ್ನು ವಿಶೇಷವಾಗಿ ಸಂಗ್ರಹಿಸಿಡಬೇಕು. ವೀರಾಂಜನೇಯ ಪ್ರತಿಮೆಯನ್ನಾಗಲೀ ಇತರ ಭಂಗಿಯ ಆಂಜನೇಯ ಪ್ರತಿಮೆಯನ್ನಾಗಲೀ ಪೂಜಿಸಬಹುದು.)

## ಪೂಜಾವಿಧಾನ

ಶ್ರೀರಾಮಚಂದಾಯ ನಮಃ । ಶ್ರೀರಾಮದೂತಾಯ ನಮಃ ।
(ಘಂಟಾನಾದ ಮಾಡಿ) ಆಗಮಾರ್ಥಂತು ದೇವಾನಾಂ ಗಮನಾರ್ಥಂ ತು ರಕ್ಷಸಾಂ।
ಕುರು ಘಂಟಾರವಂ ತತ್ರ ದೇವತಾಹ್ವಾನ ಲಾಛನಂ ॥

## ಪ್ರಾರ್ಥನೆ

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ ಸರ್ವ ವಿಘ್ನೋಪಶಾಂತಯೇ ॥
ಸುಮುಖಶ್ಚೈಕದಂತಶ್ಚ ಕಪಿಲೋ ಗಜಕರ್ಣಕಃ ।
ಲಂಬೋದರಶ್ಚ ವಿಕಟೋ ವಿಘ್ನರಾಜೋ ಗಣಾಧಿಪಃ ।
ಧೂಮ್ರಕೇತುರ್ಗಣಾಧ್ಯಕ್ಷೋ ಫಾಲಚಂದ್ರೋ ಗಜಾನನಃ ॥
ದ್ವಾದಶೈತಾನಿ ನಾಮಾನಿ ಯಃ ಪಠೇತ್ ಶೃಣುಯಾದಪು ।
ವಿದ್ಯಾರಂಭೇ ವಿವಾಹೇ ಚ ವಿಘ್ನಸ್ತಸ್ಯ ನ ಜಾಯತೇ ॥
ಅಭೀಪ್ಸಿತಾರ್ಥ ಸಿದ್ಧ್ಯರ್ಥಂ ಪೂಜಿತೋಯಸ್ಸುರೈರಪಿ ॥
ಸರ್ವ ವಿಘ್ನಚ್ಛಿದೇ ತಸ್ಮೈ ಗಣಾಧಿಪತಯೇ ನಮಃ ॥

**ಸಂಕಲ್ಪ :-**

ಆಚಮ್ಯ ॥ ಶುಭೇ ಶೋಭನೇ ಮುಹೂರ್ತೇ ಆದ್ಯಬ್ರಹ್ಮಣಃ ದ್ವಿತೀಯ ಪರಾರ್ಧೇ ಶ್ರೀ ಶ್ವೇತವರಾಹಕಲ್ಪೇ ವೈವಸ್ವತ ಮನ್ವಂತರೇ ಭರತವರ್ಷೇ ಭರತಖಂಡೇ ಜಂಬೂದ್ವೀಪೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇ ತೀರೇ ಶಾಲೀವಾಹನ ಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಚಾಂದ್ರಮಾನೇನ ಪ್ರಭವಾದಿಷಷ್ಠಿ ಸಂವತ್ಸರಾಣಾಂ ಮಧ್ಯೇ.. ನಾಮ ಸಂವತ್ಸರೇ ದಕ್ಷಿಣಾಯನೇ ಶಿಶಿರ ಋತೌ ಮಾರ್ಗಶಿರಮಾಸೇ

ಶುಕ್ಲಪಕ್ಷೇ ತ್ರಯೋದಶ್ಯಾಂ ವಾಸರಸ್ತು...ವಾಸರಯುಕ್ತಾಯಾಂ ಶುಭ ನಕ್ಷತ್ರ ಶುಭಯೋಗ ಶುಭಕರಣ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಅಸ್ಮಾಕಂ ಸಹಕುಟುಂಬಾನಾಂ ಕ್ಷೇಮಸ್ಥೈರ್ಯ ವಿಜಯ ವೀರ್ಯ ಆಯುರಾರೋಗ್ಯಾದಿ ಸಿದ್ಧ್ಯರ್ಥಂ ಧರ್ಮಾರ್ಥಕಾಮ ಮೋಕ್ಷ ಚತುರ್ವಿಧ ಫಲ ಪುರುಷಾರ್ಥ ಸಿದ್ಧ್ಯರ್ಥಂ ಸಮಸ್ತ ಸನ್ಮಂಗಳಾವಾಪ್ತ್ಯರ್ಥಂ ಶತ್ರು ಫಲಾಯನಾರ್ಥಂ ದುರಿತನಿವಾರಣಾರ್ಥಂ ಚ ಶ್ರೀರಾಮಭಕ್ತ ಹನೂಮಂತ ಪ್ರೀತ್ಯರ್ಥಂ ಹನುಮದ್ ವ್ರತಾಖ್ಯಂ ಚ ಕರ್ಮ ಕರಿಷ್ಯೇ॥(ಮಂತ್ರಾಕ್ಷತೆ, ನೀರು ಬಿಡಿ)

ತದಂಗತ್ವೇನ ಕಲಶಪೂಜಾಂ ಚ ಕರಿಷ್ಯೇ॥ (ಕಲಶದ ಮೇಲೆ ಬಲಹಸ್ತವನ್ನಿರಿಸಿ)

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಾಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೆ ಮಾತೃಗಣಾಃ ಸ್ಥಿತಾ ॥

ಕುಕ್ಷೌ ತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಸ್ಸಾಮವೇದೋಹ್ಯಥರ್ವಣಃ ॥

ಅಂಗೈಶ್ಚ ಸಹಿತಾ ನಿತ್ಯಂ ಕಲಶಂತು ಸಮಾಶ್ರಿತಾಃ ॥
ಆಯಾಂತು ದೇವ ಪೂಜಾರ್ಥಂ ದುರಿತಕ್ಷಯ ಕಾರಕಾಃ ॥

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ॥
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥

(ಕಲಶೋದಕೇನ ಪೂಜಾದ್ರವ್ಯಾಣ ಆತ್ಮಾನಂ ಚ ಪ್ರೋಕ್ಷ್ಯ)

(ಕಲಶೋದಕದಿಂದ ಪೂಜಾದ್ರವ್ಯಗಳನ್ನೂ, ತನ್ನನ್ನೂ ಪ್ರೋಕ್ಷಿಸಿಕೊಳ್ಳಬೇಕು) ತದಾದೌ ನಿರ್ವಿಘ್ನತಾ ಪರಿಸಮಾಪ್ತ್ಯರ್ಥಂ ಶ್ರೀಮನ್ಮಹಾಗಣಪತಿ ಪೂಜಾಂಕರಿಷ್ಯೇ ॥

ವಕ್ರತುಂಡ ಮಹಾಕಾಯ ಕೋಟಿ ಸೂರ್ಯ ಸಮಪ್ರಭ ।
ನಿರ್ವಿಘ್ನಂ ಕುರುಮೇ ದೇವ ಸರ್ವಕಾರ್ಯೇಷು ಸರ್ವದಾ ॥

ಓಂ ಗಣಾನಾಂ ತ್ವಾ ಗಣಪತಿಗ್ಂ ಹವಾಮಹೇ ಕವಿಂ

ಕವೀನಾಮುಪಮಶ್ರವಸ್ತಮಂ । ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಶ್ಶೃಣ್ವನ್ನೂತಿಭಿಸ್ಸೀದ ಸಾದನಂ॥ (ಕರ್ಪೂರ ನೀರಾಜನಮಾಡಿ)

ಓಂ ಭೂಃ ಓಂ ಭುವಃ ಓಂ ಸುವಃ ಓಂ ಭೂರ್ಭುವಸ್ಸುವಃ ಮಹಾಗಣಪತಿಂ ಆವಾಹಯಾಮಿ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ । ಆವಾಹಯಾಮಿ ಆಸನಂ ಸಮರ್ಪಯಾಮಿ । ಪಾದಯೋಃ ಪಾದ್ಯಂ ಸಮರ್ಪಯಾಮಿ । ಹಸ್ತಯೋಃ ಅರ್ಘ್ಯಂ ಸಮರ್ಪಯಾಮಿ । ಮುಖೇ ಆಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ । ವಸ್ತ್ರಾರ್ಥೇ ಅಕ್ಷತಾಂ ಸಮರ್ಪಯಾಮಿ । ಉಪವೀತಂ ಸಮರ್ಪಯಾಮಿ । ಗಂಧಾ

ಧಾರಯಾಮಿ। ಅಕ್ಷತಾಂ ಸಮರ್ಪಯಾಮಿ। ಧೂಪಮಾಘ್ರಾಪಯಾಮಿ। ದೀಪಂ ದರ್ಶಯಾಮಿ। ಪುಷ್ಪಾಣಿ ಸಮರ್ಪಯಾಮಿ। ಕದಳೀಫಲ ನೈವೇದ್ಯಂ ಸಮರ್ಪಯಾಮಿ। ಸುವರ್ಣಪುಷ್ಪ ದಕ್ಷಿಣಾಃ ಸಮರ್ಪಯಾಮಿ। ಸರ್ವೋಪಚಾರ ಪೂಜಾಃ ಸಮರ್ಪಯಾಮಿ॥ ಶ್ರೀ ಮಹಾಗಣಪತಿ ಪ್ರಸಾದ ಸಿದ್ಧಿರಸ್ತು॥

## ಪಂಪಾ ಪೂಜಾ

(ಯಮುನಾ ಪೂಜೆಯಂತೆ ಪಂಪಾ ಪೂಜೆಯನ್ನು ವ್ರತದ ಪೂರ್ವದಲ್ಲಿ ಮಾಡಬೇಕು.)

ಸಂಕಲ್ಪ॥ ಪೂರ್ವೋಕ್ತ ಏವಂ ಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಮಮ ಉಪಾತ್ತ ದುರಿತಕ್ಷಯ ದ್ವಾರಾ ಶ್ರೀ ಪರಮೇಶ್ವರ ಪ್ರೀತ್ಯರ್ಥಂ ಮಯಾ ಕರಿಷ್ಯಮಾಣ ಹನುಮದ್ ವ್ರತಾಂಗತ್ವೇನ ಪಂಪಾದೇವೀ ಪೂಜಾಂ ಚ ಕರಿಷ್ಯೇ

(ಮಂತ್ರಾಕ್ಷತೆ, ನೀರು ಬಿಡಿ)

ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಗ್ಂ ಸಚತಾ ಪರುಷ್ಣಿಯಾ। ಅಸಿಕ್ನಿಯಾ ಮರುದ್ವೃಧೇ ವಿತಸ್ತಯಾರ್ಜೀಕೇಯೇ ಶೃಣುಹ್ಯಾ ಸುಷೋಮಯಾ॥ ಕಲಶಮಾಪೂರ್ಯ॥ (ನೀರನ್ನು ಕಲಶದಲ್ಲಿ ಹಾಕಿ)

ಹೇಮಕೂಟ ಗಿರಿಪ್ರಾಂತ ವನೇಷು ಗಿರಿ ಸಾನುಗಾಂ।
ಪಂಪಾಂ ಆವಾಹಯಾಮ್ಯಸ್ಯಾಂ ನದ್ಯಾಂ ಹೃದ್ಯಾಂ ಪ್ರಯತ್ನತಃ ॥

ಕಲಶೇ ಪಂಪಾಂ ಆವಾಹಯಾಮಿ॥ ಓಂ ಭೂಃ ಭುವಃ ಸುವಃ ಭೂರ್ಭುವಸ್ವಃ ಪಂಪಾದೇವೀಮಾವಾಹಯಾಮಿ॥ ಸ್ಥಾಪಯಾಮಿ। ಪೂಜಯಾಮಿ।

(ಹೂ, ಮಂತ್ರಾಕ್ಷತೆಯನ್ನು ಪಂಪಾ ಕಲಶಕ್ಕೆ ಅರ್ಪಿಸಿರಿ)

ಪಂಪಾಯೈ ನಮಃ ರತ್ನಸಿಂಹಾಸನಂ ಸಮರ್ಪಯಾಮಿ ॥
ಪಾದಯೋಃ ಪಾದ್ಯಂ ಸಮರ್ಪಯಾಮಿ ॥
ಹಸ್ತಯೋಃ ಅರ್ಘ್ಯಂ ಅರ್ಘ್ಯಂ ಸಮರ್ಪಯಾಮಿ ॥

ಪಂಪಾನದೀ ಮಹಾಪುಣ್ಯೇ ಸಂಪಾದಿತ ಸುಶೋಭನೇ।
ಗೋದಾವರೀ ಜಲೇನಾದ್ಯ ಗೃಹಾಣಾಚಮನೀಯಕಂ ॥
॥ ಮುಖೇ ಆಚಮನೀಯಂ ಸಮರ್ಪಯಾಮಿ॥

ಪಂಪಾದೇವೀ ನಮಸ್ತುಭ್ಯಂ ಪಂಪಾಹಂತ್ರೀ ಸರಿದ್ವರೇ।
ಪಂಚಾಮೃತೈಃ ಸ್ನಾಪಯಿಷ್ಯೇ ಸ್ವೀಕುರುಷ್ವ ವರಾನನೇ ॥
॥ ಪಂಚಾಮೃತಸ್ನಾನಂ ಸಮರ್ಪಯಾಮಿ॥

॥ ಪಂಚಾಮೃತ ಸ್ನಾನಾನಂತರಂ ಶುದ್ಧೋದಕಸ್ನಾನಂ ಸಮರ್ಪಯಾಮಿ॥

ವಸ್ತ್ರಯುಗ್ಮಂ ಸಮರ್ಪಯಾಮಿ (ಗೆಜ್ಜೆ ವಸ್ತ್ರ ಸಮರ್ಪಿಸಿ)
ಯಜ್ಞೋಪವೀತಾರ್ಥೇ ಅಕ್ಷತಾನ್ ಸಮರ್ಪಯಾಮಿ(ಮಂತ್ರಾಕ್ಷತೆ)
ಆಭರಣಾರ್ಥೇ ಅಕ್ಷತಾನ್ ಸಮರ್ಪಯಾಮಿ (ಮಂತ್ರಾಕ್ಷತೆ ಏರಿಸಿ)
ನಾನಾವಿಧ ಪರಿಮಳ ದ್ರವ್ಯಾನ್ ಸಮರ್ಪಯಾಮಿ॥

(ಅರಶಿನ ಕುಂಕುಮ ಪೂಜಿಸಿ)

ಲಕ್ಷಣೋಕ್ತಾನ್ ಹರಿದ್ರಾಕ್ತಾನ್ ಅಕ್ಷತಾಂಶ್ಚೋತ್ತಮಾನ್ ಶುಭಾನ್
ಪಂಪಾನದಿ ಗೃಹಾಣೇಮಾನ್ ಶುಭೇ ಶೋಭಾತಿವೃದ್ಧಯೇ॥
ಅಲಂಕರಣಾರ್ಥೇ ಅಕ್ಷತಾನ್ ಸಮರ್ಪಯಾಮಿ॥
॥ ನೇತ್ರಾಂಜನಂ ಸಮರ್ಪಯಾಮಿ ॥ (ಕಾಡಿಗೆ)

## ಅಂಗಪೂಜಾ

| | | |
|---|---|---|
| ಗೋದಾವರ್ಯೈ ನಮಃ | ಪಾದೌ | ಪೂಜಯಾಮಿ |
| ಕೃಷ್ಣಾಯೈ ನಮಃ | ಗುಲ್ಫೌ | ,, |
| ಪಾಪಹಾರಿಣ್ಯೈ ನಮಃ | ಜಂಘೇ | ,, |
| ಸುಭ್ರುವೇ ನಮಃ | ಜಾನುನೀ | ,, |
| ತರಂಗಿಣ್ಯೈ ನಮಃ | ಊರೂ | ,, |
| ತಟದುಜ್ವಲಾಯೈ ನಮಃ | ಕಟಿಂ | ,, |
| ಸುಸ್ತನ್ಯೈ ನಮಃ | ಸ್ತನೌ | ,, |
| ಕಂಬುಗ್ರೀವಾಯೈ ನಮಃ | ಕಂಠಂ | ,, |
| ಸುವಕ್ತ್ರಾಯೈ ನಮಃ | ವಕ್ತ್ರಂ | ,, |
| ವಾರಿಪೂರಾಯೈ ನಮಃ | ಶಿರಃ | ,, |
| ಪಂಪಾಯೈ ನಮಃ | ಸರ್ವಾಗಾಣಿ | ,, |

ದಶಾಂಗಂ ಗುಗ್ಗುಲೋಪೇತಂ ಸುಗಂಧಂ ಚ ಮನೋಹರಂ।
ಸಾಜ್ಯಂ ಪರಿಮಲೋದ್ಭೂತಂ ಧೂಪಂ ಸ್ವೀಕುರು ಪಾವನೀ॥
॥ ಧೂಪಮಾಘ್ರಾಪಯಾಮಿ(ಗಂಧದ ಕಡ್ಡಿ ಬೆಳಗಿಸಿ)
ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾಯೋಜಿತಂಮಯಾ
ಗೃಹಾಣ ದೀಪಂ ದೇವೇಶಿ ಪಂಪಾನದಿ ನಮೋಽಸ್ತುತೇ
॥ ದೀಪಂ ದರ್ಶಯಾಮಿ॥ (ಮಂಗಳಾರತಿ)
॥ ಆಚಮನೀಯಂ ಸಮರ್ಪಯಾಮಿ॥
॥ ಪತ್ರ ಪುಷ್ಪಾಣಿ ಸಮರ್ಪಯಾಮಿ ॥





ಶಾಲ್ಯಾನ್ನಂ ಸ್ವರ್ಣ ಪಾತ್ರಸ್ಥಂ ಶಾಕಾಪೂಪ ಸಮನ್ವಿತಂ ।
ದಧ್ಯಾಜ್ಯ ಪಾಯಸೋಪೇತಂ ನೈವೈದ್ಯಂ ಪ್ರತಿಗೃಹ್ಯತಾಂ ॥

॥ ನೈವೇದ್ಯಂ ಸಮರ್ಪಯಾಮಿ॥

ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ ॥ ಹಸ್ತ ಪ್ರಕ್ಷಾಳನಂ ।
ಮುಖ ಪ್ರಕ್ಷಾಳನಂ । ಪಾದಪ್ರಕ್ಷಾಳನಂ ಪುನರಾಚಮನಂ ಚ
ಸಮರ್ಪಯಾಮಿ ॥

ಪೂಗೀಫಲ ತಾಂಬೂಲಂ ನಿವೇದಯಾಮಿ । ಸುವರ್ಣಪುಷ್ಪ ದಕ್ಷಿಣಾಂ
ಸಮರ್ಪಯಾಮಿ ॥ ಮಂತ್ರ ಪುಷ್ಪಾಂಜಲಿಂ ಸಮರ್ಪಯಾಮಿ॥

ಅಪರಾಧ ಶತಂ ದೇವಿ ಮತ್ಕೃತಂ ಚ ದಿನೇದಿನೇ ।
ಕ್ಷಮಸ್ವ ಪಾವನೇ ದೇವಿ ವ್ರತಸಂಪೂರ್ತಿ ಹೇತವೇ ॥

ಪುನಃ ಪೂಜಾಂ ಕರಿಷ್ಯೇ ॥ ಸರ್ವೋಪಚಾರ ಪೂಜಾಃ ಸಮರ್ಪಯಾಮಿ ॥ ಅನಯಾ ಪಂಪಾಪೂಜಯಾ ಭಗವತೀ ಪಂಪಾ ಸರ್ವಾತ್ಮಕಃ ಪರಮೇಶ್ವರಂ ಚ ॥ ಪ್ರೀಯಂತಾಂ ವರದಾಶ್ಚ ಭವಂತು ॥

## ಶ್ರೀಮತ್ ಹನೂಮತ್ಪೂಜಾ

ಆಚಮ್ಯ॥ ಪೂರ್ವೋಕ್ತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಶ್ರೀಹನುಮದ್ದೇವತಾ ಪೂಜಾಂ ಕರಿಷ್ಯೇ॥(ಮಂತ್ರಾಕ್ಷತೆ ನೀರು ಬಿಟ್ಟು ಸಂಕಲ್ಪ ಮಾಡುವುದು).

(ಪೂಜಾ ಮಂಟಪವನ್ನು ಅಲಂಕರಿಸಿ, ಹಳದಿಯ ರೇಷ್ಮೇವಸ್ತ್ರವನ್ನು ಹಾಸಿ, ಅದರ ಮೇಲೆ ಹನುಮಂತನ ಪ್ರತಿಮೆಯನ್ನು ಇಟ್ಟು ಅಲಂಕರಿಸಬೇಕು. ಕಲಶದ ಮೇಲೆ ಈ ಪ್ರತಿಮೆಯನ್ನಿರಿಸಿ ಅರಶಿನ ಹಚ್ಚಿದ ಹದಿಮೂರು ಎಳೆಯ ದಾರವನ್ನು ಸ್ಥಾಪಿಸಬೇಕು).

ಓಂ ದ್ವಾರಪಾಲಕೇಭ್ಯೋ ನಮಃ । ಅಷ್ಟದಿಕ್ಪಾಲಕೇಭ್ಯೋ ನಮಃ ।

ಓಂ । ಭೂಃ । ಓಂ ಭುವಃ । ಓಂ ಸುವಃ । ಓಂ ಮಹಃ। ಓಂ ಜನಃ।

ಓಂ ತಪಃ । ಓಗ್ಂ ಸತ್ಯಂ । ಓಂ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯತ್॥

ಗಾಯತ್ರ್ಯಾ ಪ್ರೋಕ್ಷ್ಯ॥ ಧ್ಯಾಯೇತ್ ॥

## ವೈಷ್ಣವ ಸಂಪ್ರದಾಯ ಪ್ರಕಾರ

**ಧ್ಯಾನಂ :** ಉದ್ಯದ್ರವಿಪ್ರಕರ ಸನ್ನಿಭಮಚ್ಯುತಾಂಕೇ
ಸ್ವಾಸೀನಮಸ್ಯ ನುತಿನಿತ್ಯ ವಚಃ ಪ್ರವೃತ್ತಿಮ್ ।
ಧ್ಯಾಯೇದ್ ಗದಾಭಯಕರಂ ಸುಕೃತಾಂಜಲಿಂ ತಂ
ಪ್ರಾಣಂ ಯಥೇಷ್ಟ ತನು ಮುನ್ನತ ಕರ್ಮಶಕ್ತಿಮ್ ॥

## ಇತರ ಸಂಪ್ರದಾಯುಗಳು

ಮನೋಜವಂ ಮಾರುತತುಲ್ಯವೇಗಂ
ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಠಂ
ವಾತಾತ್ಮಜಂ ವಾನರ ಯೂಥ ಮುಖ್ಯಂ
ಶ್ರೀರಾಮದೂತಂ ಶಿರಸಾ ನಮಾಮಿ॥
ಧ್ಯಾಯಾಮಿ । ಧ್ಯಾನಂ ಸಮರ್ಪಯಾಮಿ

ಸೂಚನೆ : (ಮೇಲಿನ ಧ್ಯಾನ ಶ್ಲೋಕಗಳನ್ನು ಆಯಾ ಸಂಪ್ರದಾಯಕ್ಕೆ ತಕ್ಕಂತೆ ಹೇಳಿಕೊಳ್ಳಬಹುದು.)

## ಪ್ರಾಣಪ್ರತಿಷ್ಠೆ

ಅಸುನೀತೇ ಪುನರಸ್ಮಾಸು ಚಕ್ಷುಃ ಪುನಃ ಪ್ರಾಣಮಿಹನೋ ಧೇಹಿ ಭೋಗಂ। ಜ್ಯೋಕ್ಪಶ್ಯೇಮ ಸೂರ್ಯಮುಚ್ಚರಂತ ಮನುಮತೇ ಮೃಡಯಾನಸ್ವಸ್ತಿ॥

ಸ್ವಾಮಿನ್ ರಾಮಪ್ರಿಯತಮ ಯಾವತ್ಪೂಜಾವಸಾನಕಂ ।
ತಾವತ್ತ್ವಂ ಪ್ರೀತಿ ಭಾವೇನ ಬಿಂಬೇಸ್ಮಿನ್ ಸನ್ನಿಧಿಂಕುರು ॥

ಆವಾಹಿತೋ ಭವ । ಸ್ಥಾಪಿತೋ ಭವ । ಸನ್ನಿಹಿತೋ ಭವ । ಸನ್ನಿರುದ್ಧೋ ಭವ । ಅವಕುಂಠಿತೋ ಭವ । ಸುಪ್ರಸನ್ನೋ ಭವ । ವರದೋ ಭವ । ಶಾಂತೋ ಭವ । ಪ್ರಸೀದ ಪ್ರಸೀದ ಪ್ರಸೀದ ॥

॥ ಶ್ರೀಹನೂಮತ್ ಪ್ರಾಣಪ್ರತಿಷ್ಠಾಪನ ಮುಹೂರ್ತೋಽಸ್ತು
ಸುಮುಹೂರ್ತೋಽಸ್ತು ॥

ಆವಾಹನಂ॥ ಆಗಚ್ಛ ಹನುಮದ್ದೇವ ಅಂಜನಾಗರ್ಭಸಂಭವ ।
ಪೂಜಾ ಸಮಾಪ್ತಿ ಪರ್ಯಂತಂ ಭವಸನ್ನಿಹಿತೋ ಮುದಾ ॥
॥ ಆವಾಹಯಾಮಿ ॥(ಮಂತ್ರಾಕ್ಷತೆ ಏರಿಸಿ)

ಜಿತೇಂದ್ರಿಯ ನಮಸ್ತೇಽಸ್ತು ಪ್ರಸೀದ ಜಗತಾಂ ಪತೇ ।
ರತ್ನಸಿಂಹಾಸನಂ ತುಭ್ಯಂ ದಾಸ್ಯಾಮಿ ಹನುಮತ್‌ಪ್ರಭೋ ॥
॥ ರತ್ನಸಿಂಹಾಸನಂ ಸಮರ್ಪಯಾಮಿ ॥

ಯೋಗಿಧ್ಯೇಯಾಂಘ್ರಿ ಪದ್ಮಾಯ ಕಪೀನಾಂ ಪತಯೇ ನಮಃ ।
ಪಾದ್ಯಂ ಮಯಾರ್ಪಿತಂ ದೇವ ಗೃಹಾಣ ವರದಾಭಯ ॥
॥ ಪಾದ್ಯಂ ಸಮರ್ಪಯಾಮಿ॥

ಲಕ್ಷ್ಮಣ ಪ್ರಾಣ ಸಂರಕ್ಷ ಸೀತಾಶೋಕವಿನಾಶನ ।
ಗೃಹಾಣಾರ್ಘ್ಯಂ ಮಯಾದತ್ತಂ ವಾತಾತ್ಮಜ ನಮೋಽಸ್ತುತೇ ॥
॥ ಅರ್ಘ್ಯಂ ಸಮರ್ಪಯಾಮಿ ॥

